(ಆಚಾರ್ಯ ಶ್ರೀಮಧ್ವರ ಕೃತಿಗಳ ಸಂಕ್ಷಿಪ್ತ ಪರಿಚಯ)




ಲೇಖಕರು :

**ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯ** ಎಂ.ಎ.ಪಿ.ಹೆಚ್‌ಡಿ.



ಐತರೇಯ ಪ್ರಕಾಶನ ವ್ಯಾಸನಕೆರೆ

ಶ್ರೀ ವ್ಯಾಸ ಮಧ್ವ ಸೇವಾಪ್ರತಿಷ್ಠಾನದ ಪ್ರಕಾಶನ ವಿಭಾಗ

[illegible] ನಂ.67, [illegible] ರಸ್ತೆ, ಹನುಮಂತನಗರ, ಬೆಂಗಳೂರು-560019

ಸರ್ವಮೂಲ-ಸುಧಾ ಮಂಗಲಮಹೋತ್ಸವ ಹಾಗೂ

ಸರ್ವಮೂಲ ಪ್ರಕಾಶನ ಸಮಾರಂಭ ಸ್ಮಾರಕ ಪ್ರಕಾಶನ

# ಸರ್ವಮೂಲ-ಸುಧಾ

(ಆಚಾರ್ಯ ಶ್ರೀಮಧ್ವರ ಕೃತಿಗಳ ಸಂಕ್ಷಿಪ್ತ ಪರಿಚಯ)

ಲೇಖಕರು:

ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯ

ಐತರೇಯ ಪ್ರಕಾಶನ

ಶ್ರೀ ವ್ಯಾಸ ಮಧ್ವ ಸೇವಾಪ್ರತಿಷ್ಠಾನದ ಪ್ರಕಾಶನ ವಿಭಾಗ

ಪಾಜಕ, ನಂ. 67, ಐವತ್ತಡಿ ರಸ್ತೆ, ಹನುಮಂತನಗರ, ಬೆಂಗಳೂರು- 560019.

**SARVAMOOLA-SUDHA**—(Sarva Mula-Sudha Mangala- mahostava and Sarvamoola Prakashana Samarambha Smaraka Prakashana) by Vidyavachaspati, Sastrapravachanakesari, Darsanarathna, Sacchastravichaksanaratnam, Panditaratnam, Mahabharatarathnam, Jnanaratnakara Dr. Vyasanakere Prabhanjanacharya, M.A., Ph.D. Professor and Head of the department of Sanskrit, Govt. Arts College, Bangalore, Published by Aitareya Prakashana Vyasanakere, (Publication wing of Sri Vyasa Madhwa Seva Pratishthana) Pajaka, No. 67, Fifty feet Road, Hanumanthanagar, Bangalore-560 019.

First Edition : 1999



Price : Rs. 50/-

Typeset(DTP) at: Tulasi Impressions,
Bangalore-560 078. Phone: 6649750

# ಮುನ್ನುಡಿ

ಶ್ರೀ ಮಧ್ವಾಚಾರ್ಯರು ಜಗತ್ತು ಕಂಡ ಅಪ್ರತಿಮ ದಾರ್ಶನಿಕರು, ಭಗವಂತನ ಪಾರಮ್ಯ, ವಿಶ್ವಸತ್ಯತ್ವಗಳನ್ನು ಸಾರಿದ ವಿಶ್ವಗುರುಗಳು. ವಾಯುದೇವರ ತೃತೀಯಾವತಾರವಾದ ಅವರು ಜಗತ್ತಿನ ಉಸಿರಾದರೆ, ಅವರ ಕೃತಿಗಳು ಅಧ್ಯಾತ್ಮದ ಉಸಿರು. ಅವರ ಆಕೃತಿಯಂತೆ ಕೃತಿಗಳೂ ಅಪೂರ್ವ, ಅನನ್ಯ. ಸಮಗ್ರತೆ, ಪೂರ್ಣತೆ ವಿಷಯವೈಪುಲ್ಯಗಳಲ್ಲಿ ಶ್ರೀವೇದವ್ಯಾಸರ ಅನಂತರದ ಸ್ಥಾನ ಅವರದ್ದೇ. ಅವರು ನಿಜವಾದ ಅರ್ಥದಲ್ಲಿ "ಅಭಿನವ ವೇದವ್ಯಾಸರು".

"ಸರ್ವಮೂಲ" ಎಂಬುದಾಗಿ ಪ್ರಸಿದ್ಧವಾದ ಅವರ ಕೃತಿಗಳು ವೇದ, ಉಪನಿಷತ್ತು, ಗೀತೆ, ಬ್ರಹ್ಮಸೂತ್ರ, ಮಹಾಭಾರತ, ರಾಮಾಯಣ, ಭಾಗವತ, ಪಂಚರಾತ್ರ, ಬ್ರಹ್ಮತರ್ಕ, ತಂತ್ರಸಾರ ಮೊದಲಾದ ಸಕಲಮೂಲಗ್ರಂಥಗಳ "ಭಾವದೀಪಗಳು". ಶ್ರೀಮದಾಚಾರ್ಯರ ಪ್ರತಿಯೊಂದು ಕೃತಿಯೂ ಅವರ ಪ್ರತಿಬಿಂಬ. ನಿಜವಾದ ಅರ್ಥದಲ್ಲಿ ಅವರ "ಸುವರ್ಣಪ್ರತೀಕ" ಸಾಲಿಗ್ರಾಮ, ತುಳಸಿಗಳಂತೆ ಜಿಜ್ಞಾಸುಗಳ ಮನೆ ಮನೆಗಳಲ್ಲಿ ಇರಲೇಬೇಕಾದ ಅಮೂಲ್ಯ ನಿಧಿ. ಅವುಗಳ ಅಧ್ಯಯನದಂತೆ ಅವುಗಳ ನಿತ್ಯ ಪೂಜೆಯೂ ಸರ್ವಮಂಗಲಕಾರಕ, ಸರ್ವಾನಿಷ್ಟನಿವಾರಕ. ಅವುಗಳನ್ನು ಓದಿದವರು ಪೂಜಿಸುತ್ತಾರೆ, ಪೂಜಿಸುವವರು ಓದುವಂತಾಗುತ್ತಾರೆ.

ಸರ್ವಮೂಲ-ಸುಧಾ ಆಚಾರ್ಯ ಶ್ರೀಮಧ್ವರ ಸರ್ವಮೂಲಗ್ರಂಥಗಳನ್ನು ಸಂಕ್ಷೇಪವಾಗಿ ಪರಿಚಯಿಸುವ ಕೃತಿ. ಶ್ರೀಮದಾಚಾರ್ಯರು ತತ್ತ್ವಜ್ಞಾನ ಪ್ರಪಂಚಕ್ಕೆ ಹೇಗೋ ಹಾಗೆಯೇ ಸಾರಸ್ವತ ಹಾಗೂ ಸಂಶೋಧನಾ ಪ್ರಪಂಚಕ್ಕೆ ನೀಡಿರುವ ಕೊಡುಗೆಯೂ ಅಪೂರ್ವ. ಏಕಾಂಗಿಯಾಗಿ ಸನಾತನಪರಂಪರೆಯನ್ನು ಪುನರುಜ್ಜೀವನಗೊಳಿಸಿದ ಅಪ್ರತಿಮ ವ್ಯಕ್ತಿತ್ವ ಅವರದ್ದು. ಅವರ ಸಿದ್ಧಾಂತ ಹಾಗೂ ಕೃತಿಗಳನ್ನು ಆಧುನಿಕ ಪ್ರಪಂಚ ಅಷ್ಟಾಗಿ ಗಮನಿಸದೇ ಹೋಗಿರುವುದು ನಿಜಕ್ಕೂ ಜ್ಞಾನಪ್ರಪಂಚಕ್ಕೆ ಆಗಿರುವ ದೊಡ್ಡ ಅಪಚಾರ. ಅವರ ಕೃತಿಗಳ ಅಧ್ಯಯನವನ್ನು ಮಾಡದ ಹೊರತು ವೈದಿಕ ತತ್ತ್ವಗಳ ಆಂತರ್ಯ ಎಂದೂ ತೆರೆದುಕೊಳ್ಳಲಾರದು. ಆದಕ್ಕೆಂದು ಅವರ ಕೃತಿಗಳ ಸಿದ್ಧಾಂತದ ಪ್ರಸಾರಕಾರ್ಯವು ವ್ಯಾಪಕವಾಗಿ ಆಂದೋಲನರೂಪದಲ್ಲಿ ಇಂದು ನಡೆಯ ಬೇಕಾಗಿದೆ.

ಡಾ. ಎಸ್.ಎನ್. ದಾಸಗುಪ್ತ ಅವರು ಮಧ್ವದರ್ಶನದ ಹಿರಿಮೆಯ ಬಗ್ಗೆ ತೆಗೆದಿರುವ ಉದ್ಗಾರದಿಂದಾದರೂ ಚಿಂತಕರು ಎಚ್ಚರಗೊಳ್ಳಬೇಕಾದ ಆವಶ್ಯಕತೆ ಯಿದೆ :

............In my opinion Jaya-tirtha and Vyasatirtha present the highest dialectical skill in Indian thought There is a general belief amongst many that monism of Sankara presents the final phase of Indian thought. The realistic and dualistic thought of the Samkhya and the yoga had undergone a compromise with monism both in the Puranas and in the hands of the later writers. But the readers of the present volume who will be introduced to the philosophy of Jaya-tirtha and particularly of Vyasa-tirtha will realize the strength and uncompromising impressive- ness of the dualistic position. The logical skill and depth of acute dialectical thinking shown by Vyasa-tirtha stands almost unrivalled in the whole field of Indian thought. ........ .. It is hoped that the treatment of the philosophy of Madhva and his followers undertaken in the present volume will give new light to students of Indian thought and will present many new aspects of dialectical logic hitherto undiscovered in Indian or European thought. -History of Indian Philosophy by **Dr. S.N. Dasgupta**

Professor of Sanskrit Oxford University (Preface IV-Vol.)

ಈ ದಿಸೆಯಲ್ಲಿ ಒಂದು ಚಿಕ್ಕ ಪ್ರಯತ್ನವಾಗಿ ಈ ಸರ್ವಮೂಲ-ಸುಧಾ ಕೃತಿಯು ಸಿದ್ಧವಾಗಿದೆ. ಕಳೆದ ವರ್ಷ ನಡೆದ ಸರ್ವಮೂಲ ಹಾಗೂ ನ್ಯಾಯಸುಧಾಗ್ರಂಥಗಳ ಮಂಗಲ ಮಹೋತ್ಸವದ ಕಾಲಕ್ಕೆ ಈ ಕೃತಿ ಪ್ರಕಟವಾಗಬೇಕಿತ್ತು. ಆದರೆ ಅನಿವಾರ್ಯ ಕಾರಣಗಳಿಂದ ಅದು ಸಾಧ್ಯವಾಗಲಿಲ್ಲ. ಇದೀಗ ಎಂದರೆ ಒಂದು ವರ್ಷದಷ್ಟು ವಿಳಂಬವಾಗಿ, ಸರ್ವಮೂಲಗ್ರಂಥಗಳ ಪ್ರಕಾಶನದ ಶುಭ ಸಂದರ್ಭದಲ್ಲಿ ಬೆಳಕು ಕಾಣುತ್ತಿದೆ. ಸರ್ವಮೂಲಗ್ರಂಥಗಳ ಪರಿಚಯದೊಂದಿಗೆ ಅವುಗಳ ಆದ್ಯಂತ ಶ್ಲೋಕಗಳ ಸಂಗ್ರಹ, ಗ್ರಂಥಮಾಲಿಕಾ ಸ್ತೋತ್ರಗಳು, ಮತ್ತು ಶ್ರೀಮದಾಚಾರ್ಯರಿಂದ ಉದ್ಧೃತವಾಗಿರುವ ಅಪೂರ್ವ ಗ್ರಂಥಗಳ ಪಟ್ಟಿ ಹಾಗೂ ಶ್ರೀಮಧ್ವ ಪ್ರಶಸ್ತಿ ಇವುಗಳನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

ಇದನ್ನು ಶ್ರೀವ್ಯಾಸಮಧ್ವ ಸೇವಾಪ್ರತಿಷ್ಠಾನದ ಪ್ರಕಾಶನ ವಿಭಾಗವಾದ ಐತರೇಯ ಪ್ರಕಾಶನವು ಪ್ರಕಟಿಸುತ್ತಿದೆ. ಡಿ.ಟಿ.ಪಿ. ಕಾರ್ಯವನ್ನು ತುಳಸಿ ಇಂಪ್ರೆಷನ್ಸ್‌ನ ಶ್ರೀಮತಿ ದೇವಿಕಾ ಅವರು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಇವರಿಗೆ ನನ್ನ ಕೃತಜ್ಞತೆಗಳು.

ಬೆಂಗಳೂರು

31-1-1999 **ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ**

ಮಾಘ(ವ್ಯಾಸ)ಪೂರ್ಣಿಮಾ

# ಪರಿವಿಡಿ

# ಸರ್ವಮೂಲ-ಸುಧಾ

## ಶ್ರೀಮಧ್ವಾಚಾರ್ಯರು ಮತ್ತು ಅವರ ಕೃತಿಗಳು

ಶ್ರೀಮಧ್ವಾಚಾರ್ಯರು ಜಗತ್ತು ಕಂಡ ಅಪ್ರತಿಮ ತತ್ತ್ವಜ್ಞಾನಿಗಳು, ಅಪಾರ ಪ್ರತಿಭೆ, ಅನುಪಮಪಾಂಡಿತ್ಯ, ಸಲ್ಲಕ್ಷಣಭರಿತದೇಹ, ಅಪಾರಭಗವದ್ಭಕ್ತಿ ಮತ್ತು ಅರ್ಹಜನರ ಸಂಕಷ್ಟವನ್ನು ಪರಿಹರಿಸಿ ಸಂತುಷ್ಟರನ್ನಾಗಿಸುವ ಕಾರುಣ್ಯ ಮೊದಲಾದ ಸದ್ಗುಣಗಳಿಂದಾಗಿ ಅವರು ಅದ್ವಿತೀಯ ತತ್ತ್ವಪ್ರಸಾರಕಗುರುಗಳಾಗಿ ಮಾನ್ಯರಾಗಿದ್ದಾರೆ. ಅವತರಿಸಿದ್ದು ಉಡುಪಿಯ ಬಳಿಯ ಚಿಕ್ಕಹಳ್ಳಿ ಪಾಜಕದಲ್ಲಿ, ಸ್ವೀಕರಿಸಿದ್ದು ಸರ್ವೋನ್ನತವಾದ ಪರಮಹಂಸಾಶ್ರಮ, ಸಂಚರಿಸಿದ್ದು, ಆಸೇತು ಹಿಮಾಲಯಪರ್ಯಂತ (ಮತ್ತು ಅದಕ್ಕೂ ಆಚೆಯ ಉತ್ತರಬದರಿಯವರೆಗೆ), ಬರೆದದ್ದು ಸಕಲಶಾಸ್ತ್ರಗಳ ಮರ್ಮವನ್ನು, ತೋರಿಸಿದ್ದು ಪರಗತಿಯ ರಾಜಮಾರ್ಗವನ್ನು, ನೆಲೆಸಿದ್ದು ಸಕಲಜಿಜ್ಞಾಸುಗಳ ಮನೋಮಂದಿರದಲ್ಲಿ, ಪ್ರವರ್ತಿಸಿದ್ದು ಅನಾದಿವೈಷ್ಣವವೇದಾಂತವಾದ ತತ್ತ್ವವಾದವನ್ನು, ಬೆಳೆಸಿದ್ದು ಅಂತಹ ಸತ್ಪರಂಪರೆಯನ್ನು, ತತ್ತ್ವಪ್ರಸಾರಕ್ಕಾಗಿ ಸ್ಥಾಪಿಸಿದ್ದು ಒಂಭತ್ತು ಪೀಠಗಳನ್ನು, ಸಂಪಾದಿಸಿದ್ದು ಶ್ರೀ ವಿಷ್ಣುತೀರ್ಥರು, ಪದ್ಮನಾಭತೀರ್ಥರು, ನರಹರಿತೀರ್ಥರು, ತ್ರಿವಿಕ್ರಮಪಂಡಿತಾಚಾರ್ಯರು ಮೊದಲಾದ ಶ್ರೇಷ್ಠಶಿಷ್ಯವರ್ಗವನ್ನು, ಉಡುಪಿಯಲ್ಲಿ ಪ್ರತಿಷ್ಠಾಪಿಸಿದ್ದು ದ್ವಾರಕೆಯಿಂದ ತಮಗಾಗಿ ಒಲಿದುಬಂದ ಶ್ರೀ ರುಕ್ಮಿಣೀ ಕರಾರ್ಚಿತ ಶ್ರೀಕೃಷ್ಣಪ್ರತಿಮೆಯನ್ನು, ಇಂದೂ ನೆಲೆಸಿರುವುದು ಉತ್ತರಬದರಿಯ ಶ್ರೀ ವೇದವ್ಯಾಸಸನ್ನಿಧಾನದಲ್ಲಿ - ಇದಿಷ್ಟು ಸಂಕ್ಷಿಪ್ತವಾಗಿ ಅವರ ಜೀವನಗಾಥೆ. ಪದ್ಮನಾಭತೀರ್ಥರಂತಹ ಪರಮಹಂಸರು, ತ್ರಿವಿಕ್ರಮಪಂಡಿತಾಚಾರ್ಯರಂತಹ ಗೃಹಸ್ಥಶೇಖರರು, ಜಯಸಿಂಹರಾಜನಂತಹ ಅರಸ, ಕಲ್ಯಾಣೀದೇವಿಯಂತಹ ಮಹಿಳಾಮಣಿಗಳು ಮೊದಲಾದ ಅಸಂಖ್ಯ ಶಿಷ್ಯವರ್ಗ ಅವರ ಉಪದೇಶಧಾರೆಯಲ್ಲಿ ಮಿಂದು ಪುನೀತವಾಯಿತು. ಜಿಜ್ಞಾಸುಗಳಾಗಿ ಆರ್ತರಾಗಿ ಬಳಿಬಂದ ಯಾರನ್ನೂ ದೂರಮಾಡದೆ ಕರುಣೆಯಿಂದ ಕರೆದು ಉದ್ಧಾರದ ಹಾದಿತೋರಿದ ವಿಶ್ವಗುರು ಅವರು. ವೇದವೇದಾಂತಗಳಿರಲಿ, ತರ್ಕವ್ಯಾಕರಣಾದಿ ವೇದಾಂಗಗಳಿರಲಿ, ಸಂಗೀತಶಾಸ್ತ್ರವಿರಲಿ, ವಿವಿಧಭಾಷಾಪ್ರಪಂಚವಿರಲಿ, ಕವಿತಾಪ್ರತಿಭೆಯಿರಲಿ ಎಲ್ಲದರಲ್ಲೂ ಅವರು ಪರಿಪೂರ್ಣಪ್ರಮತಿ. ಗಂಗಾನದಿಯಮೇಲೆ ನಡೆಯಬಲ್ಲ, ಹಿಮಾಲಯಪರ್ವತಶ್ರೇಣಿಯಲ್ಲಿ ಹಾರುತ್ತಾ ಸಾಗಬಲ್ಲ, ಭಾರದಬಂಡೆಗಳನ್ನು

ಒಂದೇ ಕೈಯಲ್ಲಿ ಎತ್ತಿ ಬೇಕಾದಸ್ಥಳದಲ್ಲಿ ಇರಿಸಬಲ್ಲ, ಎಂತಹ ಜಟ್ಟಿಗಳನ್ನು ಸುಮ್ಮನೆ ಕುಳಿತಿದ್ದೇ ಪರಾಭವಗೊಳಿಸಬಲ್ಲ, ವಿಧರ್ಮೀಯರನ್ನೂ, ತತ್ತ್ವಾರ್ಥಗರ್ಭಿತವಾಗಿ ತಮ್ಮ ಅಪೂರ್ವಮಾತುಗಾರಿಕೆಯಿಂದ ಕ್ಷಣಕಾಲದಲ್ಲೇ ಪ್ರಭಾವಿತರಾಗಿಸಬಲ್ಲ ಅನ್ಯಾದೃಶ ಯೋಗಶಕ್ತಿ ಅವರದ್ದು. ಶ್ರೀರಾಘವೇಂದ್ರ ಸ್ವಾಮಿಗಳು ತಮ್ಮ ಪ್ರಾತಃಸಂಕಲ್ಪಗದ್ಯದಲ್ಲಿ ವರ್ಣಿಸಿರುವಂತೆ ಶ್ರೀಮದಾಚಾರ್ಯರು ಸಂಸಿದ್ಧಸಪ್ತಕೋಟಿಮಹಾಮಂತ್ರರಾದ ಯೋಗೀಶ್ವರರು.

ಅವರ ಗ್ರಂಥರಾಶಿಯೂ ವೈವಿಧ್ಯಮಯವಾದದ್ದು. ಆರಂಭದ ತತ್ತ್ವಜಿಜ್ಞಾಸುಗಳನ್ನು ಆಳವಾದ ಚಿಂತನೆಗೆ ಅಣಿಗೊಳಿಸಲು ಪ್ರಮಾಣಲಕ್ಷಣ, ಕಥಾಲಕ್ಷಣ, ತತ್ತ್ವಸಂಖ್ಯಾನ, ತತ್ತ್ವವಿವೇಕ, ಉಪಾಧಿಖಂಡನ, ಮಾಯಾವಾದಖಂಡನ, ಪ್ರಪಂಚಮಿಥ್ಯಾತ್ವಾನುಮಾನಖಂಡನ, ತತ್ತ್ವೋದ್ಯೋತ, ವಿಷ್ಣುತತ್ತ್ವವಿನಿರ್ಣಯ ಮತ್ತು ಕರ್ಮನಿರ್ಣಯ ಎಂಬ ದಶಪ್ರಕರಣಗಳು, ವೇದರಹಸ್ಯವೆಂದು ಮಾನ್ಯವಾದ ಉಪನಿಷತ್ತುಗಳ ರಹಸ್ಯವನ್ನು ತೆರೆದಿಡುವ (ಈಶ, ಕೇನ, ಕಠ, ಷಟ್ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ ಮತ್ತು ಬೃಹದಾರಣ್ಯಕ ಎಂಬ) ದಶೋಪನಿಷದ್ಭಾಷ್ಯಗಳು, ಅತ್ಯುನ್ನತಶಾಸ್ತ್ರಕೃತಿಯಾದ ಬ್ರಹ್ಮಸೂತ್ರಗಳ ಮೇಲೆ ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ಅಣುಭಾಷ್ಯ ಮತ್ತು ನ್ಯಾಯವಿವರಣ ಎಂಬ ನಾಲ್ಕು ಕೃತಿಗಳು, ವೇದಗಳಿಗಿಂತ ಮಿಗಿಲೆನ್ನಿಸಿದ ಮಹಾಭಾರತದ ಮೇಲೆ ಮಹಾಭಾರತತಾತ್ಪರ್ಯ ನಿರ್ಣಯವೆಂಬ ಅನುಪಮಸಂಶೋಧನ ವಿಮರ್ಶನಕೃತಿ, ಭಾರತಕಥಾ, ಚಿತ್ರಕಾವ್ಯ ಸಂಗ್ರಹರೂಪವಾದ ಯಮಕಭಾರತ, ಮಹಾಭಾರತಪಾರಿಜಾತದ ಸಕಲತತ್ತ್ವಗಳ ಮಧುಭೂತವಾದ ಭಗವದ್ಗೀತೆಯ ಮೇಲೆ ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯ ಎಂಬ ಎರಡು ಕೃತಿಗಳು, ಅಪೌರುಷೇಯ ವೇದಗಳಲ್ಲಿ ಪ್ರಥಮಗಣ್ಯವಾದ ಋಗ್ವೇದದ ಮೇಲೆ ಅಧ್ಯಾತ್ಮಾದಿ ಅರ್ಥತ್ರಯಗಳನ್ನು ವಿವೇಚಿಸುವ ಋಗ್ಭಾಷ್ಯ, ತತ್ತ್ವಜ್ಞಾನದ ಸಾಧನೆ ಮತ್ತು ಪ್ರಯೋಗಕ್ಕೆ ನೆರವಾಗುವ ತತ್ತ್ವಗಳನ್ನು ನಿರೂಪಿಸುವ ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ, ಜಯಂತೀ ನಿರ್ಣಯ, ಯತಿಪ್ರಣವಕಲ್ಪ, ತಂತ್ರಸಾರಸಂಗ್ರಹ ಎಂಬ ಆಚಾರಗ್ರಂಥಗಳು, ಮತ್ತು ಕೊನೆಯದಾಗಿ ತಾವು ಪ್ರತಿಪಾದಿಸಿದ ಸಕಲತತ್ತ್ವಗಳನ್ನು ಅನುಸಂಧಾನಕ್ಕೆ ತಂದುಕೊಂಡು ಪರತತ್ತ್ವವಾದ ಭಗವಂತನನ್ನು ಪರಿಪರಿಯಾಗಿ ಸ್ತುತಿಸಲು ಅನುವುಮಾಡಿಕೊಡುವ ದ್ವಾದಶಸ್ತೋತ್ರ ಮತ್ತು ನಖಸ್ತುತಿ (ಮತ್ತು ಕಂದುಕಸ್ತುತಿ)

ಎಂಬ ಸ್ತೋತ್ರರತ್ನಗಳು ಇವಿಷ್ಟು ಸರ್ವಮೂಲವೆಂದು ಪರಂಪರೆ ಕಾಪಾಡಿಕೊಂಡು ಬಂದಿರುವ ಅವರ ಅಮೌಲ್ಯ ಕೃತಿಗಳು.

**ಸೂತ್ರಪ್ರಸ್ಥಾನ ಗ್ರಂಥಗಳು**

೧. ಬ್ರಹ್ಮಸೂತ್ರಭಾಷ್ಯ
೨. ಅಣುಭಾಷ್ಯ
೩. ಅನುವ್ಯಾಖ್ಯಾನ
೪. ನ್ಯಾಯವಿವರಣ

**ಗೀತಾಪ್ರಸ್ಥಾನಗ್ರಂಥಗಳು**

೫. ಗೀತಾಭಾಷ್ಯ
೬. ಗೀತಾತಾತ್ಪರ್ಯನಿರ್ಣಯಃ

**ಉಪನಿಷತ್ಪ್ರಸ್ಥಾನಗ್ರಂಥಗಳು**

೭. ಈಶಾವಾಸ್ಯೋಪನಿಷದ್ಭಾಷ್ಯ
೮. ತಲವಕಾರೋಪನಿಷದ್ಭಾಷ್ಯ
೯. ಕಾಠಕೋಪನಿಷದ್ಭಾಷ್ಯ
೧೦. ಷಟ್ಪ್ರಶ್ನೋಪನಿಷದ್ಭಾಷ್ಯ
೧೧. ಆಥರ್ವಣೋಪನಿಷದ್ಭಾಷ್ಯ
೧೨. ಮಾಂಡೂಕೋಪನಿಷದ್ಭಾಷ್ಯ
೧೩. ತೈತ್ತಿರಿಯೋಪನಿಷದ್ಭಾಷ್ಯ
೧೪. ಮಹೈತರೇಯೋಪನಿಷದ್ಭಾಷ್ಯ
೧೫. ಛಾಂದೋಗ್ಯೋಪನಿಷದ್ಭಾಷ್ಯ
೧೬. ಬೃಹದಾರಣ್ಯಕೋಪನಿಷದ್ಭಾಷ್ಯ

**ಶ್ರುತಿಪ್ರಸ್ಥಾನಗ್ರಂಥ**

೧೭. ಋಗ್ಭಾಷ್ಯ

**ಪ್ರಕರಣಗ್ರಂಥಗಳು**

೧೮. ತತ್ತ್ವಸಂಖ್ಯಾನ
೧೯. ತತ್ತ್ವವಿವೇಕ
೨೦. ಪ್ರಮಾಣಲಕ್ಷಣ
೨೧. ಕಥಾಲಕ್ಷಣ
೨೨. ಉಪಾಧಿಖಂಡನ
೨೩. ಮಾಯಾವಾದಖಂಡನ
೨೪. ಪ್ರಪಂಚಮಿಥ್ಯಾತ್ವಾನುಮಾನಖಂಡನ
೨೫. ತತ್ತ್ವೋದ್ಯೋತ
೨೬. ವಿಷ್ಣುತತ್ತ್ವವಿನಿರ್ಣಯ
೨೭. ಕರ್ಮನಿರ್ಣಯ

**ಇತಿಹಾಸಪ್ರಸ್ಥಾನಗ್ರಂಥಗಳು**

೨೮. ಮಹಾಭಾರತತಾತ್ಪರ್ಯನಿರ್ಣಯಃ
೨೯. ಯಮಕಭಾರತ

**ಪುರಾಣಪ್ರಸ್ಥಾನಗ್ರಂಥ**

೩೦. ಭಾಗವತತಾತ್ಪರ್ಯನಿರ್ಣಯಃ

**ಆಚಾರಗ್ರಂಥಗಳು**

೩೧. ಸದಾಚಾರಸ್ಮೃತಿ
೩೨. ಕೃಷ್ಣಾಮೃತಮಹಾರ್ಣವ
೩೩. ತಂತ್ರಸಾರಸಂಗ್ರಹ
೩೪. ಯತಿಪ್ರಣವಕಲ್ಪ
೩೫. ಜಯಂತೀನಿರ್ಣಯ

**ಸ್ತೋತ್ರಗ್ರಂಥಗಳು**

೩೬. ನಖಸ್ತುತಿ
೩೭. ದ್ವಾದಶಸ್ತೋತ್ರ

# ಮಧ್ವಸಿದ್ಧಾಂತದ ವೈಶಿಷ್ಟ್ಯ

## ವಿಜ್ಞಾನ ತತ್ತ್ವಜ್ಞಾನ

ತತ್ತ್ವಜ್ಞಾನವು ಭಗವಂತನು ಗೀತೆಯಲ್ಲಿ ಉಪದೇಶಿಸಿರುವಂತೆ "ಅಧ್ಯಾತ್ಮ ವಿದ್ಯಾ ವಿದ್ಯಾನಾಂ" ; ವಿದ್ಯೆಗಳ ರಾಜ. ಇತರ ವಿದ್ಯೆಗಳು ಅಂಗಗಳಾದರೆ, ಇದು ಅಂಗಿ; ಅವು ಮಣಿಗಳಾದರೆ ಇದು ಅವುಗಳನ್ನೆಲ್ಲಾ ಪೋಣಿಸಿ ಆಧಾರವಾಗಿರುವ ಸೂತ್ರ; ಇತರ ವಿದ್ಯೆಗಳು ದೇಹವಾದರೆ ಇದು ಅವುಗಳೊಳಗಿನ ಆತ್ಮ; ಎಂದರೆ ಆತ್ಮವಿದ್ಯೆ; ಇತರ ವಿದ್ಯೆಗಳ ಫಲ ಸಾಂತವಾದರೆ ಇದರ ಫಲ ಅನಂತ; ಇತರ ವಿದ್ಯೆಗಳು ಅಂತ್ಯಕಾಲ ಸಮೀಪಿಸುತ್ತ ಬಂದಂತೆ ದೂರವಾಗುತ್ತ ಹೋದರೆ, ಇದು ಹತ್ತಿರವಾಗುತ್ತಬರುತ್ತದೆ. ಇತರ ವಿದ್ಯೆಗಳು ಶಾಖೆಗಳಾದರೆ ಇದು ಎಲ್ಲ ವಿದ್ಯೆಗಳ ತಾಯಿಬೇರಾಗಿದೆ; ಅವೆಲ್ಲ ಇದರ ಇಂದ್ರಿಯಗಳಾದರೆ ಇದು ಅವೆಲ್ಲವುಗಳ ಉಸಿರೇ ಆಗಿದೆ.

ತತ್ತ್ವಜ್ಞಾನವು ಇಂದಿಗೆ ಪ್ರಸ್ತುತವೇ? ಇದು ವೈಜ್ಞಾನಿಕಯುಗ, ಯಂತ್ರ-ತಂತ್ರಗಳ ಯುಗ, ಎಂದ ಮೇಲೆ ಇಂದು ಇದು ಏತಕ್ಕೆ ಆವಶ್ಯಕವೆಂಬ ಜಿಜ್ಞಾಸೆ ಅನೇಕರದು; ಮತ್ತೆ ಕೆಲವರದು ಅನ್ನ ಬಟ್ಟೆಗಳಿಗಾಗದೆ ಬೌದ್ಧಿಕ ಕಸರತ್ತಾಗಿ ಮಾತ್ರ ಉಳಿಯುವ ಇದರಿಂದ ನಿತ್ಯಜೀವನಕ್ಕೆ ಏನು ಪ್ರಯೋಜನ? ಎಂಬ ವಿಚಾರ; ಸಶರೀರನಾಗಿ ಬೇರೆ ಗ್ರಹಗಳಿಗೆ ತಲುಪಬಲ್ಲ ಹಂತದಲ್ಲಿ ಮಾನವನಿರುವಾಗ, ದೇವರು ಧರ್ಮ ಮೊದಲಾದವುಗಳು ಇಂದು ಅಪ್ರಸ್ತುತ ಎಂಬುದು ಮತ್ತೆ ಕೆಲವರ ತೀರ್ಮಾನ.

ಇಂತಹ ಪ್ರಶ್ನೆಗಳ ಆಘಾತಕ್ಕೆ ಸಿಕ್ಕ ಹೆಚ್ಚು ಜನರು, ಅದರಲ್ಲೂ ಯುವ ವರ್ಗದವರು ಇದೆಲ್ಲಾ ಉದ್ಯೋಗವಿಲ್ಲದವರ ಕಾಲವ್ಯಯದ ಮಾರ್ಗ, ಜೀವನದಲ್ಲಿ ವೈಫಲ್ಯ ಕಂಡ ಜನಗಳ ಪಲಾಯನವಾದ; ದೇಶದ ಪ್ರಗತಿಗೆ ಮಾರಕ; ಇದೆಲ್ಲ ಸಮಾಜದ ಉನ್ನತಿಗೆ ಪ್ರತಿಬಂಧಕ ಎಂದು ಭಾವಿಸುವ ಅಪಾಯವುಂಟು. ಇಂತಹ ಜನ ಧಾರ್ಮಿಕ ಆಚಾರ-ವಿಚಾರಗಳ ಬಗ್ಗೆ ವ್ರತ-ಉಪವಾಸಗಳ ಬಗ್ಗೆ ಅನಾದರ, ಅಪಹಾಸ್ಯಭಾವ ಮೂಡಿಸಿಕೊಳ್ಳುವರು. ಪ್ರತಿಭಟಿಸಲೂ ತೊಡಗುವರು; ಇಂತಹವರ ಮೂದಲಿಕೆಗೆ ಗುರಿಯಾಗಿ ಅನುಷ್ಠಾನ ಇರಿಸಿಕೊಂಡಿರುವವರೂ ಸಹ ಅವನ್ನೆಲ್ಲ ತೊರೆಯುವ ಅಪಾಯವೂ ಉಂಟು.

ಇಂತಹ ಪ್ರಶ್ನೆಗಳಲ್ಲೆಲ್ಲ ಎದ್ದು ಕಾಣುವ ಮೂಲಭೂತವಾದ ತಪ್ಪು

ತಿಳುವಳಿಕೆ 'ವಿಜ್ಞಾನ ಒಂದು ಪರಿಪೂರ್ಣವಾದ ಶಾಸ್ತ್ರ; ಅದು ವಿಶ್ವದ ರಹಸ್ಯಗಳನ್ನೆಲ್ಲ ಬಯಲುಮಾಡಿ, ದೇವರು, ಧರ್ಮ ಮೊದಲಾದ ನಂಬಿಕೆಗಳನ್ನೆಲ್ಲ ಪೊಳ್ಳು ಎಂದು ಸಾರಿದೆ' ಎಂಬುದು; ಇದು ಅವರಿಗೆಲ್ಲ ಬರಲು ಮುಖ್ಯಕಾರಣ ಅವರೆಲ್ಲ ಸ್ವತಃ ವಿಜ್ಞಾನವನ್ನು ಓದದೇ, ಈ ಬಗ್ಗೆ ಪ್ರಸಿದ್ಧ ವಿಜ್ಞಾನಿಗಳ ಅಭಿಪ್ರಾಯವನ್ನು ಗಮನಿಸದೆ ಇರುವುದು.

ವಿಜ್ಞಾನದ ಇತಿ-ಮಿತಿಗಳನ್ನು ವಿಜ್ಞಾನಿಗಳೇ ಸ್ಪಷ್ಟವಾಗಿ ಒಪ್ಪಿರುವರು; ಒಬ್ಬ ವಿಜ್ಞಾನಿಯ ಮಾತು ಹೀಗಿದೆ "ವಿಜ್ಞಾನವು ಎಲ್ಲವನ್ನೂ ವಿವರಿಸಿದೆ ಎಂಬುದು ತಪ್ಪು ತಿಳುವಳಿಕೆ; ನಿಜವಾಗಿ ಹೇಳಬೇಕೆಂದರೆ ವಿಜ್ಞಾನವು ಏನನ್ನೂ ವಿವರಿಸಿಯೇ ಇಲ್ಲ. ವಿಜ್ಞಾನಿಗಳ ಗುರಿ ನಿಜಕ್ಕೂ ಎಲ್ಲವನ್ನೂ ಏಕೆ? ಎಂದು ವಿವರಿಸುವುದು ಆಗಿಯೇ ಇಲ್ಲ. 'ಅದು ಹೇಗೆ'? ಎಂಬ ಪ್ರಶ್ನೆಗಷ್ಟೆ ವಿಜ್ಞಾನದ ಉತ್ತರ ಎಂಬುದು ಸಹ ಅದೇ ವಿಜ್ಞಾನದ ಮಾತಾಗಿದೆ. ಜಗತ್ತಿನ ಪ್ರಸಿದ್ಧ ವಿಜ್ಞಾನಿಗಳಲ್ಲಿ ಬಹುಪಾಲು ಜನ ಮೂಲತಃ ದಾರ್ಶನಿಕರು ಎಂಬುದನ್ನು ಸಹ ಇಲ್ಲಿ ಒತ್ತಿ ಹೇಳಬೇಕಾಗಿದೆ. Theory of relativity ಯಂತಹ ಮಹತ್ತ್ವದ ಕೊಡುಗೆ ನೀಡಿದ Einstein ಎಂದೂ ನಾಸ್ತಿಕನಾಗಿರಲಿಲ್ಲ. ಮತ್ತೊಬ್ಬ ಪ್ರಸಿದ್ಧ ದಾರ್ಶನಿಕ ಡೇಕಾರ್ಟ್ Co-ordinate Geometry ಯನ್ನು ರೂಪಿಸಿದ ಗಣಿತಶಾಸ್ತ್ರಜ್ಞ; Pythogorus, Aristotle ಮೊದಲಾದವರು ಸಹ ಮೂಲತಃ ದಾರ್ಶನಿಕರೇ ಆಗಿದ್ದ ವಿಜ್ಞಾನಿಗಳು. ಇವೆಲ್ಲ ಒಂದೆರಡು ಉದಾಹರಣೆಗಳು ಮಾತ್ರ.

ವಿಜ್ಞಾನದ ಕಾರ್ಯಕ್ಷೇತ್ರ ಮತ್ತು ತತ್ತ್ವಜ್ಞಾನದ ಕಾರ್ಯಕ್ಷೇತ್ರ ಎರಡೂ ಸಂಪೂರ್ಣ ಬೇರೆ ಬೇರೆ ಎಂಬ ಮೂಲಭೂತ ವಿಚಾರವನ್ನು ಅರಿತರೆ ಇಂತಹ ಗೊಂದಲಕ್ಕೆ ಅವಕಾಶವೇ ಇರುವುದಿಲ್ಲ. ವಿಜ್ಞಾನದ ಪರಿಧಿ ಐಂದ್ರಿಯಕ ಪ್ರಪಂಚವಾದರೆ, ತತ್ತ್ವಜ್ಞಾನದ್ದು ಅತೀಂದ್ರಿಯ ಪ್ರಪಂಚ. ವಿಜ್ಞಾನ ಕೈಚೆಲ್ಲಿ ಕುಳಿತಲ್ಲಿ, ತತ್ವಜ್ಞಾನ ಉದಯಿಸುತ್ತದೆ. "Philosophy starts where Science ends" ಎಂಬ ಮಾತನ್ನು ಇಲ್ಲಿ ಗಮನಿಸಬೇಕು. ಪಾಶ್ಚಾತ್ಯರು ತತ್ತ್ವಜ್ಞಾನವನ್ನು Metaphysics ಎಂದು ಕರೆದಿರುವುದು ಸಹ ಇದಕ್ಕೆ ಪೋಷಕವಾಗಿದೆ. ನೆಲದ ಮೇಲೆ ಚಲಿಸುವ ಬಸ್ಸು, ರೈಲುಗಳು ಗಗನದಲ್ಲಿ ಹಾರುವ ವಿಮಾನಕ್ಕೆ ಎಂತು ತಾನೆ ಅಡ್ಡಿಯಾಗಲು ಸಾಧ್ಯ?

ತಾತ್ಪರ್ಯವಿಷ್ಟು : ವಿಜ್ಞಾನವೆಂದೂ ಧರ್ಮ, ದೇವರು ಮೊದಲಾದ ತಾತ್ವಿಕ ವಿಚಾರಗಳನ್ನು ಅಪ್ರಾಮಾಣಿಕ ಎಂದಾಗಲೀ, ಅರ್ಥಹೀನ ಎಂದಾಗಲೀ ನಿರ್ಣಯಿಸಿಲ್ಲ. ಹಾಗೆ ತಿಳಿದ ಜನರು ಬೇಕಾದರೆ ಅವನ್ನು ಬಿಡಲಿ, ಆದರೆ ವಿಜ್ಞಾನ

ಹೀಗೆ ಹೇಳಿದೆ ಎಂಬ ಭ್ರಮೆಯನ್ನು ಮಾತ್ರ ಎಂದೂ ಹೊಂದಬೇಕಿಲ್ಲ. (ಇಂದಿನ ಅನೇಕರಲ್ಲಿ ತತ್ತ್ವಜ್ಞಾನವನ್ನು ನಿಂದಿಸುವುದೇ ವೈಜ್ಞಾನಿಕ ದೃಷ್ಟಿ, ಎಂಬ ಗಾಢ ತಪ್ಪು ಕಲ್ಪನೆಯೇ ತುಂಬಿದೆ) ವಿಜ್ಞಾನದ ತಳ-ಬುಡವನ್ನೂ ತಿಳಿಯದ ಇಂತಹ ಜನರ ಆಕ್ಷೇಪ ಎಷ್ಟೇ ಇದ್ದರೂ ಅದರಿಂದ ತತ್ತ್ವಜ್ಞಾನದ ಘನತೆಗೆ ಇನಿತೂ ಕುಂದಿಲ್ಲ.

ಮತ್ತೊಂದು ರೀತಿಯಲ್ಲಿ ವಿಚಾರಮಾಡಿದರೆ ವಿಜ್ಞಾನ ನಿಜಕ್ಕೂ ತತ್ತ್ವಜ್ಞಾನಕ್ಕೆ ಪೋಷಕವಾಗಿದೆ, ಪೂರಕವಾಗಿದೆ, ಎಂದೂ ವಿರುದ್ಧವಾಗಿಲ್ಲ ಎಂಬ ಸತ್ಯ ಗೋಚರಿಸುತ್ತದೆ. ವಿಜ್ಞಾನವನ್ನು ಸರಿಯಾಗಿ ತಿಳಿದು ಶಾಸ್ತ್ರವನ್ನು ಅಧ್ಯಯನ ಮಾಡಿದವರಿಗೆ, ವಿಜ್ಞಾನ-ತಿಳಿಯದ ಶಾಸ್ತ್ರಜ್ಞರಿಗಿಂತ ಹೆಚ್ಚು ಶ್ರದ್ಧೆ-ವಿಶ್ವಾಸಗಳು ಶಾಸ್ತ್ರದಲ್ಲಿ ಮೂಡುತ್ತವೆ. ತತ್ತ್ವಜ್ಞಾನವು ವಿಧಿಸುವ ಸ್ವಚ್ಛತೆ, ದೇಹಶುದ್ಧಿ, ಆಹಾರ ನಿಯಮ ಮೊದಲಾದವುಗಳು ಮೇಲ್ನೋಟಕ್ಕೆ ಆಭಾಸವಾಗಿ ಕಂಡರೆ, ವೈಜ್ಞಾನಿಕ ದೃಷ್ಟಿಯಲ್ಲಿ ನೋಡಿದವರಿಗೆ ಅದರ ಹಿಂದಿನ ಆರೋಗ್ಯಕರ ಜೀವನದ ಪರಿಕಲ್ಪನೆ ಗಾಢವಾಗಿ ತಟ್ಟುತ್ತದೆ. ಮನೆಯಲ್ಲಿರಲಿ, ರಸ್ತೆಯಲ್ಲೂ, ಸ್ವಚ್ಛತೆಯನ್ನು ಪಾಲಿಸಬಯಸುವ ಪಾಶ್ಚಾತ್ಯದೇಶಗಳು ಇದಕ್ಕೆ ಉತ್ತಮ ದೃಷ್ಟಾಂತ.

ರಾಮಾಯಣದಲ್ಲಿ ಬರುವ ನೆರಳು ಹಿಡಿದು ಗಗನದ ಪ್ರಾಣಿಗಳನ್ನು ಕೆಳಕ್ಕೆ ಎಳೆದು ನಾಶಪಡಿಸುವ ಸಿಂಹಿಕೆಯ ಪ್ರಸಂಗದಲ್ಲಿ ಇಂದಿನ Radarನ ಪರಿಕಲ್ಪನೆಯನ್ನೂ, ರಾವಣನ ಅಸಂಖ್ಯವಾದ ಮೂಲಬಲ ಲಂಕೆಯಲ್ಲಿ ಸೀಮಿತ ಪ್ರದೇಶದಲ್ಲಿ ನೆಲೆಸಲು ಸಾಧ್ಯವಾದ್ದರಲ್ಲಿ ಇಂದಿನ virusಗಳ ಪರಿಕಲ್ಪನೆಯನ್ನೂ, ಭಾಗವತದ ಪಂಚಮಸ್ಕಂಧದಲ್ಲಿ ಬರುವ ಋಷಭನಾಮಕ ಶ್ರೀಹರಿಯು ಭೂಮಿಯಲ್ಲಿಯೇ ಇದ್ದು ಮಳೆತರಿಸಿದ್ದರಲ್ಲಿ ಇಂದಿನ ಕೃತಕಮಳೆಯ ಪರಿಕಲ್ಪನೆಯನ್ನೂ, ಪ್ರಿಯವ್ರತ ರಾಜನು ಜ್ಯೋತಿರ್ಮಯರಥದ ನೆರವಿನಿಂದ ರಾತ್ರಿಯಲ್ಲೂ ಹಗಲಾಗಿಸಿದ ಪ್ರಸಂಗದಲ್ಲಿ ಇಂದಿನ Solar Mirror ಪರಿಕಲ್ಪನೆಯನ್ನೂ, ಶ್ರೀಕೃಷ್ಣನು ತನ್ನ ಚಕ್ರದಿಂದ ಜೀರ್ಣಶರೀರವನ್ನು ಕತ್ತರಿಸಿ ಜಾಂಬವಂತನಿಗೆ ತಾರುಣ್ಯ ನೀಡಿದ ಪ್ರಸಂಗದಲ್ಲಿ ಇಂದಿನ Plastic Surgery ಪರಿಕಲ್ಪನೆಯನ್ನೂ, ದ್ರೋಣರು ದೊನ್ನೆಯಲ್ಲಿ, ದುರ್ಯೋಧನ ಮೊದಲಾದವರು ಘಟಗಳಲ್ಲಿ ಜನಿಸಿದ್ದರಲ್ಲಿ Test tube babyಯ ಪರಿಕಲ್ಪನೆಯನ್ನೂ, ಕುರು-ಪಾಂಡವ ಯುದ್ಧದ ಅಸ್ತ್ರಗಳಲ್ಲಿ ಆಧುನಿಕ ಯುಗದ ಅಣ್ವಸ್ತ್ರ,Nuclear Weaponsಗಳ ಪರಿಕಲ್ಪನೆಯನ್ನೂ, ಅರ್ಜುನನ ಬಾಣದಿಂದ ಜಲಧಾರೆ ಉದ್ಭವಿಸಿದ್ದರಲ್ಲಿ Bore Well ಪರಿಕಲ್ಪನೆಯನ್ನೂ, ಅರ್ಜುನ ಸಂಪಾದಿಸಿದ ಪಾಶುಪತಾಸ್ತ್ರಗಳ ಪ್ರಯೋಗವನ್ನು ಧರ್ಮರಾಜನ ಅಪೇಕ್ಷೆಯಂತೆ ತೋರಿಸಲು

ಮುಂದಾದಾಗ ನಾರದರು ಆಗಮಿಸಿ ಅದರ ದುಷ್ಪರಿಣಾಮಗಳನ್ನು ವಿವರಿಸಿ ತಡೆದು ನಿಲ್ಲಿಸಿದ ಪ್ರಸಂಗವು ಇಂದಿನ ಅಣ್ವಸ್ತ್ರಗಳ ಪರೀಕ್ಷೆಯ ಅಪಾಯದ ಪರಿಕಲ್ಪನೆಯನ್ನೂ, ಮಾಂಧಾತರಾಜನು ತಂದೆಯ ಹೊಟ್ಟೆ ಒಡೆದು ಜನಿಸಿ ಬಂದ ಕಥೆಯಲ್ಲಿ ಆಧುನಿಕ Caesareanನ ಪರಿಕಲ್ಪನೆಯನ್ನೂ, ಬಾಣಾಸುರನ ಪ್ರಸಂಗದಲ್ಲಿನ ಶೈವಜ್ವರ–ವೈಷ್ಣವಜ್ವರಗಳ ಯುದ್ಧಪ್ರಸಂಗದಲ್ಲಿ ರೋಗಾಣು ಗಳನ್ನು ಔಷಧಿಗಳಿಂದ ಕೊಲ್ಲುವ ಪರಿಕಲ್ಪನೆಯನ್ನೂ, ಅಶ್ವಿನಿ ದೇವತೆಗಳು ದಧೀಚಿ ಮುನಿಗಳಿಗೆ ಅಶ್ವಶಿರವನ್ನು ಜೋಡಿಸಿದ್ದರಲ್ಲಿ ಇಂದಿನ ಬದಲಿ ಹೃದಯಶಸ್ತ್ರ ಚಿಕಿತ್ಸೆಯ ಪರಿಕಲ್ಪನೆಯನ್ನೂ, ಶ್ರೀರಾಮನ ಪುಷ್ಪಕವಿಮಾನ ಸಾಲ್ವನ ಸೌಭವಿಮಾನಗಳಲ್ಲಿ ಇಂದಿನ ವಿಮಾನಗಳ ಪರಿಕಲ್ಪನೆಯನ್ನೂ, ಪುಷ್ಪಕವಿಮಾನವು 'ನಾತ್ಯುಷ್ಣಂ ನಾತಿಶೀತಂ' ಎಂಬಲ್ಲಿ ಇಂದಿನ 'Airconditioned' ವ್ಯವಸ್ಥೆಯ ಪರಿಕಲ್ಪನೆಯನ್ನು, ಇಂದಿನ Telephoneಗಳಲ್ಲಿ ದೂರಶ್ರವಣದ ಪರಿಕಲ್ಪನೆ ಯನ್ನೂ ಕಾಣದಿರಲು ಚಿಕಿತ್ಸಕ ಚೇತನಕ್ಕೆ ಸಾಧ್ಯವೇ ಇಲ್ಲ; ಎಂದರೆ ಇವೆಲ್ಲವುಗಳ ಹಿನ್ನೆಲೆಯಲ್ಲಿ ಇಂದಿನ ತಂತ್ರಜ್ಞಾನವೇ ಅಂದೂ ಇತ್ತು ಎಂದು ಸಾಧಿಸಬೇಕಿಲ್ಲ; ಆದರೆ ಇದಕ್ಕೆ ಸಮಾನವಾದ ಅಥವಾ ಮಿಗಿಲಾದ ತಂತ್ರಜ್ಞಾನವೊಂದರ ಅಸ್ತಿತ್ವವನ್ನು ಅಂದಿನ ಜನ ಹೊಂದಿದ್ದರು ಎಂಬುದಾಗಿ ಊಹಿಸದಿರಲು ಮಾತ್ರ ಅಶಕ್ಯ ಎಂಬುದು ಖಚಿತ.

ನೂರಾರು ವರ್ಷಗಳ ಹಿಂದೆ ಮೇಲಿನ ಪುರಾಣಭಾಗಗಳನ್ನು ಹೇಳುವಾಗ ಎದುರಿಸುವ ಸಮಸ್ಯೆಯನ್ನು ಇಂದು ಎದುರಿಸದಿರಲು ವಿಜ್ಞಾನದ ಪ್ರಗತಿಯಿಂದ ಸಾಧ್ಯವಾಗಿದೆ; ಬದಲಾಗಿ ಅವುಗಳ ಬಗ್ಗೆ ಇರುವ ಶ್ರದ್ಧೆಯು ಹೆಚ್ಚುವುದು. ಇವೆಲ್ಲ ಇಪ್ಪತ್ತನೆ ಶತಮಾನದ ಜನರಿಂದ ಪ್ರಕ್ಷಿಪ್ತವಾದ ಭಾಗಗಳು ಎಂದು ಅನಂತರದ ಜನ ಊಹಿಸುವಷ್ಟು ಅಪೂರ್ವವಾದ ವೈಜ್ಞಾನಿಕಸತ್ಯವಾಗಿವೆ. ಇಂತಹ ಪ್ರಸಂಗಗಳು ರಾಮಾಯಣ ಮಹಾಭಾರತಗಳಲ್ಲಿ ಸಾಕಷ್ಟು ಸಿಕ್ಕುತ್ತವೆ. ಈ ಹಿನ್ನೆಲೆಯಲ್ಲಿ ವಿಚಾರವಾದಿಗಳೆಂಬ ಮತ್ತೊಂದು ವರ್ಗದ ಜನರು ಎತ್ತುವ ಆಕ್ಷೇಪಗಳೂ ಅಷ್ಟೇ ಪೊಳ್ಳು ಎಂದು ತಿಳಿದರೆ ಸಾಕು.

ತತ್ತ್ವಜ್ಞಾನವೆಲ್ಲ ವಿಜ್ಞಾನ ಎಂದು ವಾದಿಸುವ ಅತಿರೇಕ ಮತ್ತೆ ಕೆಲವರದು; ಆದರೆ ವಿಜ್ಞಾನಗಳ ಮತ್ತು ತತ್ತ್ವಜ್ಞಾನಗಳ ಗುರಿಗಳೇ ಬೇರೆ ಬೇರೆ, ಅವುಗಳ ಮಂಡನ ಪದ್ಧತಿಗಳೇ ಬೇರೆ ಬೇರೆ ಎಂದು ಗಮನಿಸಿದವರಿಗೆ ಅದು ತಪ್ಪುದಾರಿ ಎಂದು ತಿಳಿದು ಅನವರಿಕೆಯಾಗುತ್ತದೆ. ತತ್ತ್ವಜ್ಞಾನದ ವ್ಯಾಪ್ತಿಯಲ್ಲಿ ಪ್ರಾಧಾನ್ಯ ಅತೀಂದ್ರಿಯ ವಿಷಯಗಳಿಗಾದರೆ ವಿಜ್ಞಾನದಲ್ಲಿ ಐಂದ್ರಿಯಕವಾದ ಭೌತಿಕ

ವಸ್ತುಗಳಿಗೇ ಪ್ರಾಧಾನ್ಯ. ವಿಜ್ಞಾನವನ್ನು ವಿಜ್ಞಾನವನ್ನಾಗಿ ನೋಡುವಂತೆ, ತತ್ತ್ವಜ್ಞಾನವನ್ನು ತತ್ತ್ವಜ್ಞಾನವನ್ನಾಗಿ ಕಾಣುವುದರಲ್ಲಿ ನಿಜವಾದ ವಿವೇಕವಿದೆ. ವಿಜ್ಞಾನದ್ದು ವ್ಯಷ್ಟಿ ದೃಷ್ಟಿಯಾದರೆ, ತತ್ತ್ವಜ್ಞಾನದ್ದು ಸಮಷ್ಟಿದೃಷ್ಟಿಯಾಗಿದೆ ಎಂಬ ಮತ್ತೊಂದು ಅಂಶವನ್ನೂ ಗಮನಿಸಬೇಕು.

## ಮಧ್ವಸಿದ್ಧಾಂತ

ಶ್ರೀಮದಾಚಾರ್ಯರು ಬೋಧಿಸಿದ ತತ್ತ್ವಜ್ಞಾನವು 'ತತ್ತ್ವವಾದ', 'ವೈಷ್ಣವ ಸಿದ್ಧಾಂತ', 'ದ್ವೈತದರ್ಶನ' ಮೊದಲಾದ ಹೆಸರುಗಳಿಂದ ಪ್ರಸಿದ್ಧವಾಗಿದೆ.

ಕಾಲಕ್ರಮದಲ್ಲಿ ಇತರ ಎಲ್ಲಾ ದರ್ಶನಗಳಿಗಿಂತ ಕೊನೆಯಲ್ಲಿ ಬಂದ ದರ್ಶನ; ಪರಿಪೂರ್ಣವಾದ ದರ್ಶನ; ಶ್ರೀವಾದಿರಾಜಸ್ವಾಮಿಗಳು ತಿಳಿಸಿರುವಂತೆ,

**ಪೂರ್ವಃ ಪೂರ್ವಃ ಪೂರ್ವಪಕ್ಷಃ ಯಾವನ್ಮಧ್ವಮತೋದಯಃ ।**
**ಅಂತೇ ಸಿದ್ಧಸ್ತು ಸಿದ್ಧಾಂತೋ ಮಧ್ವಸ್ಯಾಗಮ ಏವ ಹಿ ॥**

ನಿಜಕ್ಕೂ ಇದುವೇ ಸಿದ್ಧಾಂತ.

ಶ್ರೀಮದಾಚಾರ್ಯರದು ಜಗತ್ತಿನ ಮತಾಚಾರ್ಯರುಗಳಲ್ಲೆಲ್ಲ ಎದ್ದುಕಾಣುವ ವ್ಯಕ್ತಿತ್ವ, ದ್ವಾತ್ರಿಂಶಲ್ಲಕ್ಷಣೋಪೇತವಾದ ಪ್ರಮಾಣಬದ್ಧವಾದ ಶರೀರದವರೆಂಬ ಅಸಾಧಾರಣ ಹಿರಿಮೆ ಅವರದು; ಅವರು ಪ್ರತಿಪಾದಿಸಿದ ಸಿದ್ಧಾಂತವೂ ಸಹ ಸಿದ್ಧಾಂತಕ್ಕೆ ಇರಲೇಬೇಕಾದ ಸಕಲಲಕ್ಷಣಗಳಿಂದ ಭರಿತವಾದ ಪರಿಪೂರ್ಣ ಸಿದ್ಧಾಂತ.

**ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ತ್ವತೋ**
**ಭಿನ್ನಾ ಜೀವಗಣಾ ಹರೇರನುಚರಾ ನೀಚೋಚ್ಚಭಾವಂಗತಾಃ ।**
**ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ**
**ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥**

—ಎಂಬುದು ಅವರು ಪ್ರತಿಪಾದಿಸಿದ ಸಿದ್ಧಾಂತದ ಸಾರ.

ಚಾರ್ವಾಕರು ಪ್ರತ್ಯಕ್ಷವನ್ನು ಒಪ್ಪಿದರೂ ಅನುಮಾನ ಆಗಮಗಳನ್ನು ಒಪ್ಪಲಿಲ್ಲ; ಬೌದ್ಧಜೈನರು ವೇದಗಳನ್ನು ಒಪ್ಪಲಿಲ್ಲ; ಸಾಂಖ್ಯಯೋಗರು ವೇದಗಳನ್ನು ಒಪ್ಪಿದರೂ ಅವುಗಳಿಗೆ ಪಾರಮ್ಯವನ್ನು ಒಪ್ಪಲಿಲ್ಲ; ನ್ಯಾಯವೈಶೇಷಿಕರು ಯುಕ್ತಿಗೇ ಪ್ರಾಬಲ್ಯ ಒಪ್ಪಿದರು; ಪೂರ್ವಮೀಮಾಂಸಕರು

ವೇದಗಳಿಗೆ ಪಾರಮ್ಯ ಒಪ್ಪಿದರೂ ಅವುಗಳನ್ನು ಕರ್ಮಕಾಂಡ ಮತ್ತು ಜ್ಞಾನಕಾಂಡಗಳೆಂದು ಪ್ರತ್ಯೇಕಿಸಿ ಕರ್ಮಕಾಂಡಕ್ಕೆ ಮಾತ್ರ ಪ್ರಾಧಾನ್ಯವಿತ್ತರು; ಅದ್ವೈತಿಗಳು ಜ್ಞಾನಕಾಂಡಕ್ಕೆ ಪ್ರಾಧಾನ್ಯವಿತ್ತು ಕರ್ಮಕಾಂಡವನ್ನು ಗೌಣವಾಗಿಸಿದರು: ಅಲ್ಲದೆ ಅದರಲ್ಲೂ ವೇದಗಳನ್ನು ತತ್ತ್ವಾವೇದಕ ಅತತ್ತ್ವಾವೇದಕವೆಂದು ವಿಭಾಗ ಮಾಡಿ ನಾಲ್ಕಾರು ವಾಕ್ಯಗಳ ಹೊರತು ಉಳಿದ್ದನ್ನೆಲ್ಲಾ ಅತತ್ತ್ವಾವೇದಕವೆಂದರು; ವಿಶಿಷ್ಟಾದ್ವೈತಿಗಳು ಸಹ ಕರ್ಮಕಾಂಡವನ್ನು ಗೌಣವಾಗಿಸಿದ್ದಲ್ಲದೆ, ದ್ರಾವಿಡವೇದ ವೆಂದು ಪ್ರಸಿದ್ಧವಾದ ಆಳ್ವಾರುಗಳ ಪ್ರಬಂಧಗಳನ್ನು ವೇದಗಳಿಗೆ ಸಮನಾಗಿ ಪರಿಗಣಿಸಿದರು.

ಆದರೆ ಇಂತಹ ಯಾವ ವಿಭಾಗವನ್ನೂ ಮಾಡದೆ ಸಕಲವೇದಗಳೂ ಒಂದೇರೀತಿಯಲ್ಲಿ ಪ್ರಮಾಣವಾಗಿವೆ ಎಂದು ಮೊಟ್ಟಮೊದಲಬಾರಿಗೆ ಸಾಧಿಸಿ ತೋರಿಸಿದ ಶ್ರೇಯಸ್ಸು ಶ್ರೀಮಧ್ವಾಚಾರ್ಯರದು; ಜೊತೆಗೆ ಇವರಾರೂ ಗುರುತಿಸದಿದ್ದ ಬ್ರಹ್ಮಸೂತ್ರಗಳ ಪಾರಮ್ಯವನ್ನು ಪ್ರತಿಪಾದಿಸಿದವರು ಅವರೇ: "ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ" (ಅನುವ್ಯಾಖ್ಯಾನ).

ವೇದಗಳಂತೆ ವೇದಾಂಗಗಳು, ಭಾಗವತಾದಿ ಪುರಾಣಗಳು, ಮನುಸ್ಮೃತಿ ಮೊದಲಾದ ಸ್ಮೃತಿಗಳು ಸಹ ಶಾಸ್ತ್ರವೇ ಆಗಿದೆ. ವೇದಗಳೊಂದಿಗೆ ಮಹಾಭಾರತ ರಾಮಾಯಣ ಮತ್ತು ಪಂಚರಾತ್ರಗಳೆಂಬ ಇತಿಹಾಸಗಳು ಸಹ ಮುಖ್ಯಶಾಸ್ತ್ರವೇ ಆಗಿವೆ. ಆದರಂತೆ ಅವಕ್ಕೆ ಅನುಕೂಲವಾದ ಇತರ ಸಕಲ ಶಬ್ದಗಳೂ ಸಚ್ಛಾಸ್ತ್ರವೇ ಆಗಿವೆ.ಅವುಗಳಲ್ಲಿ ಎಂದೂ ಅರ್ಥಭೇದವಿಲ್ಲವೆಂದು ಪ್ರತಿಪಾದಿಸಿದವರು.

**ಅರ್ಥೋಽಯಮೇವ ನಿಖಿಲೈರಪಿ ವೇದವಾಕ್ಯೈ**
**ರಾಮಾಯಣೈಃ ಸಹಿತಭಾರತಪಂಚರಾತ್ರೈಃ ।**
**ಅನ್ಯೈಶ್ಚ ಶಾಸ್ತ್ರವಚನೈಃ ಸಹತತ್ತ್ವಸೂತ್ರೈ**
**ರ್ನಿರ್ಣೀಯತೇ ಸಹೃದಯಂ ಹರಿಣಾ ಸದೈವ ॥**

ಮಹಾಭಾರತಾದಿಗಳೆಲ್ಲ ಕೇವಲ ಇತಿಹಾಸವಾಗಿರದೆ ಮೂಲತಃ ಅಧ್ಯಾತ್ಮಶಾಸ್ತ್ರವಾಗಿವೆ. ವೇದಾದಿ ಸಕಲಶಾಸ್ತ್ರಗಳ ಸಾರವಾಗಿ ಮಹಾಭಾರತ ಅವಕ್ಕಿಂತ ಮಿಗಿಲಾದರೆ, ಭಗವದ್ಗೀತೆ ವಿಷ್ಣುಸಹಸ್ರನಾಮಗಳು ಅದರ ಸಾರವಾಗಿವೆ; ವೇದಗಳಿಗೆಲ್ಲ ಅತಿಕಡಿಮೆ ಎಂದರೆ ಮೂರರ್ಥ; ಮಹಾಭಾರತಕ್ಕೆ ಹತ್ತು ಅರ್ಥಗಳು, ವಿಷ್ಣುಸಹಸ್ರನಾಮಗಳಿಗೆ ನೂರು ಅರ್ಥಗಳು ಮೊದಲಾದ ಅಪೂರ್ವ ವಿಷಯಗಳನ್ನು ಸೋದಾಹರಣವಾಗಿ ತಿಳಿಸಿದವರೂ ಅವರೇ. ಮಹಾಭಾರತದ ಹಿರಿಮೆಯನ್ನೂ, ಅದರ ಸಾರವನ್ನೂ, ಆಧ್ಯಾತ್ಮಿಕಮಹತ್ತ್ವವನ್ನೂ ಜಟಿಲ

ಪ್ರಸಂಗಗಳಿಗೆಲ್ಲ ನಿರ್ಣಯವನ್ನೂ ಒದಗಿಸಿದ ಅವರ ಮಹಾಭಾರತತಾತ್ಪರ್ಯ ನಿರ್ಣಯವು ಮಹಾಭಾರತದ ನಂತರ ಬಂದ ಅಂತಹ ಏಕಮಾತ್ರ ಗ್ರಂಥ.

ಚಾರ್ವಾಕನು ದೇಹದಿಂದ ಬೇರೆಯಾದ ಆತ್ಮನನ್ನು ಒಪ್ಪಲಿಲ್ಲ; ಬೌದ್ಧರು ನೈರಾತ್ಮ್ಯವಾದಿಗಳು; ಜೈನರು ಮತ್ತು ಸಾಂಖ್ಯರು ಜೀವಾತ್ಮನನ್ನು ಒಪ್ಪಿದರೂ ಪರಮಾತ್ಮನನ್ನು ಒಪ್ಪಲಿಲ್ಲ; ನ್ಯಾಯವೈಶೇಷಿಕರು ಪರಮಾತ್ಮನನ್ನು ಒಪ್ಪಿದರೂ ಅವನಿಗೆ ಪಾರಮ್ಯ ಒಪ್ಪಲಿಲ್ಲ; ಪೂರ್ವಮೀಮಾಂಸಕರು ಈಶ್ವರನನ್ನೇ ಒಪ್ಪದ ನಿರೀಶ್ವರವಾದಿಗಳು. ಅದ್ವೈತಿಗಳು ಆತ್ಮವು ಒಂದೇ ಎಂದರು; ವಿಶಿಷ್ಟಾದ್ವೈತಿಗಳು ಪರಮಾತ್ಮನನ್ನು ಒಪ್ಪಿದರೂ ಅವನಿಗೆ ಉಪಾದಾನಕಾರಣತ್ವವನ್ನು ಹೇಳುವ ಮೂಲಕ ವಿಕಾರಿತ್ವವನ್ನೇ ಹೇಳಿದಂತಾಯಿತು; ಆದರೆ ಪರಮಾತ್ಮನನ್ನು ನಿಜವಾದ ಅರ್ಥದಲ್ಲಿ ಒಪ್ಪಿದ್ದು ದ್ವೈತದರ್ಶನದ ಹಿರಿಮೆಯಾಯಿತು. ಈ ಅರ್ಥದಲ್ಲಿ ದ್ವೈತಮತವು ನೂರಕ್ಕೆ ನೂರರಷ್ಟು ಆಸ್ತಿಕವೆನಿಸಿದ ಏಕಮಾತ್ರ ದರ್ಶನವಾಗುತ್ತದೆ.

ಈಶ್ವರನನ್ನು ಒಪ್ಪಿದ ನೈಯಾಯಿಕರು ಈಶ್ವರನಿಗೆ ಎಂಟು ಗುಣವೆಂದರೆ ಅದ್ವೈತಿಗಳು ಬ್ರಹ್ಮನನ್ನು ನಿರ್ಗುಣನೆಂದರು, ವಿಶಿಷ್ಟಾದ್ವೈತಿಗಳು ಅನಂತಗುಣ ನೆಂದರೂ ಆನಂದಸಾಮ್ಯವನ್ನು ಹೇಳುವ ಮೂಲಕ ಅವನ ಹಿರಿಮೆಗೆ ಚ್ಯುತಿ ಯೊಡ್ಡಿದರು. ಭಗವಂತನನ್ನು ಅನಂತಕಲ್ಯಾಣಗುಣಪರಿಪೂರ್ಣ, ಸಕಲದೋಷ ದೂರ, ಸರ್ವತಂತ್ರಸ್ವತಂತ್ರ ಎಂದು ಸಾರಿದ್ದು ಪುನಃ ಶ್ರೀಮನ್ಮಧ್ವಾಚಾರ್ಯರೇ!

**ಒಬ್ಬಾಚಾರಿಯನು ದೈವವೆ ಇಲ್ಲವೆಂದ ।**
**ಒಬ್ಬಾಚಾರಿಯನು ದೈವಕೆಂಟೇ ಗುಣವೆಂದ ।**
**ಒಬ್ಬಾಚಾರಿಯನು ನಿರ್ಗುಣ ನಿರಾಕಾರ ।**
**ನಿರವಯವನೆಂದ – ಕಡೆಯಲಿ ತಾನೆ ದೈವವೆಂದ ।**
**ಒಬ್ಬರು ವೇದಾರ್ಥವರಿತೂ ಅರಿಯರು ।**
**ಒಬ್ಬ ಮಧ್ವಾಚಾರ್ಯರೇ ಪುರಂದರವಿಠಲ ।**
**ನೊಬ್ಬನೆ ದೈವವೆಂದು ತೋರಿಕೊಟ್ಟರಾಗಿ ।**

–ಎಂಬ ಶ್ರೀಪುರಂದರದಾಸರ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

**ವೈದಿಕ ಮತದಲ್ಲಿ ನಡೆದೇವೆಂದು ತಾವು ।**
**ವೈಷ್ಣವವಂ ಬಿಟ್ಟುಕೊಟ್ಟರು ಕೆಲವರು ।**
**ವೈಷ್ಣವ ಮತದಲ್ಲಿ ನಡೆದೇವೆಂದು ।**
**ವೈದಿಕವಂ ಬಿಟ್ಟುಕೊಟ್ಟರು ಕೆಲವರು ।**

ವೈದಿಕ ವೈಷ್ಣವ ಒಂದೆಂದು ಮಧ್ವಮುನಿ ।
ಪ್ರತಿಪಾದಿಸಿದ ಪುರಂದರವಿಠಲ ಮೆಚ್ಚೆ ।

—ಎಂಬ ಅವರ ಮತ್ತೊಂದು ಮಾತು ಸಹ ಇಲ್ಲಿ ಉಲ್ಲೇಖನಾರ್ಹವಾಗಿದೆ.

ಚಾರ್ವಾಕರ ಜಗತ್ತು ಇಹದ ಮಟ್ಟಿಗೆ ಸೀಮಿತವಾದರೆ, ಬೌದ್ಧರದು ಶೂನ್ಯವಾದ, ಕ್ಷಣಿಕವಾದ; ಜೈನರದು ಸ್ಯಾದ್ವಾದ; ಸಾಂಖ್ಯಯೋಗರಿಗೆ ಜಗತ್ತೇ ಪ್ರಧಾನ; ಅದ್ವೈತವಾದದಲ್ಲಿ ಜಗತ್ತು ಮಿಥ್ಯೆ; ವಿಶಿಷ್ಟಾದ್ವೈತಮತದಲ್ಲಿ ಅದು ಭಗವಂತನ ಶರೀರ; ಆದರೆ ಜಗತ್ತನ್ನು ಭಗವಂತನಿಗೆ ಭಿನ್ನವಾದ ಅವನಷ್ಟೇ ಸತ್ಯವಾದ ಆದರೆ ಅವನಿಗೆ ಸಂಪೂರ್ಣವಾಗಿ ಅಧೀನವಾದ ಪ್ರತ್ಯೇಕ ಪದಾರ್ಥವೆಂದು ತೋರಿಸಿಕೊಟ್ಟವರು ಶ್ರೀಮಧ್ವಾಚಾರ್ಯರು.

ಕರ್ಮಾಚರಣೆಯ ಬಗ್ಗೆಯೂ ಇಂತಹುದೇ ವಿಚಿತ್ರವಾದಗಳಿದ್ದವು. ಚಾರ್ವಾಕರಿಗೆ ಬದುಕಲು ಮಾಡುವುದೆಲ್ಲ ಕರ್ಮ, ಬೌದ್ಧಜೈನರಿಗೆ ವೇದವಿಹಿತ ವಲ್ಲದ್ದು ಕರ್ಮ; ಸಾಂಖ್ಯ ಹಾಗೂ ಯೋಗರಿಗೆ ವೈಶೇಷಿಕರಿಗೆ ವೇದವಿಹಿತವಾದದ್ದೂ ಕರ್ಮ; ಪೂರ್ವ ಮೀಮಾಂಸಕರಿಗೆ ವೇದದಲ್ಲಿ ಹೇಳಿದ ಯಜ್ಞ ಯಾಗಾದಿಗಳು ಮಾತ್ರ ಕರ್ಮ; ಅದ್ವೈತಿಗಳದಂತು 'ಕರ್ಮತ್ಯಾಗವಾದ'; (ಮುಮುಕ್ಷೋಃ ಕರ್ಮಸಂನ್ಯಾಸವಿಧಾನಾತ್-ಶಂಕರಾಚಾರ್ಯರ ಗೀತಾಭಾಷ್ಯ) ವಿಶಿಷ್ಟಾದ್ವೈತಿಗಳದು ಕರ್ಮತ್ಯಾಗವಲ್ಲವಾದರೂ ಎಲ್ಲರಿಗೂ ಒಂದೇ ಫಲ ಕೊಡುವ ವಸ್ತು ಕರ್ಮ. ಜ್ಞಾನಬಂದ ಅನಂತರದ ಕರ್ಮಾಚರಣೆಯ ಸ್ವರೂಪದ ಬಗ್ಗೆಯಂತೂ ತ್ಯಾಗವೇ ಇವರೆಲ್ಲರ ಒಟ್ಟು ಮತ. ಆದರೆ ವೇದವಿಹಿತವಾದದ್ದು ಮಾತ್ರವೇ ಕರ್ಮ, ಕಾಮ್ಯಫಲವನ್ನು ತೊರೆದು ಶ್ರೀಕೃಷ್ಣಾರ್ಪಣ ಬುದ್ಧಿಯಿಂದ ಮಾಡಲ್ಪಟ್ಟಾಗ ಅದು ಅಪರೋಕ್ಷಜ್ಞಾನಕ್ಕೆ ಸಾಧನ; ಜ್ಞಾನಿಗಳಿಗೂ ಕರ್ಮವು ವಿಹಿತ, ಜ್ಞಾನಪೂರ್ವದ ಕರ್ಮಯೋಗ ಪರೋಕ್ಷಜ್ಞಾನಕ್ಕೆ ಸಾಧನವಾದರೆ ಜ್ಞಾನೋತ್ತರ ಕರ್ಮ ಮೋಕ್ಷದಲ್ಲಿ ಆನಂದಾತಿಶಯಕ್ಕೆ ಸಾಧಕ ಎಂದು ನಿರೂಪಿಸಿದ್ದು ಶ್ರೀಮಧ್ವಾಚಾರ್ಯರ ಹಿರಿಮೆ. ಅಸಂಪ್ರಜ್ಞಾತ ಸಮಾಧಿಯಲ್ಲಿದ್ದಾಗ ಹೊರತು ಜ್ಞಾನಿಗೂ ಕರ್ಮ ಕಡ್ಡಾಯವೆಂದು ಅವರು ಪ್ರತಿಪಾದಿಸಿದರು.

ಚಾರ್ವಾಕರಿಗೆ ಪ್ರತ್ಯೇಕ ಮೋಕ್ಷವೇ ಇಲ್ಲ, ದೇಹನಾಶವೇ ಮೋಕ್ಷ; ಬೌದ್ಧರಿಗೆ 'ಶೂನ್ಯಭಾವ' ಮೋಕ್ಷವಾದರೆ; ಜೈನರಿಗೆ 'ಸತತೋರ್ಧ್ವಗಮನ'ವೇ ಮೋಕ್ಷ, ಸಾಂಖ್ಯರಿಗೆ ಪ್ರಕೃತಿಬಂಧದಿಂದ ವಿಮೋಚನೆ ಮೋಕ್ಷವಾದರೆ; ನೈಯಾಯಿಕವೈಶೇಷಿಕರಿಗೆ ಸುಖದುಃಖಗಳ ನಿವೃತ್ತಿಯೇ ಮೋಕ್ಷ. ಪ್ರಪಂಚ ಸಂಬಂಧದ ವಿಲಯ ಮೀಮಾಂಸಕರ ಮೋಕ್ಷದ ಪರಿಕಲ್ಪನೆ; ಆತ್ಮೈಕ್ಯ ಅದ್ವೈತದ

ಮೋಕ್ಷ; ಆನಂದ ಸಾಮ್ಯ ವಿಶಿಷ್ಟಾದ್ವೈತದ ಮೋಕ್ಷ. ಆದರೆ ಪ್ರತಿಯೊಬ್ಬ ಸಾತ್ವಿಕಚೇತನನೂ ಸ್ವರೂಪತಃ ಆನಂದಸ್ವರೂಪನಾಗಿದ್ದು ಅಂತಹ ಸಹಜ ಆನಂದದ ಪೂರ್ಣಅಭಿವ್ಯಕ್ತಿಯೇ ಮೋಕ್ಷವೆಂದು ಮೋಕ್ಷದಲ್ಲಿ ಯಥೋಚಿತವಾದ ಆನಂದದ ಪರಿಕಲ್ಪನೆಯನ್ನು ಪ್ರಪ್ರಥಮವಾಗಿ ಸಾರಿದ್ದು ದ್ವೈತದರ್ಶನದ ವೈಶಿಷ್ಟ್ಯ, ಆನಂದಾನುಭವಕ್ಕೆ ಅವಕಾಶವೀಯದ ಮೋಕ್ಷ ಎಷ್ಟೇ ಹಿರಿಮೆಯನ್ನು ಹೊಂದಿದ್ದರೂ ಆದರಣೀಯವಾಗಲಾರದು ಎಂಬ ಅಂಶವನ್ನು ಗಮನಿಸಿದಾಗ ಇದರ ಮಹತ್ತ್ವ ಮನವರಿಕೆಯಾಗುವುದು. ಮುಕ್ತಿಯಲ್ಲೂ ಆನಂದತಾರತಮ್ಯವುಂಟು ಎಂಬ ಅಂಶವನ್ನು ಪ್ರತಿಪಾದಿಸಿದ ಏಕಮಾತ್ರ ಆಚಾರ್ಯರೂ ಅವರೇ.

ವೇದಗಳಲ್ಲಿ ಬರುವ 'ಭೇದ'ವಾಕ್ಯ 'ಅಭೇದ'ವಾಕ್ಯಗಳಿಗೂ, 'ಸಗುಣ ನಿರ್ಗುಣ' ವಾಕ್ಯಗಳಿಗೂ,'ಸಾಕಾರ ನಿರಾಕಾರ'ವಾಕ್ಯಗಳಿಗೂ ಸಮನ್ವಯವನ್ನು ತೋರಿಸಿದವರು ಸಹ ಶ್ರೀಮಧ್ವಾಚಾರ್ಯರೇ! ಪ್ರತ್ಯಕ್ಷಯೋಗ್ಯವಿಷಯಗಳಲ್ಲಿ ಪ್ರತ್ಯಕ್ಷಕ್ಕೇ ಪ್ರಾಧಾನ್ಯವಾದರೆ, ಅತೀಂದ್ರಿಯವಿಷಯಗಳಲ್ಲಿ ಆಗಮದ್ದೇ ಪ್ರಾಬಲ್ಯ, ಸಾವಕಾಶ ನಿರವಕಾಶತ್ವಗಳನ್ನು ವಿವೇಚಿಸಿ ಆಗಮಗಳಲ್ಲಿ ಅಪಾತತಃ ವಿರೋಧಗಳನ್ನೂ, ಪಟು ಅಪಟು ಎಂಬುದಾಗಿ ವಿವೇಚಿಸಿ ಪ್ರತ್ಯಕ್ಷದಲ್ಲಿನ ವಿರೋಧವನ್ನೂ ಪರಿಹರಿಸುವ ಕ್ರಮವನ್ನು ನಿರೂಪಿಸಿದವರೂ ಅವರೇ! ವಸ್ತುವಿಗೂ ಅದರ ನಿತ್ಯಧರ್ಮಗಳಿಗೂ ಸವಿಶೇಷಾಭೇದ, ವಸ್ತುವಿಗೂ ಅದರ ಅನಿತ್ಯಧರ್ಮಗಳಿಗೂ ಭೇದಾಭೇದ, ಎರಡು ವಸ್ತುಗಳ ಮಧ್ಯೆ ಭೇದಸಂಬಂಧ ಎಂಬ ವಿವೇಚನೆ, ಉಪಕ್ರಮಾದಿಗಳಲ್ಲಿ ಉತ್ತರೋತ್ತರಪ್ರಾಬಲ್ಯ, ಶ್ರುತಿಲಿಂಗಾದಿಗಳಲ್ಲಿ ಪೂರ್ವಪೂರ್ವ ಪ್ರಾಬಲ್ಯ ಮೊದಲಾಗಿ ತಾತ್ತ್ವಿಕವಿವೇಚನೆಗೆ ಅವರು ನೀಡಿರುವ ಕೊಡುಗೆ ಅಪಾರ ಮತ್ತು ಅಪೂರ್ವ. ವಿಷ್ಣುಸರ್ವೋತ್ತಮತ್ತ್ವದೊಂದಿಗೆ, ವಾಯುಜೀವೋತ್ತಮತ್ವ, ದೇವತಾ ತಾರತಮ್ಯಾದಿಗಳ ಪ್ರತಿಪಾದನೆ, ಭಕ್ತಿಯೇ ಸರ್ವೋಚ್ಚ ಭಗವದನುಗ್ರಹದ ಸಾಧನ, ಸಕಲಶಾಸ್ತ್ರಗಳ ಗುರಿಯೂ ಇಂತಹ ವಿಷ್ಣುಭಕ್ತಿಯ ಪ್ರತಿಪಾದನೆ ಆಗಿದೆ ಎಂಬ ವಿವೇಚನೆಗಳೂ ಅವರ ಕೊಡುಗೆಯಾಗಿವೆ:

**ವಿಷ್ಣುಭಕ್ತಿವಿಧಾನಾರ್ಥಂ ಸರ್ವಂ ಶಾಸ್ತ್ರಂ ಪ್ರವರ್ತತೇ ॥**

ಅಂತೂ ಶ್ರೀವೇದವ್ಯಾಸರಿಂದ ಆವಿಷ್ಕೃತವಾದ ತತ್ತ್ವಜ್ಞಾನವು ಸಂಪೂರ್ಣಖಿಲವಾಗಿದ್ದಾಗ ಅದನ್ನು ಅವರ ಅಭಿಪ್ರಾಯಕ್ಕನುಗುಣವಾಗಿ ಪುನಃ ಪ್ರಕಟಿಸಿದ ಹಿರಿಮೆ ಶ್ರೀಮಧ್ವಾಚಾರ್ಯರದು; ಎಂದರೆ ಅವರು ನಿಜವಾದ ಅರ್ಥದಲ್ಲಿ 'ಅಭಿನವ ವೇದವ್ಯಾಸರು'. ಶ್ರೀವೇದವ್ಯಾಸರು ಸರ್ವೋತ್ತಮರಾದ ಶ್ರೀಹರಿಯಾದರೆ ಇವರು ಜೀವೋತ್ತಮರಾದ ಶ್ರೀವಾಯುದೇವರು.

# ಗ್ರಂಥವೈಭವ

ಶ್ರೀಮದಾಚಾರ್ಯರ ಗ್ರಂಥವೈಭವವೂ ಸಹ ಅನ್ಯಾದೃಶವಾದುದು. ಅತಿ ಹೆಚ್ಚಿನ ಸಂಖ್ಯೆಯ ಗ್ರಂಥಗಳನ್ನು ಬರೆದ ಮತಾಚಾರ್ಯರು ಎಂಬುದು ಇವರ ಹಿರಿಮೆಯಾಗಿದೆ. ವಿಷಯವೈವಿಧ್ಯ ಅವುಗಳ ಮತ್ತೊಂದು ಹಿರಿಮೆ.

ಸರ್ವಮೂಲವೆಂಬುದಾಗಿ ಪ್ರಸಿದ್ಧವಾಗಿರುವ ಅವರ ಮೂವತ್ತೇಳು ಗ್ರಂಥಗಳಲ್ಲಿ ಬ್ರಹ್ಮಸೂತ್ರಗಳ ಮೇಲೆ ನಾಲ್ಕು, ಗೀತೆಯಮೇಲೆ ಎರಡು, ದಶೋಪನಿಷತ್ತುಗಳ ಮೇಲೆ ಒಂದೊಂದು, ಋಗ್ವೇದದ ಮೇಲೆ ಒಂದು, ಮಹಾಭಾರತದ ಮೇಲೆ ಎರಡು, ಭಾಗವತದ ಮೇಲೆ ಒಂದು ರಚಿತವಾಗಿವೆ.

ಶಂಕರಾಚಾರ್ಯರು ಪ್ರಸ್ಥಾನ ತ್ರಯಕ್ಕೆ ಭಾಷ್ಯ ಬರೆದಿದ್ದರೂ ವೇದಗಳ ಮೇಲೆ ಭಾಷ್ಯ ಬರೆದಿಲ್ಲ. ರಾಮಾನುಜಾಚಾರ್ಯರು ಗೀತೆ ಮತ್ತು ಬ್ರಹ್ಮಸೂತ್ರಗಳಮೇಲೆ ಭಾಷ್ಯ ಬರೆದಿದ್ದರೂ, ಉಪನಿಷತ್ತು ಮತ್ತು ವೇದಗಳ ಮೇಲೆ ಭಾಷ್ಯ ರಚಿಸಿಲ್ಲ. ಅವರ ವೇದಾರ್ಥಸಂಗ್ರಹದಲ್ಲಿ ಉಪನಿಷದ್ವಾಕ್ಯಗಳ ಚರ್ಚೆ ಇದ್ದರೂ ಅದು ಅವುಗಳ ಭಾಷ್ಯವಲ್ಲ. ಆದರೆ ಶ್ರೀಮದಾಚಾರ್ಯರು ಪ್ರಸ್ಥಾನತ್ರಯಗಳೊಂದಿಗೆ ಋಗ್ವೇದದ ಮೇಲೂ ಭಾಷ್ಯ ರಚಿಸಿರುವರು. ಮಹಾಭಾರತಕ್ಕೆ ತಾತ್ಪರ್ಯನಿರ್ಣಯ, ಭಾಗವತಕ್ಕೆ ತಾತ್ಪರ್ಯನಿರ್ಣಯಗಳನ್ನೂ ಬರೆದಿರುವರು; ಹೀಗೆ ಅತ್ಯಂತ ವ್ಯಾಪಕವಾಗಿ ಗ್ರಂಥಗಳನ್ನು ರಚಿಸಿದ ಏಕಮಾತ್ರ ಮತಾಚಾರ್ಯರೂ ಇವರೇ.

ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ ಮತ್ತು ಯತಿಪ್ರಣವಕಲ್ಪಗಳು ಆಚಾರ ಗ್ರಂಥಗಳಾಗಿದ್ದರೆ, ಯತಿಪ್ರಣವಕಲ್ಪವು ಸಂನ್ಯಾಸದೀಕ್ಷೆಯ ವಿಧಿವಿಧಾನಗಳನ್ನು ನಿರೂಪಿಸುವ ಕೃತಿ. ತಂತ್ರಸಾರಸಂಗ್ರಹದಲ್ಲಿ ಮಂತ್ರ, ಪೂಜೆ, ಪ್ರತಿಷ್ಠೆ, ದೇಗುಲನಿರ್ಮಾಣ, ಯಂತ್ರ, ಮೊದಲಾಗಿ ಸಕಲ ಉಪಾಸನೆಯ ರಹಸ್ಯಗಳು ತುಂಬಿವೆ. ದ್ವಾದಶಸ್ತೋತ್ರ, ನಖಸ್ತುತಿ ಮತ್ತು ಕಂದುಕಸ್ತುತಿಗಳು ಅಪೂರ್ವಸ್ತೋತ್ರಗಳಾಗಿ ದಾಖಲೆಯಾಗಿವೆ. ಅಧ್ಯಾತ್ಮದ ಸೀಮಾ ಪುರುಷ ರೊಬ್ಬರಿಂದ ರಚಿತವಾಗಿರುವ ಅಪೂರ್ವಚಿತ್ರಕಾವ್ಯವೆಂಬುದು ಅವರ ಯಮಕಭಾರತದ ವೈಶಿಷ್ಟ್ಯ. ಅವರ ಅನುವ್ಯಾಖ್ಯಾನ ಇಡೀ ಸೂತ್ರಸಾಹಿತ್ಯದ ಮೇಲೆ ಇರುವ ಏಕ ಮಾತ್ರ ಶ್ಲೋಕರೂಪ ಭಾಷ್ಯ. (ಕುಮಾರಿಲ ಭಟ್ಟರ ಶ್ಲೋಕವಾರ್ತಿಕವು ಶ್ಲೋಕರೂಪದ ಕೃತಿಯಾದರೂ ಅದು ಭಾಷ್ಯವಾಗಿರದೆ ಶಾಬರಭಾಷ್ಯಕ್ಕೆ ಬರೆಯಲ್ಪಟ್ಟ ಟೀಕೆಯಾಗಿದೆ). ಗಾನಶಾಸ್ತ್ರವನ್ನು ಕುರಿತು ಸಹ ಅವರು ಗ್ರಂಥವೊಂದನ್ನು ರಚಿಸಿದ ವಿವರ ಸುಮಧ್ವವಿಜಯಭಾವಪ್ರಕಾಶಿಕೆಯಲ್ಲಿದೆ.

ಅಪೂರ್ವವಾದ ಗ್ರಂಥಭಂಡಾರವನ್ನು ಹೊಂದಿದ್ದ ಮತ್ತೊಂದು ದಾಖಲೆಯೂ ಶ್ರೀಮಧ್ವಾಚಾರ್ಯರದಾಗಿದೆ. ಅದು ಪ್ರತಿವಾದಿಗಳೆಲ್ಲರ ಹೃದಯದಲ್ಲಿ ಅಪಾರ ಭೀತಿಹುಟ್ಟಿಸುವಷ್ಟು ವ್ಯಾಪಕವಾಗಿತ್ತು. ಅದನ್ನು ಕುವಾದಿಗಳು ಕುತಂತ್ರದಿಂದ ಅಪಹರಿಸಿದಾಗ, ಅದನ್ನು ಮರಳಿಪಡೆದ ರೀತಿಯಷ್ಟೆ ಅವರು ಆಗ ವರ್ತಿಸಿದ ಪ್ರಶಾಂತವಾದ ರೀತಿಯೂ ಆದರ್ಶಪ್ರಾಯವಾದುದು. ಆ ಗ್ರಂಥಗಳನ್ನೆಲ್ಲ ತಾಮ್ರದ ತಗಡಿನಲ್ಲಿ ಬರೆಸಿ ಅದನ್ನು ಕಟ್ಟಿಲ ಎಂಬಲ್ಲಿ ಭೂಗತಮಾಡಿರುವ ಅವರ ಮತ್ತೊಂದು ಯೋಜನೆ ಇಂದೂ ಜಾಗತಿಕ ಮಟ್ಟದಲ್ಲೂ, ಸಾಧ್ಯವಾಗದಿರುವ ಅಪೂರ್ವ ಯೋಜನೆ. ಹೀಗೆ ವಿಶ್ವಾಶ್ಚರ್ಯಕರವಾದ ಶ್ರೀಮದಾಚಾರ್ಯರ ಗ್ರಂಥಗಳಲ್ಲದೆ ಶ್ರೀಜಯತೀರ್ಥರ ಟೀಕಾಪ್ರಪಂಚದ ಮೇರುಕೃತಿ ನ್ಯಾಯಸುಧೆ, ಚಂದ್ರಿಕಾಚಾರ್ಯರ ವ್ಯಾಸತ್ರಯಗಳು, ಶ್ರೀವಾದಿರಾಜರ ಯುಕ್ತಿಮಲ್ಲಿಕೆ, ಶ್ರೀರಘೂತ್ತಮರ ಭಾವಬೋಧಗಳು, ಶ್ರೀರಾಘವೇಂದ್ರರ ಭಾಟ್ಟಸಂಗ್ರಹಗಳಂತಹ ಕೃತಿಗಳು ಮೊದಲಾದವು ಯಾವಕಾಲಕ್ಕೂ ಉಳಿಯಬಲ್ಲ ಮಹೋನ್ನತ ಕೃತಿಗಳಾಗಿವೆ.

ಹರಿದಾಸ ಸಾಹಿತ್ಯದಿಂದ ಕನ್ನಡ ಭಾಷೆಗೆ ಸಂದಿರುವ ಕಾಣಿಕೆ ಸಾಹಿತ್ಯದ ವ್ಯಾಪ್ತಿಯನ್ನೂ ಮೀರಿ, ಎಲ್ಲೇ ಇದ್ದರೂ ಕನ್ನಡ ತಮ್ಮ ಮಾತೃಭಾಷೆಯೆಂಬ ಬಾಂಧವ್ಯವನ್ನು ಮಾಧ್ವರಲ್ಲಿ ಬೆಳೆಸಿದೆ. ಈ ಮಟ್ಟಿಗೆ ಕನ್ನಡದ ಪೋಷಣೆಯಲ್ಲಿ ಮಾಧ್ವರ ಪಾತ್ರ ಎಂದೂ ಅನ್ಯಾದೃಶ. ಹೀಗೆ ದೇವಭಾಷೆಯಲ್ಲಿ ಮಾತ್ರವಲ್ಲದೆ ಮಾತೃಭಾಷೆಯಲ್ಲೂ ಆಧ್ಯಾತ್ಮಿಕಶಿಕ್ಷಣವನ್ನು ಒದಗಿಸಿದ ಏಕಮಾತ್ರ ವೈದಿಕಮತ ಎಂಬುದೂ ಇದರ ಮತ್ತೊಂದು ವೈಶಿಷ್ಟ್ಯ.

ವಿದ್ಯಾರಣ್ಯರಂತಹ ಅದ್ವೈತದ ಪ್ರಕಾಂಡಪಂಡಿತರನ್ನು ವಾದದಲ್ಲಿ ಸೋಲಿಸಿದ ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರಾದ ಅಕ್ಷೋಭ್ಯತೀರ್ಥರ ವಾದ ಕೌಶಲ ಮೂಲತಃ ಮಧ್ವಸಿದ್ಧಾಂತದ ಹಿರಿಮೆಗೆ ದ್ಯೋತಕವಾಗಿದೆ. ಆ ವಿಜಯದ ದ್ಯೋತಕವಾಗಿ ಸ್ಥಾಪಿತವಾದ ಜಯಸ್ತಂಭವು ಮುಳಬಾಗಿಲಿನಲ್ಲಿ ಇಂದೂ ಶೋಭಿಸುತ್ತಿದೆ.

ಗಯಾದಂತಹ ಲೋಕೋತ್ತರ ವೈಷ್ಣವಕ್ಷೇತ್ರವು ಇಂದು ಮಾಧ್ವರ ವ್ಯಾಪಕವಾದ ಪ್ರಭಾವಕ್ಕೆ ಸಾಕ್ಷಿ. ಅಲ್ಲಿನ ಗಯಾವಾಡರು ಉತ್ತರಾದಿಮಠದ ಶ್ರೀವಿದ್ಯಾಧೀಶರ ಕಾಲಕ್ಕೆ ಅವರ ಶಿಷ್ಯರಾಗಿದ್ದು ನಿಜವಾಗಿಯೂ ಅವರ ಸಿದ್ಧಾಂತದ ವಿಜಯವೇ ಆಗಿದೆ. ಅದರಂತೆ ತಿರುಪತಿಯಲ್ಲಿ ಶ್ರೀನಿವಾಸನನ್ನು ಹನ್ನೆರಡು ವರ್ಷಗಳ ಕಾಲ ಅವಿಚ್ಛಿನ್ನವಾಗಿ ಪೂಜಿಸಿದ ಹಿರಿಮೆ ಶ್ರೀವ್ಯಾಸರಾಯರದು.

ಪಂಢರಪುರದ ಪಾಂಡುರಂಗ ಮಾಧ್ವಹರಿದಾಸರ ಆರಾಧ್ಯದೈವ. ಶ್ರೀಮುಷ್ಣದಲ್ಲಿ ಇಂದೂ ಉತ್ತರಾದಿಮಠಕ್ಕೆ ವಿಶೇಷ ಮರ್ಯಾದೆ ಉಂಟು. ಧರ್ಮಸ್ಥಳದ ಮೇಲೆ ಶ್ರೀವಾದಿರಾಜರ ಪ್ರಭಾವ ಇಂತಹ ಮತ್ತೊಂದು ದೃಷ್ಟಾಂತ.

ಶ್ರೀನರಹರಿತೀರ್ಥರು, ಶ್ರೀಜಯತೀರ್ಥರು, ಶ್ರೀವ್ಯಾಸರಾಜರು, ಶ್ರೀವಿಜಯೀಂದ್ರರು, ಶ್ರೀರಾಘವೇಂದ್ರರು, ಶ್ರೀಸತ್ಯಬೋಧರು. ಶ್ರೀಸತ್ಯಸಂಧರು ಮೊದಲಾದರು ಪ್ರತಿಷ್ಠಾಪಿಸಿರುವ ದೇವತಾಮೂರ್ತಿಗಳು ಈ ಪರಂಪರೆಯ ಸಂಪತ್ತು. ಶ್ರೀವಾದಿರಾಜರು, ಶ್ರೀರಘೂತ್ತಮರು, ಶ್ರೀರಾಘವೇಂದ್ರರಂತಹ ಮಹನೀಯರಿಂದ ಸೋದೆ, ತಿರುಕೋಯಿಲೂರು, ಮಂತ್ರಾಲಯಗಳು ಹೊಸ ಕ್ಷೇತ್ರಗಳಾಗಿ ರೂಪುಗೊಂಡವು.

## ಪ್ರಮುಖ ಗ್ರಂಥಕಾರರು

ಶ್ರೀಮದಾಚಾರ್ಯರ ಪರಂಪರೆಯ ವಾಙ್ಮಯ ಸಂಪತ್ತು ಸಹ ಬೇರಾವ ದರ್ಶನಕ್ಕಿಂತಲೂ ಮಿಗಿಲಾದುದು. ಅನಂತರ ವಾಙ್ಮಯರಾಶಿಯ ಬಹುಭಾಗ ಮಧ್ವಾಚಾರ್ಯರ ಗ್ರಂಥಗಳ ಮೇಲೆ ಟೀಕೆ ಅಥವಾ ಟಿಪ್ಪಣಿಯಾಗಿದೆ ಎಂಬುದನ್ನು ಗಮನಿಸಿದರೆ ಪರಂಪರೆ ಇವರ ಗ್ರಂಥಗಳ ಮಹತ್ವವನ್ನು ಗುರುತಿಸಿದ ರೀತಿ ತಿಳಿಯುತ್ತದೆ.

ಶ್ರೀಮಧ್ವರ ಸಾಕ್ಷಾಚ್ಛಿಷ್ಯರಾದ ಶ್ರೀಪದ್ಮನಾಭತೀರ್ಥರು, ಶ್ರೀನರಹರಿ ತೀರ್ಥರು, ಶ್ರೀತ್ರಿವಿಕ್ರಮಪಂಡಿತಾಚಾರ್ಯರು, ಶ್ರೀನಾರಾಯಣಪಂಡಿತಾ ಚಾರ್ಯರು ಪ್ರಾಚೀನಟೀಕಾಕಾರರೆಂದು ಮಾನ್ಯರಾಗಿರುವರು. ಅನಂತರದ ಶ್ರೀಜಯತೀರ್ಥರಂತು ದ್ವೈತದರ್ಶನದ ಸರ್ವಸಮ್ಮತ ಟೀಕಾಕೃತ್ಪಾದರಾಗಿರುವರು. ಬೇರಾವ ದರ್ಶನಪ್ರಪಂಚಕ್ಕೂ ಇಂತಹ ಸರ್ವಮಾನ್ಯಟೀಕಾಕಾರರು ದೊರೆಯು ವುದಿಲ್ಲ. ಅನಂತರದ ಭಾಗವತ ಟಿಪ್ಪಣೀಕಾರರಾದ ಶ್ರೀವಿಜಯಧ್ವಜತೀರ್ಥರು, ಉಪನಿಷದ್ಭಾಷ್ಯಟೀಕೆಗಳ ಶ್ರೀವ್ಯಾಸತೀರ್ಥರು, ವ್ಯಾಸತ್ರಯಗಳ ಶ್ರೀವ್ಯಾಸರಾಜರು, ಯುಕ್ತಿಮಲ್ಲಿಕೆಯ ಶ್ರೀವಾದಿರಾಜರು, ಭಾವಬೋಧಕಾರರಾದ ಶ್ರೀರಘೂತ್ತಮ ತೀರ್ಥರು, ಶ್ರೀವೇದೇಶತೀರ್ಥರು, 104 ಗ್ರಂಥರಚಿಸಿದ ಹಿರಿಮೆಯ ಶ್ರೀವಿಜಯೀಂದ್ರರು, ಟೀಕಾಚಾರ್ಯರ ಸಮಗ್ರ ಗ್ರಂಥಗಳಿಗೆಲ್ಲ ಟಿಪ್ಪಣಿ ರಚಿಸುವ ವ್ರತದ ಶ್ರೀರಾಘವೇಂದ್ರತೀರ್ಥರು, ವಾಕ್ಯಾರ್ಥಚಂದ್ರಿಕೆಯ ಶ್ರೀವಿದ್ಯಾಧೀಶರು, ಪಂಚಾಭಿನವಕರ್ತೃಗಳಾದ ಶ್ರೀಸತ್ಯನಾಥರು, ಭಾವರತ್ನಕೋಶಗಳ ಶ್ರೀಸುಮತೀಂದ್ರರು, ಭಾಗವತಟಿಪ್ಪಣಿಗಳ ಶ್ರೀಸತ್ಯಧರ್ಮರು, ಶ್ರೀವ್ಯಾಸ ತತ್ತ್ವಜ್ಞರು, ಶ್ರೀವಿಷ್ಣುತೀರ್ಥರು ಈ ಪರಂಪರೆಯ ಪ್ರಮುಖ ಟಿಪ್ಪಣೀಕಾರರು.

ವಾದರತ್ನಾವಲಿಯ ವಿಷ್ಣುದಾಸಾಚಾರ್ಯರು, ಸುಧಾ ಟಿಪ್ಪಣಿಯ ಯದುಪತ್ಯಾಚಾರ್ಯರು, ತೀರ್ಥಪ್ರಶಸ್ತಿಗೆ ಪಾತ್ರರಾದ ಬಿದರಹಳ್ಳಿ ಶ್ರೀನಿವಾಸತೀರ್ಥರು, ರಾಘವೇಂದ್ರತೀರ್ಥರ ಪುತ್ರ ಲಕ್ಷ್ಮೀನಾರಾಯಣಾಚಾರ್ಯರು, ಋಗ್ಭಾಷ್ಯ ಟಿಪ್ಪಣಿಯ ಛಲಾರೀ ನರಸಿಂಹಾಚಾರ್ಯರು, ಸತ್ತತ್ತ್ವರತ್ನಮಾಲೆಯ ತಾಮ್ರಪರ್ಣೀ ಆನಂದತೀರ್ಥಾಚಾರ್ಯರು, ಪದಾರ್ಥಸಂಗ್ರಹದ (ಮಧ್ವಸಿದ್ಧಾಂತಸಾರದ) ವೇದಗರ್ಭ ಪದ್ಮನಾಭಾಚಾರ್ಯರು, ಸ್ಮೃತಿಮುಕ್ತಾವಳಿ ಕೃಷ್ಣಾಚಾರ್ಯರು ಹೀಗೆ ಅನೇಕರು ಗೃಹಸ್ಥ ಗ್ರಂಥಕಾರರಾಗಿ ಸುಪ್ರಸಿದ್ಧರು.

ದ್ವೈತವೇದಾಂತದಲ್ಲಿ ಟೀಕೆಗಳು, ಟಿಪ್ಪಣಿಗಳು, ವಾದಗ್ರಂಥಗಳು, ಪ್ರಮೇಯಗ್ರಂಥಗಳು, ಕಾವ್ಯನಾಟಕಗಳು ಮತ್ತು ಸ್ತೋತ್ರಗಳು ಮೊದಲಾದ ಎಲ್ಲ ಬಗೆಯ ಕೃತಿಗಳೂ ದೊರೆಯುತ್ತವೆ. ಈ ಪರಂಪರೆಯಲ್ಲಿ ರಚಿತವಾಗಿರುವ ಸ್ತೋತ್ರ ಸಮೂಹವೇ ಒಂದು ಸಾವಿರಪುಟದ ವ್ಯಾಪ್ತಿಯನ್ನು ಮೀರುವುದು.[೧] ಇವೆಲ್ಲ ಗ್ರಂಥಗಳು ಈ ಮತವು ಅದೆಷ್ಟು ಜೀವಂತ, ಇದರ ಅಧ್ಯಯನದ ಪರಂಪರೆ ಅದೆಷ್ಟು ವ್ಯಾಪಕ ಎನ್ನಲು ನಿದರ್ಶನವಾಗಿದೆ.

ಇಂತಹ ವಾಙ್ಮಯ ಕೇವಲ ಪುಸ್ತಕರೂಪದಲ್ಲಿ ಉಳಿಯದೆ ಪರಂಪರೆಯ ಪಠ್ಯಗ್ರಂಥಗಳಾಗಿ ಮಾನ್ಯವಾಗಿದ್ದವು ಎನ್ನಲು ಇಂದಿಗೂ ನಾಡಿನ ಮೂಲೆಮೂಲೆಯಲ್ಲಿ ದೊರೆಯುವ ಸಾವಿರಾರು ಹಸ್ತಪ್ರತಿಗಳು ಸಾಕ್ಷಿಯಾಗಿವೆ. ಇತರ ಯಾವ ಪರಂಪರೆಗಿಂತಲೂ ಇದು ಹೆಚ್ಚು ಜೀವಂತ ಪರಂಪರೆಯೆಂಬುದು ಇವರ ಅನುಯಾಯಿಗಳಲ್ಲಿ ಕಂಡುಬರುವ ಅಪಾರವಾದ ಸಾತ್ವಿಕ ದೀಕ್ಷೆ, ಕಾಲ ಕಾಲಕ್ಕೆ ನಡೆಯುವ ನ್ಯಾಯಸುಧಾದಿ ಗ್ರಂಥಗಳ ಮಂಗಳಕಾರ್ಯಗಳಿಂದ ವ್ಯಕ್ತವಾಗುತ್ತವೆ.

## ಮಧ್ವಸಿದ್ಧಾಂತದ ಪೂರ್ವಾಪರ

ಅದ್ವೈತ ದರ್ಶನದ ಆಚಾರ್ಯರಾಗಿ ಶಂಕರಾಚಾರ್ಯರು ಪ್ರಸಿದ್ಧರಾಗಿದ್ದರೂ ಅವರ ಸಾಧನೆಗೆ ಪೂರ್ವರಂಗ ಅವರ ಗುರುಗಳಾದ ಗೌಡಪಾದರು ಮತ್ತು ಗೋವಿಂದಭಗವತ್ಪಾದ ಎಂಬವರಿಂದ ಸಿದ್ಧವಾಗಿತ್ತು. ಅದ್ವೈತದ ಆಕರಗ್ರಂಥವಾಗಿರುವ ಗೌಡಪಾದಕಾರಿಕೆ ಇದಕ್ಕೆ ಉತ್ತಮ ಸಾಕ್ಷಿ. ಅದರಂತೆ ವಿಶಿಷ್ಟಾದ್ವೈತಮತದ ಆಚಾರ್ಯರಾದ ರಾಮಾನುಜರಿಗೆ ನಾಥಮುನಿ ಮತ್ತು

೧. ಇಂತಹ ಸ್ತೋತ್ರಗಳ ೬೦೦ ಪುಟಗಳ ಸಾಹಿತ್ಯವನ್ನು ಐತರೇಯ ಪ್ರಕಾಶನವು ಮೂರು ಭಾಗಗಳಲ್ಲಿ ಪ್ರಕಟಿಸಿದೆ. ಇನ್ನೂ ಎರಡು ಭಾಗಗಳು ಪ್ರಕಟವಾಗಲಿವೆ.

ಯಾಮುನಾಚಾರ್ಯರಿಂದ ಪೂರ್ವರಂಗ ಪೂರ್ಣವಾಗಿ ಸಿದ್ಧವಾಗಿತ್ತು. ಈ ಅರ್ಥದಲ್ಲಿ ಶಂಕರಾಚಾರ್ಯ ಮತ್ತು ರಾಮಾನುಜಾಚಾರ್ಯರ ಸಾಧನೆಯಲ್ಲಿ ಅವರ ಹಿಂದಿನವರ ಕೊಡುಗೆ ಅಪಾರ; ಆದರೆ ಶ್ರೀಮಧ್ವಾಚಾರ್ಯರಿಗೆ ಇಂತಹ ಯಾವ ಹಿನ್ನಲೆಯೂ ಇರಲಿಲ್ಲ ಎಂಬುದನ್ನು ಗಮನಿಸಬೇಕು. ಎಂದರೆ ದ್ವೈತದರ್ಶನದ ಪ್ರತಿಪಾದನೆಯನ್ನು ತಾತ್ತ್ವಿಕಹಂತದಿಂದ ಹಿಡಿದು ಆಚಾರಹಂತದವರೆಗೆ ಪ್ರತಿಹಂತದಲ್ಲೂ ನೇರವಾಗಿ ಮೂಲಗ್ರಂಥಗಳಿಂದ ರೂಪಿಸಿದ ಅಸಾಮಾನ್ಯ ಕಾರ್ಯ ಇವರದು. ಈ ದೃಷ್ಟಿಯಿಂದಲೂ ಇವರು 'ಪೂರ್ಣಪ್ರಜ್ಞರು' ಎಂಬುದು ಸಿದ್ಧವಾಗುತ್ತದೆ.

ಬೌದ್ಧಪರಂಪರೆ ಹೀನಯಾನ, ಮಹಾಯಾನ ಎಂಬುದಾಗಿ ಎರಡು, ಮಾಧ್ಯಮಿಕ, ಯೋಗಾಚಾರ, ಸೌತ್ರಾಂತ್ರಿಕ, ವೈಭಾಷಿಕ ಎಂಬುದಾಗಿ ನಾಲ್ಕು; ಜೈನಮತ ದಿಗಂಬರ ಶ್ವೇತಾಂಬರ ಎಂಬುದಾಗಿ ಎರಡು, ಸಾಂಖ್ಯಮತ ಸೇಶ್ವರಸಾಂಖ್ಯ, ನಿರೀಶ್ವರಸಾಂಖ್ಯ ಎಂಬುದಾಗಿ ಎರಡು; ನ್ಯಾಯಮತ ನ್ಯಾಯ ಮತ್ತು ವೈಶೇಷಿಕ ಎಂಬುದಾಗಿ ಎರಡು; ಪೂರ್ವಮೀಮಾಂಸಾಮತ ಭಾಟ್ಟ, ಪ್ರಾಭಾಕರ ಮತ್ತು ಮುರಾರಿ ಎಂಬುದಾಗಿ ಮೂರು; ಅದ್ವೈತಮತ ಭಾಮತೀಪ್ರಸ್ಥಾನ, ವಿವರಣಪ್ರಸ್ಥಾನ ಮೊದಲಾಗಿ ಅನೇಕ; ವಿಶಿಷ್ಟಾದ್ವೈತಮತ ತೆಂಗಲೈ, ವಡಗಲೈ ಎಂಬುದಾಗಿ ಎರಡು— ಹೀಗೆ ಕವಲುಗಳಾಗಿ ಒಡೆದು ಅವುಗಳ ಸೈದ್ಧಾಂತಿಕ ಪರಂಪರೆಯಲ್ಲಿ ಏಕತೆ ಅಖಂಡವಾಗಿ ಉಳಿದಿಲ್ಲ. ಅನಂತರದ ಅವರ ವ್ಯಾಖ್ಯಾತೃಗಳು ಮೂಲಕಾರರಿಗೆ ಸರ್ವವಿಧದ ನಿಷ್ಠೆಯನ್ನು ತೋರಿಲ್ಲ. ಆದರೆ ದ್ವೈತದರ್ಶನದಲ್ಲಿ ಮಾತ್ರ ಭಾಷ್ಯ, ಟೀಕೆ, ಟಿಪ್ಪಣಿ ಮೊದಲಾದ ಸಕಲಹಂತದಲ್ಲೂ ಅಖಂಡವಾದ ಏಕತೆ ಉಳಿದು ಬಂದಿದೆ. ಇದು ಐತಿಹಾಸಿಕವಾಗಿ ಸಿದ್ಧವಾಗುವ ಅದರ ಅಬಾಧಿತಮಹತ್ವಕ್ಕೆ ದ್ಯೋತಕ. ಇಂದು ದ್ವೈತಿಗಳಲ್ಲಿ ಮಠ ಭೇದವಿದ್ದರೂ ಮತಭೇದವಿಲ್ಲವೆಂಬುದನ್ನು ಗಮನಿಸಬೇಕು.

## ಹರಿದಾಸಸಾಹಿತ್ಯ

ಹರಿದಾಸಸಾಹಿತ್ಯವು ಮಧ್ವಮತಕ್ಕೆ ಪೂರ್ಣನಿಷ್ಠವಾಗಿರುವ ಸಾಹಿತ್ಯ, ಮತ್ತೊಂದು ಭಾಷೆಯ ಒಂದು ಪ್ರಭಾವಿಸಾಹಿತ್ಯ ಮೂಲಸಿದ್ಧಾಂತಕ್ಕೆ ಇಂತಹ ನಿಷ್ಠೆ ಉಳಿಸಿಕೊಂಡ ಮತ್ತೊಂದು ನಿದರ್ಶನ ದಾರ್ಶನಿಕ ಪ್ರಪಂಚದಲ್ಲೇ ಮತ್ತೊಂದಿಲ್ಲ. ಶ್ರೀವೈಷ್ಣವಮತದಲ್ಲಿರುವ ದ್ರಾವಿಡ ಸಾಹಿತ್ಯ ಆಳ್ವಾರುಗಳ ಸಾಹಿತ್ಯ ವಿಶಿಷ್ಟಾದ್ವೈತಮತವನ್ನು ಆಧರಿಸಿದ ಸಾಹಿತ್ಯವಲ್ಲ; ಆದರೆ ಆ ಮತಕ್ಕೇ ಆಧಾರವೆನ್ನಿಸಿಕೊಂಡಿರುವ ಸಾಹಿತ್ಯ.

ಪೂರ್ಣಪ್ರಮಾಣದ ಭಕ್ತಿಸಾಹಿತ್ಯವೆಂಬುದು ಹರಿದಾಸ ಸಾಹಿತ್ಯದ ಮತ್ತೊಂದು ಹಿರಿಮೆ. ಅದು ಮಧ್ವಸಿದ್ಧಾಂತದ ಕನ್ನಡ ಪಡಿಯಚ್ಚು; ಎಂದರೆ ಮಧ್ವಸಿದ್ಧಾಂತವು ಭಕ್ತಿಮಾರ್ಗ ಎಂಬುದಕ್ಕೆ ನಿದರ್ಶನ; ಮರಾಠಿ, ಹಿಂದಿ ಮೊದಲಾದ ಭಾಷೆಗಳಲ್ಲಿ ಭಕ್ತಿಸಾಹಿತ್ಯವಿದ್ದರೂ ಬೇರೆ ಯಾವುದೇ ಒಂದು ಮತದ ಪಡಿಯಚ್ಚಾಗಿ ಅದು ಬೆಳೆದು ಬಂದದ್ದಲ್ಲ ಎಂಬುದನ್ನು ಗಮನಿಸಬೇಕು.

ಇಂದು ಮಾಧ್ವರು ಯಾವ ರಾಜ್ಯದಲ್ಲಿದ್ದರೂ ಸಾಮಾನ್ಯವಾಗಿ ಅವರಿಗೆ ಸ್ವಲ್ಪವಾದರೂ ಕನ್ನಡ ಬರುವುದನ್ನು ಕಾಣಬಹುದು; ಇದಕ್ಕೆ ಆ ಮತಸ್ಥಾಪಕರು ಕನ್ನಡದವರಾಗಿರುವುದು ಮುಖ್ಯಕಾರಣವಾಗಿರುವಂತೆ, ಅವರ ಮೇಲೆ ಕನ್ನಡದ ಹರಿದಾಸಸಾಹಿತ್ಯ ಮಾಡಿರುವ ಪ್ರಭಾವವು ಮತ್ತೊಂದು ಕಾರಣವಾಗಿರಬೇಕು ಎಂದು ಸುಲಭವಾಗಿ ಊಹಿಸಬಹುದು.

## ಕೆಲವು ಅಪೂರ್ವಕೃತಿಗಳು

ಇಷ್ಟು, ಶ್ರೀಮಂತವಾದ ದ್ವೈತದರ್ಶನದಿಂದ ಸಂಸ್ಕೃತದಲ್ಲಿ ನಡೆದಿರುವ ವಾಙ್ಮಯಸೇವೆ ಅಪಾರ. ಅಲಂಕಾರ ಶಾಸ್ತ್ರಕ್ಕೆ ಸುಧೀಂದ್ರತೀರ್ಥರ 'ಅಲಂಕಾರ ಮಂಜರೀ', 'ಸಾಹಿತ್ಯಸಾಮ್ರಾಜ್ಯ' ಕೃತಿಗಳು, ಅನಂತರದ ಶ್ರೀನಿವಾಸಾಚಾರ್ಯರ 'ಅಲಂಕಾರಮುಕ್ತಾವಲೀ', ಕೃಷ್ಣಕವಿಯ 'ಮಂದಾರಮರಂದಚಂಪೂ', ಛಂದಃಶಾಸ್ತ್ರಕ್ಕೆ ಶ್ರೀರಘೂವರ್ಯತೀರ್ಥರ 'ರಘುನಾಥವಿಜಯ', ಕಾವ್ಯಪ್ರಪಂಚಕ್ಕೆ ಶ್ರೀತ್ರಿವಿಕ್ರಮ ಪಂಡಿತಾಚಾರ್ಯರ 'ಉಷಾಹರಣ'. ಶ್ರೀನಾರಾಯಣಪಂಡಿತಾಚಾರ್ಯರ 'ಸುಮಧ್ವವಿಜಯ', 'ಶುಭೋದಯ', 'ಮಣಿಮಂಜರೀ', 'ಸಂಗ್ರಹರಾಮಾಯಣ'ಗಳು, ಶ್ರೀವಾದಿರಾಜರ 'ರುಕ್ಮಿಣೀಶವಿಜಯ' ತೀರ್ಥಪ್ರಬಂಧ ಮತ್ತು ಅನೇಕ ಅಪೂರ್ವಸ್ತೋತ್ರಗಳೂ, ಶ್ರೀರಾಜರಾಜೇಶ್ವರತೀರ್ಥರ 'ರಾಮಸಂದೇಶ', ಶ್ರೀವಿಜಯೀಂದ್ರರ 'ವ್ಯಾಸರಾಜಾಭ್ಯುದಯ', ಶ್ರೀನಾರಾಯಣಾಚಾರ್ಯರ 'ರಾಘವೇಂದ್ರವಿಜಯ', ಶ್ರೀಸುಮತೀಂದ್ರರ 'ರಾಮತಾರಾವಲೀ', 'ರಾಮದಂಡಕ' ಗಳು, ಶ್ರೀಸತ್ಯಧರ್ಮರ 'ಯದುವರಚರಿತಾಮೃತಲಹರೀ', 'ಗಂಗಾಲಹರೀ', 'ವಿರಹಿಮೋದಸುಧಾ', ಶೃಂಗಾರಶ್ಲೋಕಗಳು ಮೊದಲಾದ ಅನೇಕ ಕೃತಿಗಳು; ನಾಟಕಪ್ರಕಾರಕ್ಕೆ ಶ್ರೀವಿಜಯೀಂದ್ರರ 'ಸುಭದ್ರಾಧನಂಜಯ', ಶ್ರೀಸುಧೀಂದ್ರರ 'ಸುಭದ್ರಾಹರಣ', ಘನಶ್ಯಾಮಕವಿಯ 'ಪ್ರಚಂಡರಾಹೂದಯ' ಗಳು; ನ್ಯಾಯಮತಕ್ಕೆ ಶ್ರೀವಿಜಯೀಂದ್ರರ 'ನ್ಯಾಯಾಧ್ವದೀಪಿಕಾ', ಬಿದರಹಳ್ಳಿ ಶ್ರೀನಿವಾಸತೀರ್ಥರ'ಪದಾರ್ಥದೀಪಿಕಾ', ಉಮ್ಮರ್ಜಿಪ್ರಹ್ಲಾದಕೃಷ್ಣಾಚಾರ್ಯರ 'ತರ್ಕದೀಪಾವಲೀ(ಮುಕ್ತಾವಲೀವ್ಯಾಖ್ಯಾನ)'; ವ್ಯಾಕರಣಶಾಸ್ತ್ರಕ್ಕೆ ಶ್ರೀ ಸತ್ಯಪ್ರಿಯ

ತೀರ್ಥರ ಮಹಾಭಾಷ್ಯ ಟೀಕಾ, ಛಲಾರೀ ನರಸಿಂಹಾಚಾರ್ಯರ ಶಾಬ್ದಿಕಕಂಠ ಮಣಿ ಮತ್ತು ಅದರ ದೀಧಿತಿ, ಛಲಾರೀ ಶೇಷಾಚಾರ್ಯರ 'ಸುಶಬ್ದ ಪ್ರದೀಪ'; ಧರ್ಮಶಾಸ್ತ್ರಕ್ಕೆ ಛಲಾರೀನರಸಿಂಹಾಚಾರ್ಯರ 'ಸ್ಮೃತ್ಯರ್ಥಸಾಗರ', ಛಲಾರೀ ಶೇಷಾಚಾರ್ಯರ 'ನಿರ್ಣಯರತ್ನ', ಕೃಷ್ಣಾಚಾರ್ಯರ 'ಸ್ಮೃತಿಮುಕ್ತಾವಲೀ', ರಾಯಸಂವೆಂಕಟಾದ್ರಿಗಳ 'ಸ್ಮೃತಿರತ್ನಾಕರ', ತಿರುಮಲಾಚಾರ್ಯರ 'ನಿಬಂಧ ಚೂಡಾಮಣಿ'ಗಳು; ಪೂರ್ವಮೀಮಾಂಸೆಗೆ ಶ್ರೀರಾಘವೇಂದ್ರರ 'ಭಾಟ್ಟಸಂಗ್ರಹ' ಗಳು ನಿದರ್ಶನ. ಶ್ರೀಪುರಂದರದಾಸರಂತೂ 'ಕರ್ನಾಟಕ ಸಂಗೀತ ಪಿತಾಮಹ' ಎಂದೇ ಪ್ರಸಿದ್ಧರಾಗಿದ್ದಾರೆ.

ಕರ್ನಾಟಕ ಸಂಗೀತದ ಪಿತಾಮಹ ಎಂಬ ಅಸಾಧಾರಣ ಮಹತ್ವ ದ್ವೈತಿಗಳದು ಎಂಬುದು ಎಂತಹ ಅಭಿಮಾನದ ಸಂಗತಿ; ಇದರಂತೆ ಶ್ರೀರಾಘವೇಂದ್ರಸ್ವಾಮಿಗಳು ಮತ್ತು ಪೂರ್ವಜರು ಖ್ಯಾತವೈಣಿಕರು; ಇದರ ಮೂಲ ಹಿರಿಮೆ ಎಲ್ಲ ಸರ್ವಮೂಲಕಾರರಾದ ಶ್ರೀಮಧ್ವಾಚಾರ್ಯರದೇ ಆಗಿದೆ. ಕನ್ನಡ ಭಾಷೆಯ ಬೆಳವಣಿಗೆಗಂತೂ ದಾಸಾಹಿತ್ಯದ ಕೊಡುಗೆ ಅವಿಸ್ಮರಣೀಯ. ಕನ್ನಡ ಭಾಷೆಗೆ ಪ್ರಾಸಾದಿಕತೆ, ಗೇಯತೆ ಮೊದಲಾದವುಗಳನ್ನು ತಂದುಕೊಟ್ಟ ಶ್ರೇಯಸ್ಸು ಹರಿದಾಸ ಸಾಹಿತ್ಯದ್ದು, ಎಂದರೆ ಮಧ್ವಸಿದ್ಧಾಂತದ್ದು.

ಯಕ್ಷಗಾನಕಲೆಗೂ ಶ್ರೀಮಧ್ವಮತದ್ದೇ ಪ್ರೇರಣೆ ಎನ್ನಲು ಅದು ದಕ್ಷಿಣ ಕನ್ನಡದ ಕಲೆಯಾಗಿರುವುದು ಮತ್ತು ಅವುಗಳ ಪ್ರಧಾನಪಾತ್ರಗಳ ಹಣೆಯಮೇಲೆ ತಪ್ಪದೆ ಅಂಗಾರ-ಅಕ್ಷತೆಗಳು ಕಾಣುವುದು. ಇದಕ್ಕೆ ಪ್ರತ್ಯಕ್ಷ ನಿದರ್ಶನ ಎಂದು ಸಂಶೋಧಕರು ಗುರುತಿಸಿದ್ದಾರೆ.

## ರಾಜಮನ್ನಣೆ

ರಾಜಕೀಯವಲಯದಲ್ಲೂ ಮಾಧ್ವರ ಪಾತ್ರ ಗಣನೀಯವಾದುದು. ಕಾಸರಗೋಡಿನ ಸಿಂಹವೆಂದೇ ಖ್ಯಾತನಾಗಿದ್ದ ಜಯಸಿಂಹರಾಜ ಶ್ರೀಮದಾಚಾರ್ಯರ ಸಾಕ್ಷ್ಯಚ್ಛಿಷ್ಯ. ಮುಸಲ್ಮಾನದೊರೆಯೊಬ್ಬನ ಮೇಲೆ ಕೇವಲ ಮಾತಿನ ಮೋಡಿಯಿಂದಲೇ ಅವನು ಅರ್ಧರಾಜ್ಯ ನೀಡುವಷ್ಟು ಪ್ರಭಾವ ಬೀರಿದ್ದು ಶ್ರೀಮದಾಚಾರ್ಯರ ಮತ್ತೊಂದು ಕೌಶಲ. ಅವನು ಹಾಗೆ ನೀಡಿದ ರಾಜ್ಯವನ್ನು ನಿರಾಕರಿಸಿದ್ದು ಆಚಾರ್ಯರ ಅಪಾರ ವಿರಕ್ತಿಗೆ ದ್ಯೋತಕ. ಅವರು ಈಶ್ವರದೇವ ಎಂಬ ರಾಜನನ್ನು ಬಗ್ಗುಬಡಿದ ವಿಚಾರವು ಸುಮಧ್ವವಿಜಯದಲ್ಲಿದೆ. ಶ್ರೀಪದ್ಮನಾಭತೀರ್ಥರ ಪ್ರೇರಣೆ ವಿಜಯನಗರ ಸ್ಥಾಪನೆಗೆ ಕಾರಣವಾಯಿತೆನ್ನಲು ಕೆಲವು ಪ್ರಾಚೀನ ದಾಖಲೆಗಳುಂಟು. ಅವರ ಮತ್ತು ಅವರ ಅನಂತರದ

ಶ್ರೀನರಹರಿತೀರ್ಥರ ಮೂಲಬೃಂದಾವನಗಳು ವಿಜಯನಗರದಲ್ಲೇ ಇರುವುದು ಸಹ ಈ ವಾದಕ್ಕೆ ಪೋಷಕವಾಗಿದೆ. ಶ್ರೀನರಹರಿತೀರ್ಥರು ಶ್ರೀಮದಾಚಾರ್ಯರ ಆದೇಶದ ಮೇರೆಗೆ ಹನ್ನೆರಡುವರ್ಷಗಳ ಕಾಲ ಕಲಿಂಗದೇಶವನ್ನು ಪಾಲಿಸಿದವರು, ಆಗ ಒದಗಿದ್ದ ಯುದ್ಧವೊಂದರಲ್ಲಿ ಸ್ವತಃ ಕಾದಿ ಗೆದ್ದವರು, ಶ್ರೀಪಾದರಾಜರು ಚಂದ್ರಗಿರಿಯ ವೀರನರಸಿಂಹಭೂಪತಿಯಿಂದ ಆರಾಧಿತರು, ಶ್ರೀವ್ಯಾಸರಾಜರು ಚಕ್ರವರ್ತಿಯಾದ ಕೃಷ್ಣದೇವರಾಯನಿಂದ ತ್ರಿಕಾಲಗಳಲ್ಲಿಯೂ ಕುಲದೇವತೆಯಂತೆ ಆರಾಧಿತರಾಗಿದ್ದವರು, ಸೋದೆಯ ಅರಸಪ್ಪನಾಯಕನನ್ನು ಶಿಷ್ಯನನ್ನಾಗಿ ಮಾಡಿಕೊಂಡಿದ್ದ ಶ್ರೀವಾದಿರಾಜರು, ತಂಜಾವೂರಿನ ರಘುನಾಥನಾಯಕನಿಂದ ಪೂಜಿತರಾಗಿದ್ದ ಶ್ರೀಸುಧೀಂದ್ರರು ಮತ್ತು ರಾಘವೇಂದ್ರರು, ಸವಣೂರಿನ ನವಾಬ ಮೊದಲಾದ ರಾಜರನ್ನು ನಿಯಂತ್ರಿಸಿದ ಶ್ರೀಸತ್ಯಬೋಧರು, ಸ್ವತಃ ಪೂರ್ವಜೀವನಗಳಲ್ಲಿ ರಾಜ್ಯವಾಳಿದ್ದ ಕನಕದಾಸರು, ಆದವಾನಿಯ ನವಾಬನಿಗೆ ದಿವಾನರಾಗಿದ್ದ ವೆಂಕಣ್ಣ ಮತ್ತು ಪಂಗನಾಮದ ತಿಮ್ಮಣ್ಣಯ್ಯನವರು, ಹೈದರಾಲಿ, ಟೀಪುಸುಲ್ತಾನರಿಗೆ ದಿವಾನರಾಗಿದ್ದ ಪೂರ್ಣಯ್ಯನವರು ಇದಕ್ಕೆ ನಿದರ್ಶನ ರಾಗಿರುವರು. ಶ್ರೀವಿಜಯೀಂದ್ರರು ಮತ್ತು ಶ್ರೀ ರಾಘವೇಂದ್ರರು ಮೊದಲಾದವರು ಚತುಃಷಷ್ಟಿಕಲಾಕೋವಿದರೆಂದೇ ಪ್ರಸಿದ್ಧರಾಗಿದ್ದರು.

ನಿಷ್ಠಾವಂತ ಮಾಧ್ವರೆಲ್ಲ ಕಡ್ಡಾಯವಾಗಿ ಆಚರಿಸುವ ಏಕಾದಶೀ, ಕೃಷ್ಣಾಷ್ಟಮಿಗಳು ಆ ಮತದ ಜೀವಂತಿಕೆಗೆ ಉಜ್ವಲ ನಿದರ್ಶನ.

## ಮಹಾಮಹಿಮರು

ಮಾಧ್ವಮತದ ಶ್ರೀವಾದಿರಾಜರು, ಶ್ರೀರಘೂತ್ತಮರು ಮತ್ತು ಶ್ರೀರಾಘವೇಂದ್ರರು ಮೊದಲಾದ ಮಹಾನುಭಾವರಂತೂ ಕಲಿಯುಗದ ಕಲ್ಪವೃಕ್ಷ, ಕಾಮಧೇನುಗಳೆಂದೇ ಸುಪ್ರಸಿದ್ಧರಾಗಿರುವ ಮಹಿಮಾವಂತರು. ಅನೇಕ ಶತಕಗಳೇ ಉರುಳಿದರೂ ಅಚ್ಚಳಿಯದೇ ಸಾಗಿರುವ ಅವರ ಆಶ್ರಿತವಾತ್ಸಲ್ಯ, ಅದ್ಭುತ ಪವಾಡಗಳು ವೈಜ್ಞಾನಿಕ ಪ್ರಪಂಚಕ್ಕೆ ಬಿಡಿಸಲಾಗದ ಒಗಟು. ನಾಸ್ತಿಕರಿಗೆಲ್ಲ ಸಮಸ್ಯೆಯಾಗಿರುವ ರಹಸ್ಯ. ಧಾರ್ಮಿಕಶ್ರದ್ಧೆಯನ್ನು ಸಹಸ್ರಾರು ಜನರಲ್ಲಿ ಇಂದೂ ರಕ್ಷಿಸಿರುವ ದಿವ್ಯ ಸಂಜೀವಿನಿ. ಇಂತಹವರು ಎಲ್ಲ ಮತಗಳಲ್ಲೂ ಸಿಕ್ಕುವುದಿಲ್ಲ ಎನ್ನಲು, ಎಲ್ಲಾ ಮತದವರೂ ಇವರ ಒಲುಮೆಗೆ ಸಾಲುಗಟ್ಟಿ ನಿಂತಿರುವುದೇ ಸಾಕ್ಷಿ.

ಶ್ರೀಮದಾಚಾರ್ಯರಂತೂ ಸಕಲಸದ್ಗುಣಗಳ ಖಣಿ. ಸುದೃಢವಾದ ವಿಚಾರದೊಂದಿಗೆ ಸದೃಢವಾದ ಶರೀರ ಅವರದು; ಒಂದೇ ಕೈಯಲ್ಲಿ ಎತ್ತಿ ಕಳಸದ ಬಳಿ ಭದ್ರಾನದಿಗೆ ದೊಡ್ಡಬಂಡೆಯೊಂದನ್ನು ಸೇತುವೆಯಂತೆ ಇರಿಸಿರುವ ಅವರ ಬಲ ಇಡೀ ಇತಿಹಾಸದಲ್ಲೇ ಅದ್ಭುತ ಜಾಗತಿಕ ದಾಖಲೆ. ಗರ್ಭವಾಸವಿಲ್ಲದ ಜನನ

ಒಂದು ದಾಖಲೆಯಾದರೆ, ಶರೀರ ತ್ಯಾಗಮಾಡದೆ ಸಶರೀರರಾಗಿ ಅವರು ಇಂದೂ ಬದರಿಯಲ್ಲಿ ಶ್ರೀವ್ಯಾಸರ ಶಿಷ್ಯರಾಗಿ ನೆಲೆಸಿರುವುದು ಮತ್ತೊಂದು ದಾಖಲೆಯಾಗಿದೆ. ಚಿರಂಜೀವಿಯಾದ ಹನುಮಂತನ ಅವತಾರವೇ ಅವರು ಎಂಬುದು ಇದರಿಂದಲೂ ದೃಢಪಡುವುದು.

ಯಾವುದೋ ಗುರಿಯ ಸಾಧನೆಗೆ ಅಪೇಕ್ಷೆಯೊಂದೇ ಸಾಲದು ಅರ್ಹತೆಯೂ ಇರಬೇಕು. ಅರ್ಹತೆಗೆ ತಕ್ಕ ಸಾಧನೆ, ಸಾಧನೆಗೆ ತಕ್ಕ ಸಿದ್ಧಿ; ಪಾಪಗಳಿಗೆ ಎಂದೂ ಅವಕಾಶವಿಲ್ಲ, ಆದರೆ ಪಾಪಿಗಳಿಗೆ ಮಾತ್ರ ಅವರು ನಿಜಕ್ಕೂ ಪಶ್ಚಾತ್ತಾಪಪಟ್ಟು ಉದ್ಧಾರ ಬಯಸಿದರೆ ಅಂತಹವರಿಗೆಲ್ಲ ಉನ್ನತಿಗೆ ಖಚಿತ ಅವಕಾಶ. ವರ್ಣಾಶ್ರಮಗಳಿಗೆಲ್ಲ ಸ್ವಾಭಾವಿಕಗುಣನಿಮಿತ್ತವಾದ ಉಪಾಧಿನಿಮಿತ್ತವಾದ ಎಂಬ ಹೊಸ ಅರ್ಥಗಳ ಆವಿಷ್ಕಾರ Social Justice, Political Justice ಮೊದಲಾದ ಎಲ್ಲಾ Justice ಗಳಿಗಿಂತ Spiritual Justice ಪ್ರಧಾನ ಎಂಬ ತಾತ್ತ್ವಿಕ ನಿರೂಪಣೆ, ಮೊದಲಾದ ಪ್ರತಿಯೊಂದು ಕಾರಣಕ್ಕಾಗಿಯೂ ಶ್ರೀಮಧ್ವಾಚಾರ್ಯರ ದರ್ಶನ ಸರ್ವಗ್ರಾಹ್ಯವಾಗಿದೆ.

## ಭೇದ, ತಾರತಮ್ಯಗಳ ಆಂತರ್ಯ

ಮಧ್ವಸಿದ್ಧಾಂತದಲ್ಲಿನ 'ಜೀವತ್ರೈವಿಧ್ಯ, ತಾರತಮ್ಯ, ನಿತ್ಯನರಕ, ಪಂಚಭೇದ' ಎಂಬ ನಾಲ್ಕು ವಿಷಯಗಳ ಬಗ್ಗೆ 'ಇದು ಸಂಕುಚಿತ ದೃಷ್ಟಿಯ ವಿವೇಚನೆ' ಎಂಬ ಆರೋಪವನ್ನು ಕೆಲವರು ಮಾಡುವುದುಂಟು. ಇದಕ್ಕೆಲ್ಲ ಇವುಗಳ ತಾತ್ತ್ವಿಕ ಮೂಲ ಮತ್ತು ಮಹತ್ವಗಳನ್ನು ಅರ್ಥಮಾಡಿಕೊಳ್ಳದಿರುವುದೇ ಮುಖ್ಯ ಕಾರಣ. ಜೀವತ್ರೈವಿಧ್ಯವನ್ನು ಸ್ವರೂಪಗತ ಎಂದು ಹೇಳಿದ್ದು ಯಾವ ಒಬ್ಬ ಆಸಕ್ತನನ್ನು ಅವಕಾಶವಂಚಿತನನ್ನಾಗಿ ಮಾಡಲೆಂದು ಅಲ್ಲ. ನಿಜಕ್ಕೂ ತಾನು ಉದ್ಧಾರವಾಗಬೇಕೆಂದು ಅಪೇಕ್ಷಿಸುವ ಜನರು ಎಂದೂ ಸ್ವರೂಪತಃ ಅಯೋಗ್ಯವಾಗಿರಲು ಸಾಧ್ಯವೇ ಇಲ್ಲ. ತಾರತಮ್ಯ ಮಾಡಲು ಶ್ರೀಮಧ್ವದರ್ಶನ ಹೇಳುವುದಿಲ್ಲ. ಆದರೆ ಇರುವ ತಾರತಮ್ಯವನ್ನು ಸರಿಯಾಗಿ ಅರಿತು ಅದರಂತೆ ನಡೆಯಬೇಕು ಎಂಬುದು ಅವರ ಅಭಿಪ್ರಾಯ. ಪಂಚಭೇದಗಳೂ ಸಹ ಹಿಂದೆ ಹೇಳಿರುವ ಐದು ತೆರನಾದ ಭೇದಗಳು ಎಂದೇ ಹೊರತು ಭೇದಭಾವ ಪಕ್ಷಪಾತಗಳಲ್ಲ. ಕಬ್ಬಿಣವನ್ನು ಕಬ್ಬಿಣವೆಂದು, ಬಂಗಾರವನ್ನು ಬಂಗಾರವೆಂದು, ಅವೆರಡಕ್ಕೂ ಭೇದವೆಂದು ಕರೆದರೆ ಕೋಪತಾಪಗಳು ಏತಕ್ಕೆ? ನಿತ್ಯ ನರಕವೂ ಸಹ ಶಾಶ್ವತವಾದ ಭಗವದ್ವೇಷಿಗಳಿಗೆ ಸಿಕ್ಕುವ ದುರ್ಗತಿ. ಅದು ರಾಜದ್ರೋಹಕ್ಕೆ ಬರುವ ಶಿಕ್ಷೆಯಂತೆ ಮಾನ್ಯವೇ ಹೊರತು ನಿಂದ್ಯವಲ್ಲ. ಇವೆಲ್ಲ ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಪ್ರಾಮಾಣಿಕ ವಿಚಾರಗಳೇ ಹೊರತು ಶ್ರೀಮದಾಚಾರ್ಯರು ಕಲ್ಪಿಸಿ ಹೇಳಿದ ವಿಚಾರಗಳಲ್ಲ ಎಂಬುದನ್ನು ಗಮನಿಸಬೇಕು.

# ಸರ್ವಮೂಲಗ್ರಂಥಗಳು

ಶ್ರೀಮದಾನಂದತೀರ್ಥ ಭಗವತ್ಪಾದರು ಗ್ರಂಥಗಳಲ್ಲಿ ಸರ್ವಮೂಲ ಎಂದು ಪ್ರಸಿದ್ಧವಾಗಿರುವುವು ಮೂವತ್ತೇಳು. (ಕಂದುಕಸ್ತುತಿ ಎಂಬ ಸ್ತೋತ್ರ, ಬಿಲ್ವ ಮಂಗಲಃ ಸಾಧುಃ ಎಂಬ ವಾಕ್ಯವನ್ನು ಸಹ ಇವುಗಳೊಂದಿಗೆ ಸೇರಿಸುವ ಸಂಪ್ರದಾಯ ಉಂಟು.)

ಇವುಗಳಲ್ಲಿ ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ಅಣುಭಾಷ್ಯ ಮತ್ತು ನ್ಯಾಯ ವಿವರಣ ಎಂಬ ನಾಲ್ಕು ಗ್ರಂಥಗಳು ಸೂತ್ರಪ್ರಸ್ಥಾನಕ್ಕೆ ಸಂಬಂಧಿಸಿದೆ. ಬ್ರಹ್ಮಸೂತ್ರಭಾಷ್ಯವು ಬ್ರಹ್ಮಮೀಮಾಂಸಾಶಾಸ್ತ್ರದ ಪ್ರತಿಸೂತ್ರವನ್ನೂ ವಿವರಿಸುವ ಕೃತಿ, ಅನುವ್ಯಾಖ್ಯಾನವು ಸೂತ್ರಭಾಷ್ಯದ ವಿಸ್ತೃತರೂಪವಾದರೆ, ಅಣುಭಾಷ್ಯ ಅದರ ಸಂಗ್ರಹರೂಪವಾಗಿದೆ. ಅನುವ್ಯಾಖ್ಯಾನೋಕ್ತ ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತನ್ಯಾಯಗಳ ವಿವರಣರೂಪವಾಗಿ ಬ್ರಹ್ಮಸೂತ್ರಗಳ ಅಧಿಕರಣಗಳ ಮೇಲೆ ಬೆಳಕು ಚೆಲ್ಲುವ ಕೃತಿ ನ್ಯಾಯವಿವರಣ. ಬ್ರಹ್ಮಸೂತ್ರಗಳ ಅಧ್ಯಯನಕ್ಕೆ ಬಹುವಿಧವಾಗಿ ನೆರವಾಗುವ ಇಂತಹ ನಾಲ್ಕು ಬಗೆಯ ಕೃತಿಗಳನ್ನು ಬೇರಾವ ಭಾಷ್ಯಕಾರರೂ ರಚಿಸಿಲ್ಲ ಎಂಬುದು ಗಮನಾರ್ಹ. ಈ ನಾಲ್ಕೂ ಒಂದರ್ಥದಲ್ಲಿ ಶ್ರೀಮದಾಚಾರ್ಯರ ಭಾವಿಚತುರ್ಮುಖತ್ವಕ್ಕೆ ಸೂಚಕವೂ ಆಗಿವೆ. ಇವುಗಳಲ್ಲಿ ಅನುವ್ಯಾಖ್ಯಾನ ಮತ್ತು ಅಣುಭಾಷ್ಯಗಳು ಶ್ಲೋಕರೂಪವಾಗಿದ್ದು ಸಮಗ್ರ ಬ್ರಹ್ಮಸೂತ್ರ ವ್ಯಾಖ್ಯಾನಗಳ ಇತಿಹಾಸದಲ್ಲೇ ಅದ್ವಿತೀಯವೆನ್ನಿಸಿವೆ. ಅನುವ್ಯಾಖ್ಯಾನಕ್ಕೆ ರಚಿತವಾಗಿರುವ ಶ್ರೀಜಯತೀರ್ಥರ ಟೀಕೆಯೇ 'ನ್ಯಾಯಸುಧಾ'.

ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯನಿರ್ಣಯ ಈ ಎರಡೂ ಭಗವದ್ಗೀತೆಯ ಮೇಲೆ ರಚಿತವಾಗಿರುವ ಕೃತಿಗಳು. ಗೀತಾಭಾಷ್ಯ ಶ್ರೀಮದಾಚಾರ್ಯರು ಸನ್ಯಾಸ ಸ್ವೀಕಾರದ ಅನಂತರ ರಚಿಸಿದ ಪ್ರಪ್ರಥಮ ಕೃತಿ. ಈ ಅರ್ಥದಲ್ಲಿ ಅದರ ಅಧ್ಯಯನವು ಅವರ ಬ್ರಹ್ಮಸೂತ್ರ ಭಾಷ್ಯಾದಿ ಇತರಗ್ರಂಥಗಳ ಅಧ್ಯಯನಕ್ಕೆ ಅರ್ಹತೆ ತಂದುಕೊಡುತ್ತದೆ ಎಂಬುದನ್ನು ಗಮನಿಸಬೇಕು. ಗೀತಾತಾತ್ಪರ್ಯ ನಿರ್ಣಯವು ಗೀತಾಭಾಷ್ಯಕ್ಕೆ ಪೂರಕವಾಗಿರುವ ರಚನೆ.

ಮಹಾಭಾರತ ತಾತ್ಪರ್ಯನಿರ್ಣಯವು ಮುಖ್ಯವಾಗಿ ಮಹಾಭಾರತದ ಕಥೆ ಹಾಗೂ ಅರ್ಥಗಳನ್ನು ನಿರ್ಣಯಿಸುವ ವಿಶಿಷ್ಟ ಕೃತಿ. ಇದರಲ್ಲಿ ರಾಮಾಯಣ, ಹರಿವಂಶ, ಭಾಗವತಾದಿಗಳಲ್ಲಿ ಬರುವ ಭಗವದವತಾರದ ಕಥೆಗಳೂ ಸಹ ವ್ಯವಸ್ಥಿತವಾಗಿ ನಿರ್ಣಯಪೂರ್ವಕ ಸಂಗ್ರಹಿಸಲ್ಪಟ್ಟಿವೆ. ಒಂದರ್ಥದಲ್ಲಿ ಇದು

ಸಮಗ್ರ ಶ್ರೀಮನ್ಮಹಾಭಾರತಕ್ಕೆ ಬರೆಯಲ್ಪಟ್ಟಿರುವ ಭಾಷ್ಯ; ಇನ್ನೊಂದರ್ಥದಲ್ಲಿ ಇತಿಹಾಸಪುರಾಣಪ್ರಸ್ಥಾನಕ್ಕೇ ರಚಿತವಾಗಿರುವ ಭಾಷ್ಯ. ಉದ್ದೇಶ ಹಾಗೂ ಸಾಧನೆಗಳಲ್ಲಿ ಈ ಕೃತಿಗೆ ಸರಿಗಟ್ಟುವ ಮತ್ತೊಂದು ಕೃತಿಯೇ ಜಗತ್ತಿನಲ್ಲಿಲ್ಲ. ಒಟ್ಟು ಮೂವತ್ತೆರಡು ಅಧ್ಯಾಯಗಳಲ್ಲಿ ಐದು ಸಾವಿರಕ್ಕಿಂತ ಹೆಚ್ಚು ಶ್ಲೋಕಗಳನ್ನು ಹೊಂದಿರುವ ಈ ಕೃತಿ ಸರ್ವಮೂಲಗಳಲ್ಲೆಲ್ಲ ಅತ್ಯಂತ ದೊಡ್ಡದು. ಪ್ರಧಾನವಾಗಿ ಯಮಕಾಲಂಕಾರಗರ್ಭಿತ ಶ್ಲೋಕಗಳಲ್ಲಿ ರಚಿತವಾಗಿರುವ "ಯಮಕಭಾರತ" ಎಂಬ ಇವರ ಮತ್ತೊಂದು ಕೃತಿಯು ಒಂದರ್ಥದಲ್ಲಿ ಅಣುಮಹಾಭಾರತ ತಾತ್ಪರ್ಯನಿರ್ಣಯವೇ ಆಗಿದೆ. ಹೀಗೆ ಒಂದು ಅಲಂಕಾರದ ಹೆಸರಿನಿಂದಲೇ ಒಂದು ಕೃತಿ ಪ್ರಸಿದ್ಧಿಗೆ ಬಂದಿರುವ ಮತ್ತೊಂದು ನಿದರ್ಶನ ಸಮಗ್ರ ಸಂಸ್ಕೃತ ಸಾಹಿತ್ಯದಲ್ಲೇ ಅಪೂರ್ವ.

ಶ್ರೀಮದ್ಭಾಗವತತಾತ್ಪರ್ಯನಿರ್ಣಯವು ಭಾಗವತ ಮಹಾಪುರಾಣಕ್ಕೆ ರಚಿತವಾಗಿರುವ ವ್ಯಾಖ್ಯಾನ. ಪುರಾಣಗಳನ್ನು ಅರ್ಥಮಾಡಿಕೊಳ್ಳಬೇಕಾದ ಶಾಸ್ತ್ರೀಯ ಪದ್ಧತಿಗೆ ಈ ಕೃತಿ ಕೈಪಿಡಿಯಾಗಿದ್ದು ಸಮಗ್ರ ಪುರಾಣ ಪ್ರಸ್ಥಾನಕ್ಕೆ ಬರೆದ ಭಾಷ್ಯವಾಗಿದೆ. ಮತಾಚಾರ್ಯರೊಬ್ಬರು ಶ್ರೀಮದ್ಭಾಗವತಕ್ಕೆ ಬರೆದ ಪ್ರಪ್ರಥಮ ಭಾಷ್ಯವೆಂಬುದು ಇದರ ಹಿರಿಮೆ. ಭಾಗವತಾದಿ ಪುರಾಣಗಳನ್ನು ಶಾಸ್ತ್ರಗಳೆಂದು ಏಕೆ ಕರೆದಿದ್ದಾರೆ, ಎಂಬುದು ಇದನ್ನು ಅಧ್ಯಯನ ಮಾಡುವವರೆಗೆ ಎಂದಿಗೂ ತಿಳಿಯಲಾರದು.

ಋಗ್ವೇದದ ಮೊದಲ ನಲ್ವತ್ತು ಸೂಕ್ತಗಳಿಗೆ ರಚಿತವಾಗಿರುವ ಭಾಷ್ಯವೇ ಋಗ್ಭಾಷ್ಯ. ತಮ್ಮನ್ನು ವೈದಿಕರೆಂದು ಕರೆದುಕೊಂಡ ಬೇರಾವ ಮತಾಚಾರ್ಯರೂ ಆ ಮುಂಚೆ ವೇದಗಳಿಗೆ ಭಾಷ್ಯ ಬರೆಯುವ ಗೋಜಿಗೇ ಹೋಗಿರಲಿಲ್ಲ ಎಂಬುದನ್ನು ಗಮನಿಸಿದಾಗ ಋಗ್ಭಾಷ್ಯ ಬರೆದಿರುವ ಶ್ರೀಮದಾಚಾರ್ಯರು, ಈ ಅರ್ಥದಲ್ಲೂ ಸಹ ನಿಜವಾಗಿ ವೈದಿಕರು ಎಂಬುದು ಮನವರಿಕೆಯಾಗುತ್ತದೆ. ವೇದದ ಪ್ರತ್ಯಕ್ಷರ ಪ್ರತಿಪದಗಳಿಗೂ ಕನಿಷ್ಠ ಮೂರು ಅರ್ಥ ಎಂದು ಶಾಸ್ತ್ರಾಧಾರಗಳಿಂದ ಸಮರ್ಥಿಸುವ ಶ್ರೀಮದಾಚಾರ್ಯರ ಪ್ರತಿಭೆ ಅಚ್ಚರಿ ಹುಟ್ಟಿಸುತ್ತದೆ. ಇಂದು ದೊರೆಯುವ ಋಗ್ವೇದದ ಭಾಷ್ಯಗಳಲ್ಲೆಲ್ಲ ಶ್ಲೋಕರೂಪಕವಾಗಿರುವ ವ್ಯಾಖ್ಯಾನ ಇದೊಂದೇ ಎಂಬುದು ಇದರ ಮತ್ತೊಂದು ವೈಶಿಷ್ಟ್ಯ.

ಈಶಾವಾಸ್ಯ, ಕೇನ, ಕಠ, ಷಟ್ಪ್ರಶ್ನ, ಮುಂಡಕ, ಮಾಂಡೂಕ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ ಮತ್ತು ಐತರೇಯ ಎಂಬ ಪ್ರಸಿದ್ಧ ಹತ್ತು ಉಪನಿಷತ್ತುಗಳಿಗೂ ಶ್ರೀಮದಾಚಾರ್ಯರು ಭಾಷ್ಯ ಬರೆದಿದ್ದಾರೆ; ದಶಪ್ರಮತಿ

ಎಂಬ ಹೆಸರಿನ ಶ್ರೀಮದಾಚಾರ್ಯರ ಈ ದಶೋಪನಿಷದ್ಭಾಷ್ಯಗಳು ಪ್ರತಿ ಹಂತದಲ್ಲೂ ಅದರ ದಶಪ್ರಮತಿತ್ವಕ್ಕೆ ನಿದರ್ಶನವಾಗಿವೆ.

**ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬ್ರುಂಹಯೇತ್ ।**
**ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಚರಿಷ್ಯತಿ ॥**

ಎಂಬ ಶಾಸ್ತ್ರದ ಮಾತಿನಲ್ಲಿ ವೇದೋಪನಿಷತ್ತುಗಳಿಗೆ ಅರ್ಥ ತಿಳಿಯಲು ಇತಿಹಾಸ ಪುರಾಣಗಳ ಪರಿಜ್ಞಾನ ಅತ್ಯವಶ್ಯ ಎಂದು ನಿರೂಪಿತವಾಗಿದ್ದರೂ ಸ್ವಕಪೋಲಕಲ್ಪಿತವಾಗಿಯೇ ಉಪನಿಷದರ್ಥಗಳನ್ನು ಬರೆದ ಭಾಷ್ಯಕಾರರೇ ಹೆಚ್ಚು. ಆದರೆ ಶ್ರೀಮಧ್ವರು ಪ್ರಪ್ರಥಮ ಬಾರಿಗೆ ಇತಿಹಾಸ ಪುರಾಣಗಳ ಬೆಳಕಿನಲ್ಲೇ ಹೇಗೆ ವೇದೋಪನಿಷತ್ತುಗಳ ಹೃದಯವನ್ನು ಅರಿಯಬೇಕು ಎಂಬುದನ್ನು ಸಾಧಾರಣವಾಗಿ ತಮ್ಮ ಭಾಷ್ಯಗಳಲ್ಲಿ ತೋರಿಸಿದ್ದಾರೆ. ಜೀವಬ್ರಹ್ಮರಿಗೆ ಐಕ್ಯಪ್ರತಿಪಾದಕಗಳೆಂದು ಅನೇಕರು ಭ್ರಮಿಸಿದ್ದ ಅಹಂಬ್ರಹ್ಮಾಸ್ಮಿ, (ಅ) ತತ್ವಮಸಿ ಮೊದಲಾದ ಶ್ರುತಿ ವಾಕ್ಯಗಳು ಮೂಲತಃ ಹೇಗೆ ಜೀವ ಬ್ರಹ್ಮದಲ್ಲಿ ಭೇದವನ್ನೇ ಪ್ರತಿಪಾದಿಸಿವೆ ಎಂಬುದನ್ನು ಪ್ರಮಾಣ ವಚನಗಳಿಂದಲೇ ಸಾಧಿಸಿ ತೋರಿಸುವ ಈ ಭಾಷ್ಯಗಳು ನಿಜವಾದ ಅರ್ಥದಲ್ಲಿ ಉಪನಿಷತ್ತುಗಳ ಹೃದಯಕ್ಕೇ ಹಿಡಿದ ಕನ್ನಡಿಯಾಗಿವೆ.

ತತ್ತ್ವಸಂಖ್ಯಾನ, ತತ್ತ್ವವಿವೇಕ, ತತ್ತ್ವೋದ್ಯೋತ, ತತ್ತ್ವನಿರ್ಣಯ, ಮಾಯಾವಾದ ಖಂಡನ, ಉಪಾಧಿಖಂಡನ, ಪ್ರಪಂಚಮಿಥ್ಯಾತ್ವಾನುಮಾನಖಂಡನ, ಪ್ರಮಾಣಲಕ್ಷಣ ಮತ್ತು ಕರ್ಮನಿರ್ಣಯ ಇವು ದಶಪ್ರಕರಣವೆಂದು ಪ್ರಸಿದ್ಧವಾಗಿರುವ ಕೃತಿಗಳು. ಸ್ವತಂತ್ರ ಮತ್ತು ಅಸ್ವತಂತ್ರವೆಂದು ತತ್ವಗಳನ್ನು ವಿಂಗಡಿಸಿ ತತ್ವವಿಭಾಗದ ಪರಿಚಯವನ್ನು ತತ್ವಸಂಖ್ಯಾನವು ಮಾಡಿಕೊಡುತ್ತವೆ. ಈ ತತ್ವಸಂಖ್ಯಾನಕ್ಕೆ ಪ್ರಮಾಣವಾಗಿ ಶ್ರೀವಿಷ್ಣುಕೃತ ತತ್ವವಿವೇಕ ಎಂಬ ಗ್ರಂಥದಿಂದ ಸಂಗ್ರಹಿಸಿಕೊಟ್ಟಿರುವ ಶ್ಲೋಕಗಳೇ "ತತ್ತ್ವವಿವೇಕ". ಪುಂಡರೀಕಪುರಿ ಇತ್ಯಾದಿ ಮಾಯಾವಾದಿಗಳನ್ನು ವಾದದಲ್ಲಿ ಸೋಲಿಸಿದ ಶ್ರೀಮದಾಚಾರ್ಯರ ಉಪನ್ಯಾಸವೊಂದರ ಲಿಖಿತರೂಪವೇ ತತ್ತ್ವೋದ್ಯೋತ, ಎಲ್ಲಾ ಮತಗಳ್ನು ವಿಮರ್ಶಿಸಿ ಅವುಗಳಲ್ಲಿಯ ಲೋಪದೋಷಗಳನ್ನು ತೋರಿಸುತ್ತಾ ವೇದಾಪೌರುಷೇಯತ್ವ, ಹರಿಸರ್ವೋತ್ತಮತ್ವ, ಪಂಚಭೇದ ಮೊದಲಾದ ವೈದಿಕತತ್ವಗಳನ್ನು ಸಾಧಿಸಿತೋರಿಸುವ ಕೃತಿಯೇ ವಿಷ್ಣುತತ್ವವಿನಿರ್ಣಯ. ಒಂದರ್ಥದಲ್ಲಿ ಇದು ಗದ್ಯರೂಪದ ಅನುವ್ಯಾಖ್ಯಾನಾರ್ಥ ಸಂಗ್ರಹವೇ ಆಗಿದೆ. ಖಂಡನತ್ರಯಗಳು ಪ್ರಧಾನವಾಗಿ ಅದ್ವೈತ ಮತದ ಮುಖ್ಯ ತತ್ವಗಳನ್ನು ಖಂಡಿಸುವ ಕೃತಿಗಳು. ಈ ಖಂಡನತ್ರಯಗಳ ಅಧ್ಯಯನ ಖಂಡಿತವಾಗಿಯೂ ತಾಪತ್ರಯನಿವಾರಕ.

ಪ್ರಮಾಣಲಕ್ಷಣ, ಅವುಗಳ ವಿಭಾಗ ಇತ್ಯಾದಿಗಳ ವಿವೇಚನೆಯು ಪ್ರಮಾಣಲಕ್ಷಣದಲ್ಲೂ, ತತ್ತ್ವಚರ್ಚೆಯ ವಿಧಿವಿಧಾನಗಳು ಮತ್ತು ವಿಭಾಗಗಳು ಕಥಾಲಕ್ಷಣದಲ್ಲೂ ಬಂದಿವೆ. ದ್ವಾತ್ರಿಂಶಲಕ್ಷಣೋಪೇತರಾದ ಶ್ರೀಮದಾಚಾರ್ಯರ ಈ ಎರಡೂಗ್ರಂಥಗಳ ಅಧ್ಯಯನವಿಲ್ಲದ ಶಾಸ್ತ್ರಾಭ್ಯಾಸವು ಮನನ ಹಾಗೂ ಆರೋಗ್ಯಕರ ಚರ್ಚೆಯ ಹಂತವನ್ನು ಎಂದಿಗೂ ತಲುಪಲಾರದು.

ವಿಷ್ಣುಕೃತ ತಂತ್ರಸಾರವೆಂಬ ಬೃಹದ್ಗ್ರಂಥದ ಸಂಗ್ರಹರೂಪವೇ ತಂತ್ರಸಾರಸಂಗ್ರಹ. ನಾಲ್ಕು ಅಧ್ಯಾಯಗಳ ಈ ಕೃತಿಯಲ್ಲಿ ಪ್ರಣವಾದಿ ಮಂತ್ರಗಳ ಸ್ವರೂಪ, ದೇವಪೂಜಾಪದ್ಧತಿ, ದೇವಾಲಯ ನಿರ್ಮಾಣವಿಧಿ ದೇವತಾಪ್ರತಿಷ್ಠಾವಿಧಿ, ವಿವಿಧ ಮಂತ್ರಗಳ ವಿಧಿ ವಿಧಾನಗಳು, ಧ್ಯಾನ ಪದ್ಧತಿ ಮೊದಲಾದವುಗಳೆಲ್ಲ ಸಂಗ್ರಹಿಸಲ್ಪಟ್ಟಿವೆ. ತತ್ತ್ವಶಾಸ್ತ್ರದ ಪ್ರಾಯೋಗಿಕ ಭಾಗವಾದ ತಂತ್ರಶಾಸ್ತ್ರದ ಬಗ್ಗೆ ಇಷ್ಟೆಲ್ಲಾ ಮಾಹಿತಿಗಳನ್ನು ನಿಷ್ಕೃಷ್ಟವಾಗಿ ಕೊಡುವ ಮತ್ತೊಂದು ಗ್ರಂಥವೇ ಇಲ್ಲ.

ಪ್ರತಿನಿತ್ಯ ಆಚರಿಸಬೇಕಾದ ಸತ್ಕರ್ಮಗಳ ಬಗ್ಗೆ ಬೆಳಕು ಚೆಲ್ಲುವ ಕೃತಿ ಸದಾಚಾರಸ್ಮೃತಿ. ಸದ್ವಿಚಾರಕ್ಕೆ ಸಾಧಕವಾದ ಸದಾಚಾರದ ಸಮಗ್ರ ಪರಿಚಯ ಈ ಕೃತಿಯ ವೈಶಿಷ್ಟ್ಯ. ಯಾವುದೇ ಉಪಾಸನೆಗೂ ಹಿನ್ನೆಲೆಯಾದ ಉಪವಾಸ, ಪೂಜೆ ಇತ್ಯಾದಿಗಳ ಬಗ್ಗೆ ಪುರಾಣ ವಾಕ್ಯಗಳ ಸಂಗ್ರಹರೂಪವಾಗಿರುವ ಕೃತಿ ಕೃಷ್ಣಾಮೃತ ಮಹಾರ್ಣವ. ಇದರಲ್ಲಿ ಏಕಾದಶ್ಯುಪವಾಸದ ಬಗ್ಗೆ ಅಪೂರ್ವ ಮಾಹಿತಿಗಳ ಸಂಕಲನವೇ ಇದೆ. ಶ್ರೀಕೃಷ್ಣಜಯಂತಿಯ ಮಹತ್ವ, ಲಕ್ಷಣ ಮತ್ತು ವಿಧಿವಿಧಾನಗಳನ್ನೆಲ್ಲ ನಿರೂಪಿಸುವ ಕೃತಿ ಜಯಂತೀ ನಿರ್ಣಯ. ಸನ್ಯಾಸದೀಕ್ಷೆಯ ಕ್ರಮ ಮತ್ತು ಪರಮಹಂಸರ ಆಚಾರವಿಚಾರಗಳ ಸಂಗ್ರಹವು ಯತಿಪ್ರಣವಕಲ್ಪದಲ್ಲಿ ನಿರೂಪಿತವಾಗಿದೆ.

ನಖಸ್ತುತಿ ಮತ್ತು ದ್ವಾದಶಸ್ತೋತ್ರ ಇವೆರಡೂ ಭಗವಂತನನ್ನು ವಿವಿಧ ಬಗೆಯಲ್ಲಿ ಸ್ತುತಿಸುವ ಕೃತಿಗಳು; ಭಗವಂತನ ನೃಸಿಂಹರೂಪದ ನಖಗಳನ್ನು ಸ್ತುತಿಸುತ್ತಲೇ ಭಗವಂತನ ಅದ್ಭುತ ವ್ಯಕ್ತಿತ್ವವನ್ನು ತಿಳಿಸಿಕೊಡುವ ಕೃತಿ ಎರಡು ಶ್ಲೋಕಗಳ ನಖಸ್ತುತಿ. ವಾಯುಸ್ತುತಿಯ ಆದ್ಯಂತಗಳಲ್ಲಿ ಇದನ್ನು ತಪ್ಪದೇ ಪಠಿಸಬೇಕಾದ ವಿಧಿ ಉಂಟು. ದ್ವಾದಶಸ್ತೋತ್ರವೆಂಬುದು ಹನ್ನೆರಡು ಸ್ತೋತ್ರಗಳ ಒಂದು ಗುಚ್ಛ. ಪ್ರತಿಯೊಂದು ಸ್ತೋತ್ರವನ್ನೂ ಒಂದೊಂದು ಅಧ್ಯಾಯವೆಂದು ಕರೆದು ಒಟ್ಟಾಗಿ ಒಂದೇ ಕೃತಿ ಎಂದು ಪರಿಗಣಿತವಾಗಿರುವ ಇಂತಹ ಕೃತಿ ಪಂಚರಾತ್ರಾಗಮದ ಜಿತಂತೇ ಸ್ತೋತ್ರವನ್ನು ಬಿಟ್ಟರೆ ಬೇರೊಂದು ದೊರೆಯುವುದೇ ಇಲ್ಲ. ತಿಳಿದ ಶಾಸ್ತ್ರತತ್ವಗಳನ್ನೆಲ್ಲ ಹೇಗೆ ಉಪಾಸನೆಗೆ ಅಳವಡಿಸಿಕೊಂಡು

ಭಗವಂತನನ್ನು ಸ್ತುತಿಸಬೇಕು ಎಂಬುದನ್ನು ಈ ಸ್ತುತಿ ತಿಳಿಸಿಕೊಡುತ್ತದೆ. ದ್ವಾದಶ ಸ್ಕಂದಾತ್ಮಕವಾದ ಶ್ರೀಮದ್ಭಾಗವತಕ್ಕೆ ತಾತ್ಪರ್ಯ ರೂಪವಾಗಿರುವುದು ಈ ಕೃತಿಯ ಮತ್ತೊಂದು ವೈಶಿಷ್ಟ್ಯ. ವಿವಿಧ ವೃತ್ತಗಳಲ್ಲಿ ಪ್ರೌಢಕಾವ್ಯವಾಗಿ ರಚಿಸಲ್ಪಟ್ಟಂತಹ ಹಾಡುಗಬ್ಬಗಳಲ್ಲೆಲ್ಲ ಇದಕ್ಕೆ ಅಗ್ರಸ್ಥಾನ.

ಒಟ್ಟಿನಲ್ಲಿ ಶ್ರೀಮದಾಚಾರ್ಯರ ಕೃತಿಗಳು ವೇದ, ಉಪನಿಷತ್ತು, ಸೂತ್ರ, ಇತಿಹಾಸ, ಪುರಾಣ, ತಂತ್ರ, ಪ್ರಕರಣ, ಆಚಾರ ಮೊದಲಾದ ಶಾಸ್ತ್ರದ ಸರ್ವವಿಭಾಗಗಳನ್ನೂ ಒಳಗೊಂಡಿದ್ದು ಸರ್ವಮೂಲವೆಂಬ ಹೆಸರು ಸಾರ್ಥಕವಾಗಿದೆ. ಶ್ರೀಮದಾಚಾರ್ಯರು ಸರ್ವಜ್ಞರು ಎಂಬುದಕ್ಕೂ ಇವು ಸ್ಪಷ್ಟ ನಿದರ್ಶನವಾಗಿವೆ. ಸರಳ ಶೈಲಿ, ಲಲಿತಪದಪಂಕ್ತಿ, ಸ್ಪಷ್ಟ ನಿರೂಪಣೆ, ಪ್ರಮಾಣವಚನಗಳ ಉದಾಹರಣೆ ಮೊದಲಾದ ಪ್ರಮುಖ ಲಕ್ಷಣಗಳು ಇವುಗಳಲ್ಲಿ ಓತಪ್ರೋತವಾಗಿ ಕಂಡುಬರುತ್ತವೆ. ಯಾವುದೇ ನಿರ್ಮಲ ವಿಚಾರಕ್ಕೂ ಈ ಸರ್ವಮೂಲಗಳು ಮೂಲ ಸಾಧನವಾಗಿವೆ. ವೇದಾದಿ ಸರ್ವ ಮೂಲಗ್ರಂಥಗಳನ್ನೂ ಇವುಗಳ ಸಹಾಯದಿಂದ ಅರಿಯಲು ಸಾಧ್ಯ. ಈ ಸರ್ವಮೂಲಗಳನ್ನು ಬಿಟ್ಟ ವಿಚಾರ ನಿರ್ಮೂಲ ಎನ್ನಿಸುವುದರಲ್ಲಿ ಆಶ್ಚರ್ಯವೇನಿಲ್ಲ.

# ಸೂತ್ರ ಪ್ರಸ್ಥಾನ ಗ್ರಂಥಗಳು

ಶ್ರೀಮದಾಚಾರ್ಯರು ಸೂತ್ರಪ್ರಸ್ಥಾನಕ್ಕೆ ಸಂಬಂಧಿಸಿದಂತೆ ಬ್ರಹ್ಮಸೂತ್ರ ಭಾಷ್ಯ, ಅನುವ್ಯಾಖ್ಯಾನ, ಅಣುಭಾಷ್ಯ ಮತ್ತು ನ್ಯಾಯವಿವರಣ ಎಂಬ ನಾಲ್ಕು ಕೃತಿಗಳನ್ನು ರಚಿಸಿರುವರು.

ಬ್ರಹ್ಮಸೂತ್ರಭಾಷ್ಯವು ಬ್ರಹ್ಮಸೂತ್ರಗಳ ಮೇಲಿನ ನೇರ ಭಾಷ್ಯವಾಗಿದ್ದು, ಇದರಲ್ಲಿ ಪ್ರತಿಯೊಂದು ಬ್ರಹ್ಮಸೂತ್ರಕ್ಕೂ ವ್ಯಾಖ್ಯಾನ ದೊರೆಯುತ್ತದೆ. ಅನುವ್ಯಾಖ್ಯಾನವು ಬ್ರಹ್ಮಸೂತ್ರದ ಮೇಲಿನ ಮತ್ತೊಂದು ಅಪೂರ್ವಕೃತಿ. ಇದು ಅವರೇ ತಿಳಿಸಿರುವಂತೆ ತಮ್ಮ ಬ್ರಹ್ಮಸೂತ್ರಭಾಷ್ಯದ ಸ್ಪಷ್ಟೀಕರಣಕ್ಕಾಗಿ ರಚಿತವಾಗಿರುವ ಕೃತಿ. ಶ್ರೀಜಯತೀರ್ಥರು ತಿಳಿಸಿರುವಂತೆ ಅಂತಹ ಸ್ಪಷ್ಟೀಕರಣ ಅನೇಕ ತೆರನಾದುದು :

**ಸ್ಪಷ್ಟೀಕರಣಂ ಚಾನೇಕವಿಧಮ್ । ಕ್ವಚಿತ್ ಅನುಕ್ತಾರ್ಥಸ್ಯ ಉಕ್ತಿಃ । ಕ್ವಾಪಿ ಅತಿ ಸಂಕ್ಷಿಪ್ತಸ್ಯ ವಿವರಣಂ । ಕ್ವಚಿತ್ ಅತಿವಿಸ್ತೃತತಯಾ ವಿಕ್ಷಿಪ್ತಸ್ಯ ಏಕೀಕರಣಮ್ । ಕುತ್ರಾಪ್ಯುಕ್ತಸ್ಯೋಪಪಾದನಂ । ಕ್ವಚಿದಪವ್ಯಾಖ್ಯಾನನಿರಾಕರಣೇನ ದೃಢೀಕರಣಂ ಇತ್ಯಾದಿ—ನ್ಯಾಯಸುಧಾ ।**

**ಆದಿಪದೇನ ಕ್ವಚಿತ್ ಬಾಧಕೋದ್ಧಾರಾದಿರ್ಗ್ರಾಹ್ಯಃ । (ಪರಿಮಳ)**

ಎಂದರೆ "ಅಲ್ಲಿ ಹೇಳದೆ ಇದ್ದ ಹೊಸ ವಿಷಯಗಳನ್ನು ತಿಳಿಸುವುದು, ಸಂಕ್ಷಿಪ್ತವಾಗಿ ಹೇಳಿದ್ದನ್ನು ವಿವರಿಸುವದು. ವಿಸ್ತಾರವಾಗಿ ಹೇಳಿದ್ದನ್ನು ಸಂಕ್ಷಿಪ್ತವಾಗಿ ತಿಳಿಸುವುದು, ಅಲ್ಲಿ ಹೇಳಿದ ವಿಚಾರಗಳನ್ನು ಉಪಪಾದನೆ ಮಾಡುವುದು, ಅಪವ್ಯಾಖ್ಯಾನಗಳನ್ನು ವಿಮರ್ಶಿಸಿ ತಮ್ಮ ವ್ಯಾಖ್ಯಾನವನ್ನು ದೃಢಪಡಿಸುವುದು, ತಮ್ಮ ವ್ಯಾಖ್ಯಾನದ ಮೇಲೆ ಬಾಧಕಗಳನ್ನು ಆಶಂಕಿಸಿಕೊಂಡು ತಾವೇ ಪರಿಹಾರ ನೀಡುವುದು ಮುಂತಾದವು.

ಅನುವ್ಯಾಖ್ಯಾನ ಹೀಗೆ ಒಂದು ರೀತಿಯಲ್ಲಿ ಬ್ರಹ್ಮಸೂತ್ರಗಳ ಮೇಲೆ ಅವರೇ ಬರೆದ ಮತ್ತೊಂದು ಭಾಷ್ಯ; ಇನ್ನೊಂದು ರೀತಿಯಲ್ಲಿ ಅವರ ಭಾಷ್ಯಕ್ಕೆ ಅವರೇ ರಚಿಸಿದ ಟೀಕೆ. ಇದರಿಂದಾಗಿ ಭಾಷ್ಯವನ್ನು ಸ್ಫುಟವಾಗಿ ತಿಳಿಯಲು ಯಾವುದೇ ವಿಧವಾದ ಗೊಂದಲಕ್ಕೂ ಅವಕಾಶವಿಲ್ಲದಂತಾಗುತ್ತದೆ. ಬ್ರಹ್ಮಸೂತ್ರಗಳ ಪ್ರತಿಅಧಿಕರಣಕ್ಕೂ ಇರುವ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳನ್ನು ಒಂದೆಡೆ

ಸಂಗ್ರಹಿಸಿಕೊಟ್ಟಿರುವುದು ಇದರ ಮತ್ತೊಂದು ವಿಶೇಷ. ಅದು ಒಂದು ಅಧಿಕರಣದ ಸಮಗ್ರವಿವೇಚನೆಗೆ ತುಂಬಾ ಉಪಯುಕ್ತ. ಶ್ಲೋಕರೂಪವಾಗಿರುವುದು ಇದರ ಮತ್ತೊಂದು ವಿಶೇಷ. ಅನೇಕ ಸಲ ಅದರಲ್ಲಿ ಹೇಳದೆ ಇರುವ ಪ್ರಮಾಣವಿಶೇಷಗಳನ್ನು ಇಲ್ಲಿ ನೀಡಿರುವರು.

ಬ್ರಹ್ಮಸೂತ್ರಗಳ ಮೇಲೆ ಹೀಗೆ ಒಟ್ಟು ನಾಲ್ಕು ಕೃತಿಗಳನ್ನು ರಚಿಸುವ ಮೂಲಕ ಬ್ರಹ್ಮಸೂತ್ರಗಳ ಆಳವಾದ ಅಧ್ಯಯನಕ್ಕೆ ಶ್ರೀಮದಾಚಾರ್ಯರು ಮಾಡಿರುವ ಉಪಕಾರ ಅಪಾರ. ಶಂಕರಾಚಾರ್ಯರು ಭಾಷ್ಯದ ಮೇಲೆ ರಚಿಸಿರುವ ಕೃತಿ ಬ್ರಹ್ಮಸೂತ್ರಭಾಷ್ಯವೊಂದೇ. ರಾಮಾನುಜಾಚಾರ್ಯರು ಶ್ರೀಭಾಷ್ಯ, ವೇದಾಂತ ದೀಪ ಮತ್ತು ವೇದಾಂತಸಾರ ಎಂಬುದಾಗಿ ಮೂರು ಕೃತಿಗಳನ್ನು ರಚಿಸಿರುವರು. ಅವರಿಬ್ಬರೂ ತಮ್ಮ ಭಾಷ್ಯಗಳಿಗೆ 'ಅಣುಭಾಷ್ಯ'ದಂತಹ ಸಂಗ್ರಹ ಭಾಷ್ಯ ರಚಿಸಿಲ್ಲ. ಅವರ ಪರಂಪರೆಯಲ್ಲೂ ಆ ಬಗೆಯ ಕೃತಿ ಅನಂತರವೂ ರಚಿತವಾಗಿಲ್ಲ. ರಾಮಾನುಜಾಚಾರ್ಯರ ರಚನೆಗಳಲ್ಲಿ ಅಣುಭಾಷ್ಯದಂತಹ ಸಂಗ್ರಹಭಾಷ್ಯವಿಲ್ಲ ವಾದರೆ, ಶಂಕರಾಚಾರ್ಯರ ಕೃತಿಗಳಲ್ಲಿ ಸಂಗ್ರಹಭಾಷ್ಯ ಹಾಗೂ ಅಧಿಕರಣಾರ್ಥ ಸಂಗ್ರಹ ರೂಪವಾದ ನ್ಯಾಯವಿವರಣದಂತಹ ಕೃತಿ ಎರಡೂ ದೊರೆಯುವುದಿಲ್ಲ. ಎಂದಮೇಲೆ ಬ್ರಹ್ಮಸೂತ್ರಗಳ ಅಧ್ಯಯನಕ್ಕೆ ಶ್ರೀಮದಾಚಾರ್ಯರ ಉಪಕಾರದ ಮಹತ್ತ್ವ ಅರ್ಥವಾಗುವುದು.

ಶಂಕರ, ರಾಮಾನುಜರಿಬ್ಬರ ಭಾಷ್ಯಗಳು ವಾಕ್ಯರೂಪದ ಭಾಷ್ಯಗಳು. ಆದರೆ ಶ್ರೀಮದಾಚಾರ್ಯರ ಅನುವ್ಯಾಖ್ಯಾನ ಹಾಗೂ ಅಣುಭಾಷ್ಯ ಎರಡೂ ಶ್ಲೋಕರೂಪದ ಕೃತಿಗಳು. ಎಂದರೆ ಬ್ರಹ್ಮಸೂತ್ರಗಳ ಮೇಲೆ ಹೀಗೆ 'ಅನುಭಾಷ್ಯ' ಹಾಗೂ 'ಅಣುಭಾಷ್ಯ' ಎರಡನ್ನೂ ಶ್ಲೋಕರೂಪದಲ್ಲಿ ಕೊಟ್ಟ ವೈಶಿಷ್ಟ್ಯ ಶ್ರೀಮಧ್ವಾಚಾರ್ಯರದು. ಬ್ರಹ್ಮಸೂತ್ರದ ಮೇಲೆ ಇರಲಿ, ಯಾವುದೇ ಸೂತ್ರಸಾಹಿತ್ಯದ ಮೇಲೆಯೂ ಹೀಗೆ ಶ್ಲೋಕರೂಪದ ಭಾಷ್ಯ, ಸಂಗ್ರಹಭಾಷ್ಯಗಳು ದೊರೆಯುವುದಿಲ್ಲ. ಎಂದರೆ ವೇದಾಂತದಂತಹ ಅತಿಶ್ರೇಷ್ಠಶಾಸ್ತ್ರವನ್ನು ಶ್ಲೋಕರೂಪದಲ್ಲಿ ಒದಗಿಸಿದ ಏಕಮಾತ್ರ ಆಚಾರ್ಯರು ಅವರು. ಕುಮಾರಿಲಭಟ್ಟರ ಮೀಮಾಂಸಾಶ್ಲೋಕವಾರ್ತಿಕೆಯು ಶ್ಲೋಕರೂಪದ ಕೃತಿಯೇ ಆಗಿದ್ದರೂ, ಅದು ಮೀಮಾಂಸಾಸೂತ್ರಗಳ ಮೇಲೆ ಭಾಷ್ಯವಾಗಿರದೆ, ಶಾಬರದ ಭಾಷ್ಯದ ಮೇಲಿನ ಟೀಕೆ ಮಾತ್ರ ಆಗಿದೆ ಎಂಬುದನ್ನು ಗಮನಿಸಬೇಕು.

# 'ಬ್ರಹ್ಮಸೂತ್ರ'ದ ಸೂತ್ರ ಮತ್ತು ಅಧಿಕರಣಗಳ ಸಂಖ್ಯೆ ಹಾಗೂ ಅಧ್ಯಾಯಪಾದಗಳ ವಿವರ

## 1) ಸಮನ್ವಯಾಧ್ಯಾಯ

| | | | |
|---|---|---|---|
| 1) | ಅನ್ಯತ್ರಪ್ರಸಿದ್ಧನಾಮಾತ್ಮಕ ಶಬ್ದಸಮನ್ವಯಪಾದ | 12 | 31 |
| 2) | ಅನ್ಯತ್ರಪ್ರಸಿದ್ಧಲಿಂಗಾತ್ಮಕ ಶಬ್ದಸಮನ್ವಯಪಾದ | 7 | 32 |
| 3) | ಉಭಯತ್ರಪ್ರಸಿದ್ಧನಾಮಲಿಂಗಾತ್ಮಕಶಬ್ದಸಮನ್ವಯಪಾದ | 14 | 43 |
| 4) | ಅನ್ಯತ್ರೈವಪ್ರಸಿದ್ಧನಾಮಲಿಂಗಾತ್ಮಕಶಬ್ದಸಮನ್ವಯಪಾದ | 7 | 29 |
| | | **40** | **135** |

## 2) ಅವಿರೋಧಾಧ್ಯಾಯ

| | | | |
|---|---|---|---|
| 1) | ಯುಕ್ತಿಪಾದ | 11 | 38 |
| 2) | ಸಮಯಪಾದ | 12 | 45 |
| 3) | ಪರಸ್ಪರಶ್ರುತ್ಯವಿರೋಧಪಾದ | 19 | 53 |
| 4) | ನ್ಯಾಯೋಪೇತಶ್ರುತ್ಯವಿರೋಧಪಾದ | 13 | 23 |
| | | **55** | **159** |

## 3) ಸಾಧನಾಧ್ಯಾಯ

| | | | |
|---|---|---|---|
| 1) | ವೈರಾಗ್ಯಪಾದ | 20 | 29 |
| 2) | ಭಕ್ತಿಪಾದ | 20 | 42 |
| 3) | ಉಪಾಸನಾಪಾದ | 42 | 68 |
| 4) | ಜ್ಞಾನಪಾದ | 11 | 51 |
| | | **93** | **190** |

## 4) ಫಲಾಧ್ಯಾಯ

| | | | |
|---|---|---|---|
| 1) | ಕರ್ಮಕ್ಷಯಪಾದ | 8 | 19 |
| 2) | ಉತ್ಕ್ರಾಂತಿಪಾದ | 10 | 22 |
| 3) | ಮಾರ್ಗಪಾದ | 6 | 16 |
| 4) | ಭೋಗಪಾದ | 11 | 23 |
| | | **35** | **80** |

ಒಟ್ಟು ಅಧಿಕರಣಗಳು—**222 (3)** ಒಟ್ಟು ಸೂತ್ರಗಳು—**564**

# ಬ್ರಹ್ಮಸೂತ್ರದ ಮೇಲಿನ ಮಧ್ವಭಾಷ್ಯದ ವೈಶಿಷ್ಟ್ಯ

ಬ್ರಹ್ಮಸೂತ್ರಗಳ ಮೇಲೆ ಆಚಾರ್ಯಶ್ರೀಮಧ್ವರದು ಇಪ್ಪತ್ತೆರಡನೆಯ ಭಾಷ್ಯ. ಆ ಮುಂಚೆ ಒಟ್ಟು ಇಪ್ಪತ್ತೊಂದು ಭಾಷ್ಯಗಳು ಬ್ರಹ್ಮಸೂತ್ರಗಳ ಮೇಲೆ ರಚಿತವಾಗಿದ್ದ ವಿವರವನ್ನು ಸುಮಧ್ವವಿಜಯ ಮತ್ತು ಆದರ ಭಾವಪ್ರಕಾಶಿಕೆಗಳು ನೀಡಿವೆ:

| | | |
|---|---|---|
| ಭಾರತೀವಿಜಯ | ವಾಮನ | ಪಿಶಾಚ |
| ಸಂವಿದಾನಂದ | ಯಾದವಪ್ರಕಾಶ | ವೃತ್ತಿಕಾರ |
| ಬ್ರಹ್ಮಘೋಷ | ರಾಮಾನುಜ | ವಿಜಯಭಟ್ಟ |
| ಶತಾನಂದ | ಭರ್ತೃಪ್ರಪಂಚ | ವಿಷ್ಣುಕ್ರಾಂತ |
| ಉದ್ವರ್ತ | ದ್ರಮಿಡ | ವಾದೀಂದ್ರ |
| ವಿಜಯ | ಬ್ರಹ್ಮದತ್ತ | ಮಾಧವದಾಸ |
| ರುದ್ರಭಟ್ಟ | ಭಾಸ್ಕರ | ಶಂಕರ |

ಇವುಗಳಲ್ಲಿ ಇಂದು ಉಪಲಬ್ಧವಿರುವದು ಶಂಕರರಾಮಾನುಜರ ಭಾಷ್ಯಗಳೊಂದಿಗೆ ಭಾಸ್ಕರಭಾಷ್ಯ ಮಾತ್ರ. ಉಳಿದವು ಅನುಪಲಬ್ಧ. ಎಂದರೆ ಅವುಗಳ ಹೆಸರುಗಳನ್ನು ಉಳಿಸಿದ್ದು ಮಧ್ವಶಿಷ್ಯರಾದ ನಾರಾಯಣಪಂಡಿತಾಚಾರ್ಯರು. ಮಧ್ವಭಾಷ್ಯದ ವೈಶಿಷ್ಟ್ಯಗಳು ಅಸಂಖ್ಯ. ಅವುಗಳಲ್ಲಿ ಕೆಲವನ್ನು ಹೀಗೆ ಪಟ್ಟಿಮಾಡಬಹುದು :

1) ಬ್ರಹ್ಮಸೂತ್ರಗಳ್ನು ಬರೆದ ಬಾದರಾಯಣರು (ವೇದವ್ಯಾಸರು) ಒಬ್ಬ ಋಷಿ ಎಂದು ಮಾತ್ರವೇ ಹಿಂದಿನವರು ಭಾವಿಸಿದ್ದರು. ಆದರೆ ಅವರು ಕೇವಲ ಒಬ್ಬ ಋಷಿಯಲ್ಲ, ಸ್ವತಃ ಭಗವಂತನಾದ ನಾರಾಯಣನ ಅವತಾರ ಎಂಬುದನ್ನು ತಿಳಿಸಿ, ಅನೇಕ ಪ್ರಮಾಣಗಳನ್ನು ನೀಡಿ ಸಾಧಿಸಿದ ಶ್ರೇಯಸ್ಸು ಶ್ರೀಮಧ್ವಾಚಾರ್ಯರದು.

**ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।**
**ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ॥**

'ಮುನೀನಾಮಪ್ಯಹಂ ವ್ಯಾಸಃ' ಎಂಬ ಭಗವದ್ಗೀತೆಯ ಮಾತಿನಲ್ಲೂ ಈ ವಿಷಯ ಬಂದಿದೆ ಎಂಬುದನ್ನು ಗಮನಿಸಿದರೆ, ಮಧ್ವಭಾಷ್ಯದ ಹಿರಿಮೆ ಮನವರಿಕೆಯಾಗುವುದು.

2) ಬ್ರಹ್ಮಸೂತ್ರಗಳ ಸ್ಥಾನಮಾನದ ಬಗ್ಗೆ ಇತರ ಭಾಷ್ಯಗಳ ನಿಲುವು ಇತರ ಪ್ರಸ್ಥಾನಗಳಂತೆ ಇದೂ ಒಂದು ಪ್ರಸ್ಥಾನ ಎಂಬ ಮಟ್ಟಿಗೆ ಮಾತ್ರ ಆಗಿತ್ತು. ಬ್ರಹ್ಮಸೂತ್ರಗಳಿಗಿಂತ ಉಪನಿಷತ್ತುಗಳೇ ಮಿಗಿಲು ಎಂಬುದಾಗಿಯೂ ಅವರು ಭಾವಿಸಿರುವರು. ಆದರೆ ಬ್ರಹ್ಮಸೂತ್ರಗಳೆಂದರೆ ಪರವಿದ್ಯೆ. ಅವುಗಳಿಗಿಂತ ಮಿಗಿಲಾದ ಬೇರೊಂದು ಶಾಸ್ತ್ರವಿಲ್ಲ. ಅದೇ ಸರ್ವೋತ್ತಮಶಾಸ್ತ್ರ. ಆದ್ದರಿಂದ ವೇದಾದಿ ಯಾವುದೇ ಇತರ ಸಕಲಶಾಸ್ತ್ರಗಳನ್ನು ಬ್ರಹ್ಮಸೂತ್ರಗಳ ಬೆಳಕಿನ ಹಿನ್ನೆಲೆಯಲ್ಲೇ ನೋಡಬೇಕು ಎಂಬ ಮಹತ್ತ್ವಪೂರ್ಣ ಸಂದೇಶವನ್ನು ಅನೇಕ ಪ್ರಮಾಣಗಳನ್ನಿತ್ತು ಸಾರಿರುವುದು ಮಧ್ವಭಾಷ್ಯದ ವೈಶಿಷ್ಟ್ಯಗಳಲ್ಲೊಂದು.

**'ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಷ್ಯತೇ । (ಅನುವ್ಯಾಖ್ಯಾನ)**
**'ತಸ್ಮಾತ್ ಸೂತ್ರಾರ್ಥಮಾಗೃಹ್ಯ ಕರ್ತವ್ಯಃ ಸರ್ವನಿರ್ಣಯಃ ।''**
**—ಮಹಾಭಾರತತಾತ್ಪರ್ಯನಿರ್ಣಯ**

3) ಬ್ರಹ್ಮಸೂತ್ರಗಳು ಉಪನಿಷತ್ತುಗಳಿಗೆ ಅದರಲ್ಲೂ ಪ್ರಧಾನವೆನ್ನಿಸಿರುವ ದಶೋಪನಿಷತ್ತುಗಳಿಗೆ ಮಾತ್ರ ಅರ್ಥನಿರ್ಣಯರೂಪ ಕೃತಿಗಳು ಎಂಬ ಸೀಮಿತ ದೃಷ್ಟಿ ಇತರ ಭಾಷ್ಯಗಳದಾಗಿತ್ತು. ಅದಕ್ಕೆ ಅವರು ಉಲ್ಲೇಖಿಸಿರುವ ವಿಷಯವಾಕ್ಯಗಳೆಲ್ಲ ಆ ಉಪನಿಷತ್ತುಗಳಿಗಷ್ಟೆ ಸೀಮಿತವಾಗಿರುವುದೇ ನಿದರ್ಶನ. ಆದರೆ ಬ್ರಹ್ಮಸೂತ್ರಗಳು ಅವುಗಳ ಲಕ್ಷಣವೇ ಹೇಳುವಂತೆ ಸಕಲಶಾಸ್ತ್ರಗಳಿಗೂ ನಿರ್ಣಾಯಕವಾದ ಅನುಪಮಸಾಹಿತ್ಯ. ವ್ಯಷ್ಟಿಯಾಗಿ ಅವು ಯಾವುದೇ ಶಾಸ್ತ್ರಭಾಗಕ್ಕೂ ನಿರ್ಣಯ; ಸಮಷ್ಟಿಯಾಗಿ ಸರ್ವಶಾಸ್ತ್ರಾರ್ಥನಿರ್ಣಯ ಎಂಬ ಅಪೂರ್ವ ಅಂಶವನ್ನು ಸಾಧಾರವಾಗಿ ನಿರೂಪಿಸಿರುವರು.

**'ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ ।**
**ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥**

ದ್ವಿತೀಯಾಧ್ಯಾಯದ ಆರಂಭಣಾಧಿಕರಣ (2/1/67) ಇದಕ್ಕೆ ಉತ್ತಮ ದೃಷ್ಟಾಂತ; ಅದಕ್ಕೆ ವಿಷಯವಾಕ್ಯವನ್ನಾಗಿ 'ವಾಚಾರಂಭಣಂ ವಿಕಾರೋ........' ಎಂಬ ಛಾಂದೋಗ್ಯದ ವಾಕ್ಯವನ್ನು ಶಂಕರರಾಮಾನುಜರು ಗ್ರಹಿಸಿದ್ದರೆ, ಶ್ರೀಮದಾಚಾರ್ಯರು, 'ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮಸ್ವಿತ್ ಕಥಾಽಽಸೀತ್' ಎಂಬ ಋಗ್ವೇದವಚನವನ್ನು ಗ್ರಹಿಸಿರುವರು.

4) ಬ್ರಹ್ಮಸೂತ್ರಗಳ ಅವುಗಳ ಕರ್ತೃ, ಅವುಗಳ ರಚನೆಯ ಹಿನ್ನೆಲೆ, ಪ್ರಮಾಣಸ್ವರೂಪ, ವಿಷಯವ್ಯಾಪ್ತಿ ಮೊದಲಾದ ಮುಖ್ಯ ವಿವರಗಳ ಬಗ್ಗೆ ಯಾವ

ಮಾಹಿತಿಯನ್ನು ಇತರ ಭಾಷ್ಯಗಳು ಚರ್ಚಿಸಿರಲಿಲ್ಲ. ಆದರೆ ಮಾಧ್ವಭಾಷ್ಯವು ಪ್ರಾರಂಭದಲ್ಲೇ ಈ ಎಲ್ಲ ಅಂಶಗಳ ಬಗ್ಗೆಯೂ ಬೆಳಕು ಚೆಲ್ಲುವ ಆದರ್ಶಭಾಷ್ಯ.

5) ಬ್ರಹ್ಮಸೂತ್ರಗಳಲ್ಲಿ ಒಂದೇ ಅಧಿಕರಣದಲ್ಲಿನ ಸೂತ್ರಗಳನ್ನು ಪೂರ್ವಪಕ್ಷಸೂತ್ರ, ಸಿದ್ಧಾಂತಸೂತ್ರಗಳೆಂಬುದಾಗಿ ಅನೇಕ ಕಡೆ ಶಂಕರ ರಾಮಾನುಜರು ಗ್ರಹಿಸಿರುವರು. ಆದರೆ ಬ್ರಹ್ಮಸೂತ್ರಗಳಲ್ಲಿರುವ ಪ್ರತಿಯೊಂದು ಸೂತ್ರವೂ ಸಿದ್ಧಾಂತಸೂತ್ರವೇ ಆಗಿದ್ದು ಅದರಲ್ಲಿ ಪೂರ್ವಪಕ್ಷಸೂತ್ರಗಳ ಪ್ರಸಕ್ತಿಯೇ ಇಲ್ಲ ಎಂಬುದಾಗಿ ಶ್ರೀಮಧ್ವಾಚಾರ್ಯರು ನಿರೂಪಿಸಿರುವರು.

6)ಸೂತ್ರ ಸಂಖ್ಯೆ ಅಧಿಕರಣಗಳ ಸಂಖ್ಯೆಯ ಬಗ್ಗೆಯೂ ಭಾಷ್ಯಗಳಲ್ಲಿ ಒಮ್ಮತವಿಲ್ಲ. ಶಂಕರ ರಾಮಾನುಜರ ಪ್ರಕಾರ ಸೂತ್ರಸಂಖ್ಯೆ ಕ್ರಮವಾಗಿ 555 ಮತ್ತು 545. ಆದರೆ ಆಚಾರ್ಯರ ರೀತ್ಯಾ ಸೂತ್ರಗಳ ಸಂಖ್ಯೆ 564. 'ವಿಷ್ಣು' ಎಂಬ ಹೆಸರಿನಲ್ಲೇ ಸೂತ್ರಗಳ ಸಂಖ್ಯೆ ಪ್ರತಿಪಾದಿತವಾಗಿದೆ ಎಂಬುದನ್ನು ಅವರ ಪರಂಪರೆ ಸ್ಪಷ್ಟಪಡಿಸಿದೆ. ವಿ, ಷ, ಣ; ವಿ ಎಂಬುದು ಯ ವರ್ಗದ ನಾಲ್ಕನೆಯ ಅಕ್ಷರ, ಕ್ಷ ಆರನೆಯ ಅಕ್ಷರ; ಣ, ತ ವರ್ಗದ ಐದನೆಯ ಅಕ್ಷರ ಎಂದರೆ ಇವುಗಳ ಸಂಖ್ಯೆ 456; ಅಂಕಾನಾಂ ವಾಮತೋ ಗತಿಃ ಎಂಬ ನಿಯಮಾನುಸಾರ 564 ಎಂದಾಗುವುದು. ಹೀಗೆ ಸೂತ್ರಸಂಖ್ಯೆಯೂ ವಿಷ್ಣುವಾಚಕವಾಗಿದ್ದು ಬ್ರಹ್ಮಸೂತ್ರಪ್ರತಿಪಾದ್ಯ ಬ್ರಹ್ಮನು ವಿಷ್ಣುವೇ ಎಂದಾಗುವುದು.

7) ಬ್ರಹ್ಮಸೂತ್ರಗಳಲ್ಲಿ ಜೈಮಿನಿ, ಬಾದರಿ, ಆಶ್ಮರಥ್ಯ, ಕಾಶಕೃತ್ಸ್ನ, ಔಡುಲೋಮಿ ಮೊದಲಾದ ಮುನಿಗಳ ಉಲ್ಲೇಖವಿದೆ. ಅವರ ಉಲ್ಲೇಖ ಅವರ ಮತದ ನಿರಾಕರಣೆಗಾಗಿ ಬಂದಿದೆ ಎಂಬುದು ಶಂಕರ ರಾಮಾನುಜರ ದೃಷ್ಟಿ. ಆದರೆ ಶ್ರೀಮದಾಚಾರ್ಯರು ಅವರ ಉಲ್ಲೇಖ ಬಂದಿರುವುದು ಅವರ ಮತವನ್ನು ನಿರಾಕರಿಸಲೆಂದಲ್ಲ. ತಮ್ಮ ಶಿಷ್ಯರಾದ ಅವರಿಗೆ ಪ್ರಸಿದ್ಧಿಕೊಡುವ ಉದ್ದೇಶದೊಂದಿಗೆ ಅವರ ವಿಚಾರದ ಇತಿಮಿತಿಗಳನ್ನು ತೋರಿಸುವುದು ಮಾತ್ರ. ಅವರ ವಿಚಾರಗಳು ತಪ್ಪೇನೂ ಅಲ್ಲ; ಆದರೆ ಪರಿಪೂರ್ಣವಾದುದಲ್ಲ ಎಂಬ ಭಾವ ಮಾತ್ರ ಅಲ್ಲಿನದು ಎಂದರ್ಥ:

**ವ್ಯಾಸಚಿತ್ತಸ್ಥಿತಾಕಾಶಾದವಚ್ಛಿನ್ನಾನಿ ಕಾನಿಚಿತ್ ।**
**ಅನ್ಯೇ ವ್ಯವಹರಂತೇತಾನ್ಯೂರೀಕೃತ್ಯ ಗೃಹಾದಿವತ್ ॥**

**ಇತಿ ಸ್ಕಾಂದವಚನಾನ್ನ ಮತಾನಾಂ ಪರಸ್ಪರ ವಿರೋಧಃ । (1/2/28)**

**ಸರ್ವಜ್ಞಸ್ಯೈವ ಕೃಷ್ಣಸ್ಯ ತ್ವೇಕದೇಶವಿಚಿಂತಿತಮ್ ।**
**ಸ್ವೀಕೃತ್ಯ ಮುನಯೋ ಬ್ರೂಯುಸ್ತನ್ಮತಂ ನ ವಿರುಧ್ಯತೇ ॥**
**ಇತಿ ಬ್ರಾಹ್ಮೇ —1/3/33**

**ಕೃಷ್ಣದ್ವೈಪಾಯನಮತಾದೇಕದೇಶವಿದಃ ಪರೇ ।**
**ವದಂತಿ ತೇ ಯಥಾಪ್ರಜ್ಞಂ ನ ವಿರೋಧಃ ಕಥಂಚನ ॥ ಇತಿ ಪಾದ್ಮೇ (1/4/23)**

8) ಬ್ರಹ್ಮಸೂತ್ರಗಳಲ್ಲಿ ಎಲ್ಲವೂ ಭೇದಬೋಧಕ— ಕೆಲವು ಮಾತ್ರ ಅಭೇದ ಬೋಧಕ ಎಂಬುದನ್ನು ಅದ್ವೈತಿಗಳೂ ಒಪ್ಪಿರುವರು. ಆದರೆ ಸಕಲಬ್ರಹ್ಮಸೂತ್ರಗಳೂ ಭೇದಬೋಧಕವೇ ಆಗಿರುವವು ಎಂಬುದನ್ನು ಸ್ಫುಟವಾಗಿ ತೋರಿಸುತ್ತ, 'ಅದ್ವೈತ'ದ ಸೂಚನೆಯೂ ಅವುಗಳಲ್ಲಿಲ್ಲ ಎಂದು ಪ್ರಥಮಬಾರಿಗೆ ಸಮರ್ಥಿಸಿದ್ದು ಮಧ್ವಭಾಷ್ಯದ ಕೊಡುಗೆ. ರಾಮಾನುಜಭಾಷ್ಯ ಶಂಕರರ ಅದ್ವೈತಭಾಷ್ಯದ ನಿರಾಕರಣೆಯನ್ನು ಮಾಡುವುದಾದರೂ, ಒಟ್ಟಾಗಿ ಅವರ ಅದ್ವೈತದ ಛಾಯೆಯಿಂದ ಪೂರ್ಣವಾಗಿ ಹೊರಬರಲಾಗಲಿಲ್ಲವೆಂಬುದು ಅವರ ಮತದ ಒಟ್ಟು ಪ್ರಮೇಯದ ಅಧ್ಯಯನಗಳಿಂದ ಸ್ಪಷ್ಟ. 'ವಿಶಿಷ್ಟಾದ್ವೈತ' ಎಂಬ ಹೆಸರೇ ಅದರ ಮೇಲಿರುವ ಅದ್ವೈತ ಪ್ರಭಾವಕ್ಕೆ ಸ್ಪಷ್ಟ ನಿದರ್ಶನ. ಡಾ॥ ಎಸ್.ಎನ್. ದಾಸಗುಪ್ತರು ಹೇಳುವಂತೆ ಸಮಗ್ರ ದರ್ಶನ ಪ್ರಪಂಚದ ಇತಿಹಾಸದಲ್ಲೇ ಪರಿಪೂರ್ಣದ್ವೈತವಾದ ಶ್ರೀಮಧ್ವಾಚಾರ್ಯರ ವೈಶಿಷ್ಟ್ಯ.

9) ಅಧ್ಯಾಯ, ಪಾದಗಳ ವ್ಯವಸ್ಥೆಯನ್ನು ಒಪ್ಪಿದರೂ ಅವುಗಳ ವಿಷಯಪ್ರತಿಪಾದನೆಯ ಬಗ್ಗೆ ನಿಖರತೆಯನ್ನು ಕಾಪಾಡಿಕೊಳ್ಳುವಲ್ಲಿ ಇತರ ಭಾಷ್ಯಗಳು ಯಶಸ್ವಿಯಾಗಲಿಲ್ಲ. 'ಈಕ್ಷತ್ಯಧಿಕರಣ' ಸಾಂಖ್ಯಮತನಿರಾಸಕ್ಕೆ ಹೊರಟಿದೆ; ಉತ್ಪತ್ತ್ಯಧಿಕರಣದ ಪಂಚರಾತ್ರದ ಪ್ರಾಮಾಣ್ಯಕ್ಕೆ ಸಂಬಂಧಿಸಿದೆ ಎಂಬ ಶಂಕರರಾಮಾನುಜರ ವಾದಸರಣಿಯನ್ನು ನಿದರ್ಶನವಾಗಿ ಕೊಡಬಹುದು. ಸಮನ್ವಯಾಧ್ಯಾಯದ ಈಕ್ಷತ್ಯಧಿಕರಣದಲ್ಲಿ ಸಾಂಖ್ಯಮತದ ನಿರಾಸದ ಪ್ರಸಕ್ತಿ ಎಲ್ಲಿಯದು? ಸಮಯಪಾದ ಮತಗಳ ವಿಮರ್ಶೆಗೇ ಮೀಸಲಾಗಿಲ್ಲವೆ? ಅದರಂತೆ ಉತ್ಪತ್ತ್ಯಧಿಕರಣ ಸಮಯಪಾದದಲ್ಲಿ ಬರುವಾಗ ಸಮನ್ವಯಾಧ್ಯಾಯದ ಶಾಸ್ತ್ರಯೋನಿತ್ವಾಧಿಕರಣಕ್ಕೆ ಸಂಬಂಧಿಸಿದ ಪಂಚರಾತ್ರಪ್ರಾಮಾಣ್ಯದ ಪ್ರಸಕ್ತಿ ಏತಕ್ಕೆ? ವಾಸ್ತವವಾಗಿ ಅವುಗಳಲ್ಲಿ ಚರ್ಚಿತವಾಗಿರುವ ವಿಚಾರ ಸಂಪೂರ್ಣ ಬೇರೆಯೇ ಆಗಿದೆ ಎಂದು ಬೆಳಕು ಚೆಲ್ಲಿದವರು ಶ್ರೀಮಧ್ವಾಚಾರ್ಯರು.

**'ನ ಚ ಸಾಂಖ್ಯನಿರಾಕೃತ್ಯೈ ಸೂತ್ರಾಣ್ಯೇತಾನ್ಯಚೀಕ್ಲೃಪತ್ ।'**
**'ದೂಷಣಂ ಪಂಚರಾತ್ರಸ್ಯ ವೀಕ್ಷಾಯಾಮಪಿ ನ ಕ್ಷಮಮ್ ॥' ಇತ್ಯಾದಿ**

10) ಬ್ರಹ್ಮಸೂತ್ರಗಳ ಭಾಷ್ಯಗಳೆಲ್ಲ ಒಂದೇ ತೆರನಾಗಿಲ್ಲ; ಪರಸ್ಪರ ವಿರುದ್ಧಾರ್ಥ ನೀಡುವವು, ಎಂದ ಮೇಲೆ ಅವೆಲ್ಲವೂ ಸರಿಯಾದ ಭಾಷ್ಯಗಳಾಗಿರಲು ಸಾಧ್ಯವೇ ಇಲ್ಲ. ಹಾಗಿದ್ದರೆ ಬ್ರಹ್ಮಸೂತ್ರಗಳ ಯಥಾರ್ಥಭಾಷ್ಯ ಯಾವುದು? ಈ ಪ್ರಶ್ನೆಗೆ ಬೇರೆ ಭಾಷ್ಯಗಳಲ್ಲಿ ಉತ್ತರವಿಲ್ಲ. ಆದರೆ ಮಧ್ವಭಾಷ್ಯದ ಬಗ್ಗೆ ಈ ಶಂಕೆಗೆ ಅವಕಾಶವೇ ಇಲ್ಲ. ಪ್ರಮಾಣಗಳನ್ನು ಸರ್ವತ್ರ ಉಲ್ಲೇಖಿಸುತ್ತ ಹೋಗುವುದೇ ಇದಕ್ಕೆ ಕಾರಣ. ಶ್ರೀವೇದವ್ಯಾಸರ ಬ್ರಹ್ಮಸೂತ್ರಗಳಿಗೆ ಅವರೇ ರಚಿಸಿದ ಬ್ರಹ್ಮತರ್ಕ, ಸ್ಕಂದ ಪುರಾಣ ಮೊದಲಾದ ಗ್ರಂಥಗಳಿಂದ ಆಧಾರವಿತ್ತ ಮೇಲೆ ಅವರ ಅಭಿಪ್ರಾಯದ ಬಗ್ಗೆ ಗೊಂದಲಕ್ಕೆ ಎಡೆಯೆಲ್ಲಿ?

ಹೀಗೆ ಮಧ್ವಭಾಷ್ಯ ಮೇಲ್ನೋಟಕ್ಕೇ ಅತ್ಯಂತ ಯಥಾರ್ಥಭಾಷ್ಯವಾಗಿ ಮನಸ್ಸನ್ನು ತಟ್ಟುತ್ತದೆ.

ಬ್ರಹ್ಮಸೂತ್ರಭಾಷ್ಯವನ್ನು ಶ್ರೀಮದಾಚಾರ್ಯರು ರಚಿಸಿದ್ದು ವಿಶಾಲ ಬದರಿಯಲ್ಲಿ. ವ್ಯಾಸ-ನಾರಾಯಣರ ಆದೇಶದಂತೆ ಉತ್ತರ ಬದರಿಯಿಂದ ವಿಶಾಲಬದರಿಗೆ ಮರಳಿದ ಆಚಾರ್ಯರು ಅಲ್ಲಿ ಅದನ್ನು ರಚನೆ ಮಾಡಿದರು. ಅವರು ಹೇಳುತ್ತ ಹೋದಂತೆ ಭಾಷ್ಯವನ್ನು ಲೇಖನ ಮಾಡಿಕೊಂಡವರು ಅವರ ಜೊತೆಗೆ ಉತ್ತರಬದರಿಯಿಂದ ಹಿಂಬಾಲಿಸುವ ಪ್ರಯತ್ನ ಮಾಡಿದ್ದ ಪ್ರೀತಿಯ ಶಿಷ್ಯ ಶ್ರೀ ಸತ್ಯತೀರ್ಥರು. ಅದನ್ನು ಅವರು ಪ್ರಕಾಶನ ಪಡಿಸಿದ ಸ್ಥಳ ಗೋದಾವರೀತೀರದ ಒಂದು ವಿದ್ವತ್ಸಭೆ. ಅದನ್ನು ಮೊದಲಬಾರಿಗೆ ಶ್ರವಣ ಮಾಡಿದ ಹಿರಿಮೆ ಅನಂತರ ಶ್ರೀಪದ್ಮನಾಭತೀರ್ಥರೆಂಬುದಾಗಿ ಪ್ರಸಿದ್ಧರಾದ ಶ್ರೀ ಶೋಭನಭಟ್ಟರದು. ಅದರ ಮತ್ತೊಂದು ಪ್ರತಿಯನ್ನು ಬೇರೊಬ್ಬರ ಮೂಲಕ ಶ್ರೀಮದಾಚಾರ್ಯರು ಅಚ್ಯುತಪ್ರೇಕ್ಷರಿಗೆ ತಲುಪಿಸಿದ್ದರು. ಅದರ ಅವಲೋಕನದಿಂದ ಸಂಭ್ರಮಪಟ್ಟು ಪೂರ್ಣವಾಗಿ ಅದನ್ನು ಒಪ್ಪಿಕೊಂಡವರು ಜ್ಯೇಷ್ಠಯತಿಗಳು. ಆದರೆ ಅಚ್ಯುತಪ್ರೇಕ್ಷರಿಗೆ ಅದು ಸಮರ್ಪಕವೆನ್ನಿಸಿದರೂ, ಕೆಲವು ಸಂದೇಹಗಳು ಅವರ ಮನಸ್ಸಿನಲ್ಲಿ ಉಳಿದುಕೊಂಡಿದ್ದವು. ಆಚಾರ್ಯರ ಮುಖದಿಂದ ಅದರ ವಿವರಣೆ ಕೇಳಿದ ಅನಂತರ ಸಂಪೂರ್ಣವಾಗಿ ಅವರೂ ಅವರ ಸಿದ್ಧಾಂತದ ಅನುಯಾಯಿಗಳಾದರು.

ಬ್ರಹ್ಮಸೂತ್ರಭಾಷ್ಯಕ್ಕೆ ರಚಿತವಾದ ಮೊದಲ ಟೀಕೆ ಶ್ರೀ ಪದ್ಮನಾಭತೀರ್ಥರ ಸತ್ತರ್ಕದೀಪಾವಲಿ. ಮುಂದೊಮ್ಮೆ ಆಚಾರ್ಯರ ಆದೇಶದಂತೆ ಶ್ರೀತ್ರಿವಿಕ್ರಮ ಪಂಡಿತರು ರಚಿಸಿದ ಟೀಕೆ 'ತತ್ತ್ವಪ್ರದೀಪ', ಶ್ರೀ ಜಯತೀರ್ಥರ ಸುಪ್ರಸಿದ್ಧ ಟೀಕೆ

'ತತ್ತ್ವಪ್ರಕಾಶಿಕೆ!' ತತ್ತ್ವಪ್ರಕಾಶಿಕೆಯ ಮೇಲಿನ ಶ್ರೀವಾದಿರಾಜರ 'ಗುರ್ವರ್ಥದೀಪಿಕಾ', ಶ್ರೀ ರಘೂತ್ತಮರ 'ಭಾವಬೋಧ' ಶ್ರೀರಾಘವೇಂದ್ರರ 'ಭಾವದೀಪ' ಶ್ರೀಸತ್ಯನಾಥರ 'ಅಭಿನವಚಂದ್ರಿಕಾ' ಶ್ರೀ ಸುಮತೀಂದ್ರರ 'ಭಾವರತ್ನಕೋಶ' ಮೊದಲಾದವು ಪ್ರಸಿದ್ಧ ಟಿಪ್ಪಣಿಗಳು.

ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕೆ ತತ್ತ್ವಪ್ರಕಾಶಿಕೆಯ ಮೇಲಿನ ಉಪಲಬ್ಧವಿರುವ ಪ್ರಾಚೀನ ಟಿಪ್ಪಣಿ. ಆದರೆ ಅದು ಟಿಪ್ಪಣಿಗಿಂತಲೂ ಮುಖ್ಯವಾಗಿ ಸಕಲಭಾಷ್ಯಗಳ ವಿಮರ್ಶನ ರೂಪವಾಗಿ ಸ್ವತಂತ್ರ ಗ್ರಂಥದ ಛಾಯೆಯನ್ನೇ ಹೊಂದಿದ್ದು ವ್ಯಾಸತ್ರಯಗಳಲ್ಲಿ ಒಂದಾಗಿ ಮಾನ್ಯವಾಗಿದೆ.

## ಅಣುಭಾಷ್ಯ

ಅಣುಭಾಷ್ಯವು 32 ಶ್ಲೋಕಗಳ ಭಾಷ್ಯಾರ್ಥಸಂಗ್ರಹ. ಭಾಷ್ಯವು 'ಸರ್ವಶಾಸ್ತ್ರಾರ್ಥ'ವಾದ್ದರಿಂದ ಇದು 'ಸರ್ವಶಾಸ್ತ್ರಾರ್ಥಸಂಗ್ರಹ' ಬ್ರಹ್ಮಸೂತ್ರ ಭಾಷವನ್ನು ಪ್ರತಿನಿತ್ಯ ಪಠಿಸುವ ಪರಿಪಾಠ ಅಚ್ಯುತಪ್ರೇಕ್ಷರದಾಗಿದ್ದಿತಂತೆ. ಒಮ್ಮೆ ಸಾಧನದ್ವಾದಶಿ ದಿನದಂದು ಅದು ಸಾಧ್ಯವಾಗದೆ ವ್ರತಭಂಗವಾದೀತೆಂಬ ಚಿಂತೆ ಅವರಿಗೆ ಒದಗಿತಂತೆ ತತ್‌ಕ್ಷಣವೇ ಆಚಾರ್ಯರು ರಚಿಸಿಕೊಟ್ಟ ಕೃತಿ 'ಅಣುಭಾಷ್ಯ'. ಹೀಗೆಂದು ಕೆಲವು ವ್ಯಾಖ್ಯಾನಕಾರರು ಬರೆದಿರುವರು. ಇಂದಿಗೂ ಸಮಗ್ರಭಾಷ್ಯ ಪಾರಾಯಣ ಮಾಡುವ ಪದ್ಧತಿ ಅನೇಕರಲ್ಲಿ ಉಂಟು. ಅಂತಹವರಿಗೂ ಸಾಧನ ದ್ವಾದಶೀ ಮೊದಲಾದ ಪ್ರಸಂಗಗಳಲ್ಲಿ ಈ ಕೃತಿಯ ಪಾಠ ಭಾಷ್ಯಪಾರಾಯಣದ ಪ್ರತಿನಿಧಿ.

ಪಾಠಮಾಡುವವರಿಗೆ ಮಾತ್ರವಲ್ಲದೆ, ಇಡೀ ಭಾಷ್ಯಾರ್ಥವನ್ನು ಮನನ ಮಾಡುವವರಿಗೂ ಇದು ಅಷ್ಟೇ ಉಪಯುಕ್ತ ಕೃತಿ. ಅದನ್ನು ಶ್ರೀ ರಾಘವೇಂದ್ರರ ತತ್ತ್ವಮಂಜರೀ ಸ್ಪಷ್ಟಪಡಿಸಿದೆ.

ಇದಕ್ಕೆ ನಾರಾಯಣಪಂಡಿತರ ಟೀಕೆಯೊಂದು ಉಪಲಬ್ಧವಿದೆ. ಅವರ ಪುತ್ರ ವಾಮನಪಂಡಿತರ 'ಆನಂದಮಾಲಾ' ಇದರ ಪ್ರಸಿದ್ಧ ಪ್ರಾಚೀನ ಟೀಕೆ. ಅನಂತರವೂ ಹತ್ತಾರು ಟೀಕೆಗಳು ರಚಿತವಾಗಿದ್ದು ಅವುಗಳಲ್ಲಿ ಶ್ರೀ ರಾಘವೇಂದ್ರರ 'ತತ್ತ್ವಮಂಜರೀ' ಅತ್ಯಂತ ವಿಸ್ತಾರವಾಗಿದ್ದು ಅಧ್ಯಯನಪರಂಪರೆಯಲ್ಲಿ ವಿಶೇಷ ಪ್ರಸಾರದಲ್ಲಿದೆ.

ಅಣುಭಾಷ್ಯವು ಬ್ರಹ್ಮಸೂತ್ರಭಾಷ್ಯದ ಅಧ್ಯಾಯಸಾರವನ್ನು ಶ್ಲೋಕರೂಪದಲ್ಲಿ ನೀಡುವ ಪುಟ್ಟಕೃತಿ; ಸಮನ್ವಯ, ಅವಿರೋಧ, ಸಾಧನ ಮತ್ತು ಫಲ ಎಂಬ ನಾಲ್ಕುಅಧ್ಯಾಯಗಳ ಸಾರವನ್ನು, ಆ ಮೂಲಕ ಸಮಗ್ರ ಬ್ರಹ್ಮಸೂತ್ರಗಳ ಒಟ್ಟು ಭಾವವನ್ನು ಸುಲಭವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಇದು ಅಧ್ಯಾಯಗಳ ಸಾರಮಾತ್ರವಾಗಿರದೆ ಪ್ರತಿಪಾದದಲ್ಲಿನ ಸಕಲ ಅಧಿಕರಣಗಳ ಸಾರವನ್ನು ಪ್ರತ್ಯೇಕ ಕೊಡುವ 'ಅಧಿಕರಣಾರ್ಥಸಾರ'ವೂ ಆಗಿದೆ. ಎಂಬ ವಿಶೇಷಾಂಶವನ್ನು ಶ್ರೀ ರಾಘವೇಂದ್ರತೀರ್ಥರು ಇದರ ಮೇಲಿನ ತಮ್ಮ 'ತತ್ತ್ವಮಂಜರೀ' ಎಂಬ ಟೀಕೆಯಲ್ಲಿ ವಿವರವಾಗಿ ನಿರೂಪಿಸಿರುವರು. ಸುಮಧ್ವವಿಜಯದಲ್ಲಿ ಇದನ್ನು 'ತನ್ನ ಪುಟ್ಟಬಾಯಲ್ಲಿ ಬ್ರಹ್ಮಾಂಡವನ್ನು ತೋರಿಸುವ ಮೂಲಕ ಶ್ರೀಕೃಷ್ಣನು ತಾನು ಭಗವಂತ ಎಂಬುದಾಗಿ ತನ್ನ ಸ್ವರೂಪವನ್ನು ತೋರಿಸಿಕೊಟ್ಟಂತೆ, ತಮ್ಮ ಈ ಅಣುಭಾಷ್ಯದ ಮೂಲಕ ತಾವು ವಾಯುದೇವರ ಅವತಾರ ಎಂಬುದನ್ನು ತೋರಿಸಿಕೊಟ್ಟಿರುವರು ಎಂಬುದಾಗಿ ಬಣ್ಣಿಸಲಾಗಿದೆ.

## ಅನುವ್ಯಾಖ್ಯಾನ

ಬ್ರಹ್ಮಸೂತ್ರಭಾಷ್ಯದಲ್ಲಿ ಸೂತ್ರಾರ್ಥದ ನಿರೂಪಣೆಗಷ್ಟೇ ಪ್ರಾಧ್ಯಾನ್ಯ. ಇತರ ಭಾಷ್ಯಗಳ ವಿಮರ್ಶೆಯನ್ನು ಅಲ್ಲೊಮ್ಮೆ ಇಲ್ಲೊಮ್ಮೆ ಅತ್ಯಂತ ಸಂಕ್ಷಿಪ್ತವಾಗಿ ಮಾಡಿರುವರು. ಅನುವ್ಯಾಖ್ಯಾನವು ಹಾಗಲ್ಲ. ಪ್ರಧಾನವಾಗಿ ಇತರ ಭಾಷ್ಯಗಳ ವಿಮರ್ಶೆ ಅದರಲ್ಲಿ ಬಂದಿದೆ. ಅದರೊಂದಿಗೆ ತಮ್ಮ ಸಿದ್ಧಾಂತದ ಮುಖ್ಯತತ್ತ್ವಗಳಾದ ವಿಷ್ಣುಸರ್ವೋತ್ತಮತ್ವ, ತಾರತಮ್ಯ, ವಿಶೇಷ, ಭೇದ ಮೊದಲಾದವುಗಳ ಸವಿಸ್ತಾರ ನಿರೂಪಣೆಯನ್ನೂ ನೀಡಿರುವರು. ಬ್ರಹ್ಮಸೂತ್ರಭಾಷ್ಯ ಮೂಲತಃ ಗದ್ಯಕೃತಿಯಾಗಿದ್ದು ಉದಾಹರಿಸಿರುವ ಪ್ರಮಾಣವಾಕ್ಯಗಳು ಮಾತ್ರ ಶ್ಲೋಕರೂಪದಲ್ಲಿವೆ. ಅನುವ್ಯಾಖ್ಯಾನವು ಶ್ಲೋಕರೂಪದಲ್ಲಿದ್ದು ಪ್ರಧಾನವಾಗಿ ಪ್ರಮಾಣಗಳ ಪ್ರತೀಕಗಳು ಶ್ಲೋಕರೂಪದಲ್ಲೇ ಗೃಹೀತವಾಗಿವೆ.

ಅನುವ್ಯಾಖ್ಯಾನವು ರಚಿತವಾದ ಹಿನ್ನೆಲೆ ಮತ್ತು ಸನ್ನಿವೇಶಗಳನ್ನು ಸುಮಧ್ವವಿಜಯ ದಾಖಲಿಸಿದೆ:

ಆಚಾರ್ಯರ ಸರ್ವತೋಮುಖ ಹಿರಿಮೆಯನ್ನು ಗಮನಿಸಿದ ತ್ರಿವಿಕ್ರಮಪಂಡಿತರು ಅವರ ಶಿಷ್ಯತ್ವ ವಹಿಸುವರು. ಅವರಿಗೆ ತಮ್ಮ ಭಾಷ್ಯಕ್ಕೆ

ಟೀಕೆಯೊಂದನ್ನು ರಚಿಸಲು ಆದೇಶವಿತ್ತಾಗ ತ್ರಿವಿಕ್ರಮರು ಪ್ರಾರ್ಥಿಸಿಕೊಂಡರಂತೆ "ತಮ್ಮ ಪ್ರತಿಯೊಂದು ಗ್ರಂಥವೂ ಅಮೋಘ; ವಿಶಿಷ್ಟ; ಆದರೆ ಅವುಗಳಲ್ಲಿ ಅಡಕವಾಗಿರುವ ಚಿಂತನಸರಣಿಯನ್ನು ಅರಗಿಸಿಕೊಳ್ಳುವ ಯೋಗ್ಯತೆ ನಮ್ಮದಲ್ಲ. ಅವನ್ನೆಲ್ಲ ಸ್ಫುಟಪಡಿಸುವ ಮತ್ತೊಂದು ಕೃತಿಯನ್ನು ತಾವೇ ಅನುಗ್ರಹಿಸಬೇಕು" ಈ ಪ್ರಸಂಗ ಭಾಗವತಪುರಾಣವನ್ನು ರಚಿಸಿ ಅನುಗ್ರಹಿಸಬೇಕೆಂದು ಶ್ರೀವೇದವ್ಯಾಸರನ್ನು ನಾರದರು ಪ್ರಾರ್ಥಿಸಿದ ಪ್ರಸಂಗದಂತಿದೆ. ತಕ್ಷಣವೇ ಆಚಾರ್ಯರು ನಾಲ್ವರು ಶಿಷ್ಯರನ್ನು ಕೂಡಿಸಿಕೊಂಡು ಬರೆಸತೊಡಗಿದರು. ನಾಲ್ವರು ಶಿಷ್ಯರು, ನಾಲ್ಕು ಅಧ್ಯಾಯಗಳ ಕೃತಿ; ಒಂದೇ ಬಾರಿ ನಾಲ್ವರಿಗೂ ಒಂದೊಂದು ಅಧ್ಯಾಯದ ಉಪದೇಶ. ಅವರು ಬರೆಯುತ್ತ ಹೋದರು. ಒಮ್ಮೆಲೆ ನಾಲ್ಕು ಅಧ್ಯಾಯಗಳೂ ಪೂರೈಸಿ ಗ್ರಂಥ ಸಿದ್ಧವಾಯಿತು. ಅದೇ ಅನುವ್ಯಾಖ್ಯಾನ. ಎಂತಹ ಕೌಶಲ; ಎಂತಹ ಕೃತಿ! ವೇದಾಂತಚಿಂತನೆಯ ಮೇರುಕೃತಿ ಆಶುಕವಿತೆಯೆಂಬಂತೆ ನಿರ್ಮಾಣವಾಯಿತು. ಜಟಿಲವಾದ ವೇದಾಂತ ಕಾವ್ಯದಂತೆ ಹೊರಹೊಮ್ಮಿ ಬಂತು. ಈ ಬಗೆಯ ಮತ್ತೊಂದು ವಿದ್ವತ್ಪವಾಡವನ್ನು ಜಗತ್ತು ದಾಖಲಿಸಿಲ್ಲ :

**ಅಪರೋಽಪೀಷ್ಯತೇಽಸ್ಮಾಭಿಗ್ರಂಥೇಷ್ವೇತೇಷು ಸತ್ಸ್ವಪಿ ।**
**ಸತ್ಸ್ವಪೀಂದ್ರಾದಿಷು ಪುರಾ ತಾರಕಾರಿರಿವಾಮರೈಃ ॥**

**ಗ್ರಂಥೇಭ್ಯ ಏಭ್ಯೋಽಗಾಧೇಭ್ಯೋ ಯುಕ್ತಯೋ ನೋ ದುರುದ್ಧರಾಃ ।**
**ಮನೋಮಾಂದ್ಯಾತ್ತತೋ ಗ್ರಂಥಂ ವ್ಯಕ್ತತರ್ಕತತಿಂ ಕುರು ॥**

**ಇತ್ಯರ್ಥಿತೋ ವ್ಯಧಾನ್ಮಧ್ವಃ ಸೋಽನುವ್ಯಾಖ್ಯಾಂ ಸತಾಂ ಸುಧಾಮ್ ।**
**ದುರ್ವಾದಿಗರ್ವಾದ್ರಿಪವಿಂ ಮಾಯಿಧ್ವಾಂತರವಿದ್ಯುತಿಮ್ ॥**

**ಯುಗಪದ್ರಚಯನ್ನೇನಾಂ ಕದಾಚಿತ್ಸ ನಿರಂತರಮ್ ।**
**ಚತುರಶ್ಚತುರಃ ಶಿಷ್ಯಾನ್ ಲೀಲಯಾಽನಲೇಖಯತ್ ಖಲು ॥**

**—ಸುಮಧ್ವವಿಜಯ 15/86-89**

ನಾರದರ ಪ್ರಾರ್ಥನೆಯ ಫಲಶ್ರುತಿ - ಶ್ರೀವೇದವ್ಯಾಸರ ಶ್ರೀಮದ್ಭಾಗವತಾಮೃತ. ತ್ರಿವಿಕ್ರಮಪಂಡಿತರ ಪ್ರಾರ್ಥನೆಯ ಫಲಶ್ರುತಿ ಶ್ರೀಮದಾಚಾರ್ಯರ 'ಅನುವ್ಯಾಖ್ಯಾನಾಮೃತ'. ಶ್ರೀಭಾಗವತಸುಧೆ ನೀಡಿದ ವೇದವ್ಯಾಸರು ಸಾಕ್ಷಾತ್ ಭಗವಂತ; ಅನುವ್ಯಾಖಾನಸುಧೆ ನುಡಿದ ಆಚಾರ್ಯ ಶ್ರೀ ಮಧ್ವರು 'ಭಗವತ್ಪಾದ'ರು.

ಅನುವ್ಯಾಖ್ಯಾನಕ್ಕೆ ಶ್ರೀಪದ್ಮನಾಭತೀರ್ಥರು ರಚಿಸಿದ ಟೀಕೆ 'ಸನ್ನ್ಯಾಯ ರತ್ನಾವಲಿ', ಶ್ರೀ ನಾರಾಯಣಪಂಡಿತರ ಟೀಕೆ 'ನಯಚಂದ್ರಿಕಾ'; ಶ್ರೀ ಜಯತೀರ್ಥರ ಟೀಕೆಯೇ ವಿಶ್ವಖ್ಯಾತಿಯ'ನ್ಯಾಯಸುಧಾ'. ಅದರ ಮೇಲೆ ರಚಿತವಾಗಿರುವ ಟಿಪ್ಪಣಿಗಳ ಸಂಖ್ಯೆ ಮೂವತ್ತನ್ನೂ ಮೀರುತ್ತದೆ. ಶ್ರೀ ವಾದಿರಾಜರ 'ಗುರ್ವರ್ಥ ದೀಪಿಕಾ' ಶ್ರೀ ಯದುಪತ್ಯಾಚಾರ್ಯರ ನ್ಯಾಯಸುಧಾವಿವೃತಿ, ಶ್ರೀವಿದ್ಯಾಧೀಶ ತೀರ್ಥರ 'ವಾಕ್ಯಾರ್ಥಚಂದ್ರಿಕಾ' ಕೇಶವಾಚಾರ್ಯ ಪಾಂಡುರಂಗಿ ಅವರ 'ಶೇಷವಾಕ್ಯಾರ್ಥಚಂದ್ರಿಕಾ', ಶ್ರೀ ರಾಘವೇಂದ್ರರ 'ಪರಿಮಳ' ಇವುಗಳಲ್ಲಿ ಪ್ರಮುಖವಾದುವು.

# ನ್ಯಾಯವಿವರಣ

ನ್ಯಾಯವಿವರಣವು ಹಿಂದೆ ಹೇಳಿದಂತೆ ಅನುವ್ಯಾಖ್ಯಾನದ 'ಯುಕ್ತಿಮಾಲಾ' ಭಾಗದ ವಿವರಣೆ.

> ಯುಕ್ತ್ಯಾಯಾ ಯುಕ್ತಿಮಾಲಾಯಾಃ ಪ್ರೋಕ್ತ್ಯಾಯಾಸ್ತತ್ರ ಚಾತ್ಮನಾ ।
> ವ್ಯಕ್ತಂ ಚಕ್ರೇ ವಿವರಣಂ ಕವೀಂದ್ರೈರೇಷ ದುಷ್ಕರಮ್ ॥
>
> —ಸುಮಧ್ವವಿಜಯ 15/90

ಇದರ ಮೊದಲ ಮೂರು ಪಾದಗಳಿಗೆ ಶ್ರೀ ಜಯತೀರ್ಥರು ಟೀಕೆ ರಚಿಸಿರುವರು. ಉಳಿದ ಭಾಗಕ್ಕೆ ಶ್ರೀ ರಘೂತ್ತಮತೀರ್ಥರ 'ಭಾವಬೋಧ' ಎಂಬ ಟೀಕೆ ಇದೆ. ಅದಕ್ಕೆ ತಾಮ್ರಪರ್ಣೀ ಆನಂದತೀರ್ಥಾಚಾರ್ಯರ ಟಿಪ್ಪಣಿಯೂ ಉಂಟು.

ನ್ಯಾಯವಿವರಣವು ಅದರ ಹೆಸರೇ ಸೂಚಿಸುವಂತೆ ಬ್ರಹ್ಮಸೂತ್ರಗಳ ಪ್ರತಿಪಾದದ ಪ್ರತಿಅಧಿಕರಣದ ಪೂರ್ವಪಕ್ಷ ಹಾಗೂ ಸಿದ್ಧಾಂತಗಳ ನ್ಯಾಯಗಳನ್ನು ವಿವರಿಸುವ ಕೃತಿ. ಇದು ಮತ್ತೊಂದು ರೀತಿಯಲ್ಲಿ ತಮ್ಮ ಅನುವ್ಯಾಖ್ಯಾನದಲ್ಲಿ ಸಂಗೃಹೀತವಾಗಿರುವ ಪೂರ್ವಪಕ್ಷಸಿದ್ಧಾಂತಯುಕ್ತಿಗಳ ಸಂಗ್ರಹರೂಪವಾದ 'ಯುಕ್ತಿಮಾಲಾ' ಭಾಗಕ್ಕೆ ಅವರೇ ರಚಿಸಿರುವ ವಿವರಣೆಯೂ ಆಗಿದೆ.

ನ್ಯಾಯವಿವರಣದ ಆದ್ಯಂತಶ್ಲೋಕಗಳಲ್ಲಿ ಬ್ರಹ್ಮಸೂತ್ರಗಳ ಹಿರಿಮೆ, ಅವುಗಳ ಅರ್ಥಗಾಂಭೀರ್ಯ ಅವಕ್ಕೆ ವ್ಯಾಖ್ಯಾನ ರಚಿಸುವ ತಮ್ಮ ಕಾರ್ಯದ ಹಿನ್ನೆಲೆ ಮೊದಲಾದವುಗಳು ತುಂಬಾ ಪರಿಣಾಮಕಾರಿಯಾಗಿ ನಿರೂಪಿಸಿರುವರು.

ಆದಿ: ಕೃತ್ವಾ ಭಾಷ್ಯಾನುಭಾಷ್ಯೇಽಹಮಪಿ ವೇದದಾರ್ಥಸತ್ಪತೇಃ ।
ಕೃಷ್ಣಸ್ಯ ಸೂತ್ರಾನುವ್ಯಾಖ್ಯಾಸನ್ನ್ಯಾಯವಿವೃತಿಂ ಸ್ಫುಟಮ್ ॥
ಕರೋಮಿ ಮಂದಬುದ್ಧೀನಾಂ ಬುಧಾನಾಂ ಚೋಪಕಾರಿಕಾಮ್ ।
ಪ್ರೀತ್ಯೈ ತಸ್ಯೈವ ದೇವಸ್ಯ ತತ್ಪ್ರಸಾದಪುರಃಸರಃ ॥

ಅಂತ: ಇತ್ಯನಂತಮಹಾನ್ಯಯ ಮೀಮಾಂಸಾಪಾರವಾರಿಧೇಃ ।
ಉತ್ತಾರಣಾತ್ಯನ್ಯಾಶಕ್ತ್ಯೈವ ವ್ಯಾಕುಲೀಕೃತಚೇತಸಾಮ್ ॥
ಮಂದಾನಾಮುಪಕಾರಾಯ ಮಹತಾಂ ಚೋಚ್ಛ್ರಿತಾತ್ಮನಾಮ್ ।
ತದ್ವಿಶೇಷಪರಿಜ್ಞಾನಪ್ರದೀಪ್ತಾರ್ಕಾಭಚೇತಸಾಮ್ ॥

ವಿಶೇಷಗಾಢೇ ಮನಸಿ ನಿತರಾಮುಪಕಾರಕಃ ।
ನ್ಯಾಯಪ್ಲವೋ ಮಯಾಽಕಾರಿ ಸಂಕ್ಷೇಪಾತ್ ಪ್ರಮಿತಾಕ್ಷರೈಃ ॥

ವಿಸ್ತಾರೋಽಪ್ಯಯಮೇವ ಸ್ಯಾತ್ ತದ್ವಿಶೇಷಾತಿವೇದಿನಾಮ್ ।
ವ್ಯಾಖ್ಯಾನುವ್ಯಾಖ್ಯಯೋರೇವ ವಿಸ್ತಾರೋ ಯದುದೀರಿತಃ ॥

ಅನಲ್ಪಚೇತಸಾಂ ಪುಂಸಾಮಲಂ ವಿಜ್ಞಾನಸಿದ್ಧಯೇ ।
ತನ್ನ್ಯಾಯೋದ್ಧರಣೇ ಶಕ್ತಾ ಅಪಿ ಹ್ಯೇತೇನ ಸುಸ್ಥಿರಮ್ ॥

ನ್ಯಾಯಾನುಗಂ ಮನಃ ಕುರ್ಯುರಿತಿ ಸಂಗ್ರಹಲಾಲಸಾಃ ।
ಕೋ ನಾಮಾಶೇಷವಿನಿದ್ಯೋರುಸಾಗರೋನ್ಮಥನೋದ್ಧೃತಮ್ ॥

ಸಾಕ್ಷಾದ್ವಿದ್ಯಾಧಿರಾಜೇನ ನ್ಯಾಯಾಮೃತಮನುತ್ತಮಮ್ ।
ಅಶೇಷತೋಽಧಿಗಚ್ಛೇತ ವಂದ್ಯೋ ವೃಂದಾರಕೋಽಪಿ ಸನ್ ॥

ಏವಂ ಸುದುರ್ಲಭೇಽಪ್ಯದ್ಧಾ ಮಹಾನ್ಯಾಯಪರಾಮೃತೇ ।
ಕೇಚನಾಧಿಕ್ರಿಯಂತೇಽತ್ರ ತತ್ಪ್ರಸಾದಾನುರಂಜಿತಾಃ ॥

ಬ್ರಹ್ಮಾದ್ಯಾ ಅಮೃತೇ ಯದ್ವತ್ ಸಾಗರೋನ್ಮಥನೋದ್ಧೃತೇ ।
ಅಹಂ ತು ತತ್ಪ್ರಸಾದೈಕಮಹಾಸ್ಪದಬಲೋದ್ಧತಃ ॥

ನ್ಯಾಯಮೃತಾರ್ಣವಮಿಮಮವಗಾಹ್ಯ ವಿಭಜ್ಯ ಚ ।
ಸಂಕ್ಷೇಪವಿಸ್ತರಾಭ್ಯಾಂ ಚ ಚಕಾರ ವ್ಯಾಕೃತಿಂ ಕೃತಿಮ್ ॥

ತತ್ಪ್ರಸಾದಮೃತೇ ಕಸ್ಯ ಶಕ್ತಿಃ ಸಂಸಾರಸಾಗರೇ ।
ಮಗ್ನಸ್ಯ ಚೇತನಸ್ಯ ಸ್ಯಾತ್ ತತ್ಕೃತಾನುಕೃತೌ ಕ್ವಚಿತ್ ॥

**ನಿತ್ಯಾನಂದಾಮೃತಸ್ಯಂದಿ ತತ್ಕಟಾಕ್ಷೈಧಿತಸ್ಯ ತು ।**
**ಕಾ ನು ಶಕ್ತಿರ್ಭವೇನ್ನೈವ ತತಃ ಕೋಽತ್ರಾತಿವಿಸ್ಮಯಃ ॥**

**ವಿದ್ಯಾವಿದ್ಯೇ ಸುಖಂ ದುಃಖಮಶಕ್ತಿಃ ಶಕ್ತಿರೇವ ಚ ।**
**ಉತ್ಪತ್ತಿಸ್ಥಿತಿನಾಶಾಶ್ಚ ವಿಶೇಷಾಶ್ಚ ಪರೇಽಖಿಲಾಃ ॥**

**ಚೇತನಾಚೇತನಸ್ಯಾಸ್ಯ ಸಮಸ್ತಸ್ಯ ಯದಿಚ್ಛಯಾ ।**
**ಸ ಮಮ ಸ್ವಕೃತೇನೈವ ಪ್ರೀಯತಾಂ ಪುರುಷೋತ್ತಮಃ ॥**

—ಇವುಗಳಲ್ಲಿ ಬ್ರಹ್ಮಸೂತ್ರಗಳ ಮಹಿಮೆ, ಅವುಗಳ ಅರ್ಥ ಗಾಂಭೀರ್ಯ, ಅವುಗಳ ಮೇಲಿನ ತಮ್ಮ ಕೃತಿಗಳು ಮತ್ತು ಅವುಗಳ ಸಾರ್ಥಕ್ಯ, ರಚನಾನುಕ್ರಮ, ಭಾಷ್ಯರಚನೆಗೆ ತಮಗಿರುವ ಅರ್ಹತೆ ಅದರ ಹಿನ್ನೆಲೆ ಮೊದಲಾದ ಮಹತ್ತ್ವಪೂರ್ಣ ವಿವರಗಳನ್ನು ನೀಡಿರುವರು.

ಇವುಗಳಿಂದ ತಿಳಿಯುವಂತೆ ಬ್ರಹ್ಮಸೂತ್ರಭಾಷ್ಯ, ಅಣುಭಾಷ್ಯ, ಅನುವ್ಯಾಖ್ಯಾನ ಮತ್ತು ನ್ಯಾಯವಿವರಣ ಎಂಬುದು ಇವುಗಳ ರಚನೆಯ ಅನುಕ್ರಮ. ಮಧ್ವವಿಜಯದಲ್ಲಿನ ಉಲ್ಲೇಖವೂ ಇದಕ್ಕೆ ಅನುಗುಣವಾಗಿಯೇ ಇದೆ.

ಅನುವ್ಯಾಖ್ಯಾನಕ್ಕೆ 'ಅನುಭಾಷ್ಯ' ಮತ್ತೊಂದು ಹೆಸರು ಎಂಬುದು ಇಲ್ಲಿಯ ಉಲ್ಲೇಖದಿಂದ ತಿಳಿಯುತ್ತದೆ. ಭಾಷ್ಯಾದಿಗ್ರಂಥಗಳು ಬಹ್ವರ್ಥಗರ್ಭಿತ ಎಂಬ ಅನುವ್ಯಾಖ್ಯಾನದ ಮಾತು ಇಲ್ಲಿ ಗಮನಾರ್ಹ :

**ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಮ್ ।**
**ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ ॥**

ಅನುವ್ಯಾಖ್ಯಾನವು ಭಾಷ್ಯದ ವಿವರಣೆಯಾಗಿರುವಂತೆ, ನ್ಯಾಯವಿವರಣ ಅನುವ್ಯಾಖ್ಯಾನದ ವಿವರಣೆ ಎಂಬ ಅಂಶವೂ ಇವುಗಳಿಂದ ತಿಳಿಯುತ್ತದೆ. ಎಂದರೆ ಬ್ರಹ್ಮಸೂತ್ರಭಾಷ್ಯಕ್ಕೆ ಅನುವ್ಯಾಖ್ಯಾನರೂಪ ಟೀಕೆ ಬರೆದು ಟೀಕಾರಚನೆಗೆ ಮಾರ್ಗದರ್ಶನ ಮಾಡಿದಂತೆ, ಅನುವ್ಯಾಖ್ಯಾನಕ್ಕೆ ನ್ಯಾಯವಿವರಣರೂಪ ಟಿಪ್ಪಣಿಯನ್ನು ರಚಿಸಿ ಟಿಪ್ಪಣೀರಚನೆಗೂ ಶ್ರೀಮದಾಚಾರ್ಯರು ತಾವೇ ಮಾರ್ಗದರ್ಶನ ಮಾಡಿರುವರು ಎಂದು ಭಾವಿಸಬಹುದು.

# ಗೀತಾಪ್ರಸ್ಥಾನಗ್ರಂಥಗಳು

## ಗೀತಾಭಾಷ್ಯ

ಗೀತಾಭಾಷ್ಯ ಶ್ರೀಮದಾಚಾರ್ಯರ ಭಾಷ್ಯಕೃತಿಗಳಲ್ಲಿ ಮೊದಲನೆಯದು. ಈ ಮಾತು ಅಣುಮಧ್ವಚರಿತ ಹಾಗೂ ಗ್ರಂಥಮಾಲಿಕಾಸ್ತೋತ್ರಗಳಲ್ಲಿ ಸ್ಪಷ್ಟವಾಗಿ ಬಂದಿದೆ. ('ಗೀತಾಭಾಷ್ಯಂ ವಿಧಾಯಾದೌ' (ಅಣುಮಧ್ವಚರಿತ); 'ಗೀತಾಭಾಷ್ಯಂ ಚಕಾರಾಸೌ ಪ್ರಥಮಂ ತುಷ್ಟಿದಂ ಹರೇಃ ।' 'ಗ್ರಂಥಮಾಲಿಕಾಸ್ತೋತ್ರ') ಸುಮಧ್ವವಿಜಯದ ವಿವರಗಳೂ ಇದಕ್ಕೆ ಸಂವಾದಿಯಾಗಿವೆ. (ಇದು ದಕ್ಷಿಣದಿಗ್ವಿಜಯವನ್ನು ಪೂರೈಸಿ ಉಡುಪಿಗೆ ಮರಳುತ್ತಲೇ ಅವರು ರಚಿಸಿದ ಕೃತಿ.) ಮನನ ಮಾಡಿದಷ್ಟೂ ಅಕ್ಷಯವೆನ್ನಿಸುವ ವಿಷಯಗಳಿಂದ ತುಂಬಿರುವ ಕೃತಿ ಎಂಬ ಹಿರಿಮೆ ಇದರದ್ದು ಎಂಬ ಮಾತು ಸುಮಧ್ವವಿಜಯದಲ್ಲಿದೆ ('ಅವ್ಯಯಂ ಸತತಮಪ್ಯುಪಭುಕ್ತ್ಯಾ'). ಇದು ಅವರ ಸಕಲಗ್ರಂಥಗಳಿಗೂ ಅಷ್ಟೇ ಸಮರ್ಪಕವಾಗಿ ಅನ್ವಯಿಸುವ ಹಿರಿಮೆ.

ಆಚಾರ್ಯರು ಇದರ ಒಂದು ಪ್ರತಿಯನ್ನು ಅಚ್ಯುತಪ್ರೇಕ್ಷರು ಹಾಗೂ ಜ್ಯೇಷ್ಠಯತಿಗಳಿಗೆ ನೀಡಿ, ಮೂಲಪ್ರತಿಯನ್ನು ಬದರಿಯಲ್ಲಿ ಶ್ರೀನಾರಾಯಣದೇವರಿಗೆ ಸಮರ್ಪಿಸಿದರು. ಅದನ್ನು ಬಹುವಾಗಿ ಪ್ರಶಂಸಿಸಿದ ಶ್ರೀವೇದವ್ಯಾಸರು ಆರಂಭದಲ್ಲಿ ಒಂದು ತಿದ್ದುಪಡಿಯನ್ನು ಸೂಚಿಸಿದರಂತೆ.

**ದೇವಂ ನಾರಾಯಣಂ ನತ್ವಾ ಸರ್ವದೋಷವಿವರ್ಜಿತಮ್ ।**
**ಪರಿಪೂರ್ಣಂ ಗುರೂಂಶ್ಚಾನ್ ಗೀತಾರ್ಥಂ ವಕ್ಷ್ಯಾಮಿ ಶಕ್ತಿತಃ ॥**

ಎಂಬ ಮೊದಲ ಶ್ಲೋಕದಲ್ಲಿ 'ಶಕ್ತಿತಃ' ಎಂದಿರುವಿರಿ; ಇದರ ಬದಲು 'ಲೇಶತಃ' ಎಂಬ ಪದವನ್ನು ಹಾಕಿರಿ. ಪೂರ್ಣಪ್ರಮತಿಗಳಾದ ನಿಮ್ಮ ಶಕ್ತಿ ಇಷ್ಟುಮಾತ್ರ ಎಂಬ ತಪ್ಪು ತಿಳುವಳಿಕೆ ಓದುಗರಿಗೆ ಬರದಿರಲಿ. ಅದಕ್ಕಾಗಿಯೇ ಈ ತಿದ್ದುಪಡಿ. ಈ ಮಾತು ಮಹಾಭಾರತದಲ್ಲಿ ಭೀಮನನ್ನು ಪ್ರಶಂಸಿಸುತ್ತ ನುಡಿದ ಶ್ರೀಕೃಷ್ಣನ ಮಾತಿನಂತಿದೆ :

**ಯತ್ಕಿಂಚಾತ್ಮನಿ ಕಲ್ಯಾಣಂ ಸಂಭಾವಯಸಿ ಪಾಂಡವ ।**
**ಸಹಸ್ರಗುಣಮಪ್ಯೇತತ್ ತ್ವಯಿ ಸಂಭಾವಯಾಮ್ಯಹಮ್ ॥**

ಗೀತಾಭಾಷ್ಯವು ಸಮಗ್ರ ಗೀತೆಗೆ ರಚಿತವಾಗಿರುವ ಭಾಷ್ಯ. ಆರಂಭದಲ್ಲಿ ಗೀತೆ

ಮತ್ತು ಅದು ಬರುವ ಮಹಾಭಾರತದ ಮಹತ್ತ್ವವನ್ನು ಅನೇಕ ಆಧಾರಗಳನ್ನಿತ್ತು ನಿರೂಪಿಸಿರುವರು. ವಿಷ್ಣುಸಹಸ್ರನಾಮವೂ ಗೀತೆಯಷ್ಟೇ ಹಿರಿದಾದ ಕೃತಿ ಎಂಬ ಅಂಶವನ್ನು ಸಾರಿರುವರು. 'ಮಹಾಭಾರತವು ಪಾರಿಜಾತವಾದರೆ, ಗೀತೆ ಅದರ ಮಧು' ಎಂಬುದಾಗಿ ಅವರು ಗೀತೆಯನ್ನು ವರ್ಣಿಸಿರುವ ಪರಿ ಅನನ್ಯವಾದುದು. ಗೀತೆಗೆ ಭಾಷ್ಯ ಬರೆದ ಬೇರಾರೂ ಅದರ ಮಹತ್ತ್ವವನ್ನು ಇಷ್ಟು ಸ್ಫುಟವಾಗಿ ನಿರೂಪಿಸಿಲ್ಲ ಎಂಬುದನ್ನು ಗಮನಿಸಬೇಕು. ಅವತಾರಿಕೆಯಲ್ಲಿ ವ್ಯಾಸಾವತಾರದ ಹಿನ್ನೆಲೆ, ವೇದ ಓದುವ ಅವಕಾಶವಿಲ್ಲದ ಸ್ತ್ರೀಶೂದ್ರಾದಿಗಳಿಗೂ ಲೋಕೋಪಯೋಗಿಯಾದ ತತ್ತ್ವಜ್ಞಾನ ಲಭಿಸಲೆಂದು ಮಹಾಭಾರತದ ರಚನೆ ಎಂಬ ಅಂಶ, ಮಹಾಭಾರತವು 'ಸರ್ವವೇದಾದ್ಯರ್ಥೋಪಬೃಂಹಿತ'ವೂ 'ತದುನುಕ್ತಕೇವಲೇಶ್ವರಜ್ಞಾನದೃಷ್ಟಾರ್ಥ ಯುಕ್ತ'ವೂ ಆದ ಮಹತ್ತರ ಕೃತಿ ಮೊದಲಾದ ವಿಷಯಗಳನ್ನು ತಿಳಿಸಿ, ಅನಂತರ ಅದರ ಸಮರ್ಥನೆಗೆಂದು ನಾರಾಯಣಾಷ್ಟಾಕ್ಷರಕಲ್ಪ, ಉಪನಾರದೀಯ, ನಾರದೀಯ, ಸ್ಕಾಂದ ಮೊದಲಾದ ಆಕರಗ್ರಂಥಗಳಿಂದ ಪ್ರಮಾಣವಚನಗಳನ್ನು ಉದಾಹರಿಸಿರುವರು.

ಅನಂತರ **'ಸರ್ವಭಾರತಾರ್ಥಸಂಗ್ರಹಾಂ ವಾಸುದೇವಾರ್ಜುನಸಂವಾದ ರೂಪಾಂ ಭಾರತಪಾರಿಜಾತಮಧುಭೂತಾಂ ಗೀತಾಮುಪನಿಬಂಧ'**, ಎಂದು ಗೀತೆಯ ಮಹತ್ತ್ವವನ್ನು ಸಾರಿ ಮುಂದೆ ಎರಡನೆಯ ಅಧ್ಯಾಯದ 'ಅಶೋಚ್ಯಾನನ್ವ ಶೋಚಸ್ತ್ವಂ' ಎಂಬ ಶ್ಲೋಕದಿಂದ ಭಾಷ್ಯ ಪ್ರಾರಂಭಿಸಿರುವರು. ಗೀತೆಯ ಪ್ರತಿಶ್ಲೋಕಕ್ಕೂ ಆಚಾರ್ಯರು ಭಾಷ್ಯ ರಚಿಸಿಲ್ಲ. ಆದರೆ ಪ್ರತಿಶ್ಲೋಕದ ಅರ್ಥವೂ ಬರುವಂತೆ ಭಾಷ್ಯ ರಚಿಸಿರುವರು. 'ಪ್ರಜ್ಞಾವಾದ', 'ವೇದವಾದ', 'ನಿರ್ವೇದ', 'ತ್ರೈಗುಣ್ಯವಿಷಯ' ಮೊದಲಾ ಪದಗಳಿಗೂ, 'ಮಾ ಫಲೇಷು ಕದಾಚನ', 'ಸ್ಥಿತ್ವಾಽಸ್ಯಾ ಮಂತಕಾಲೇಽಪಿ', 'ತಸ್ಯ ಕಾರ್ಯಂ ನ ವಿದ್ಯತೇ', 'ಕರ್ಮಣೈವ ಸಂಸಿದ್ಧಿಮಾಸ್ಥಿತಾ ಜನಕಾದಯಃ', 'ವಾಸುದೇವಃ ಸರ್ವಂ', 'ಸರ್ವಧರ್ಮಾನ್ ಪರಿತ್ಯಜ್ಯ', 'ಪಂಡಿತಾಃ ಸಮದರ್ಶಿನಃ', 'ಸಮಬುದ್ಧಿರ್ವಿಶಿಷ್ಯತೇ', 'ಕ್ಷರಶ್ಚಾಕ್ಷರ ಏವ ಚ' ಮೊದಲಾದ ವಾಕ್ಯಗಳಿಗೆ ಅವರು ನೀಡಿರುವ ವಿವರಣೆ ಗೀತಾರ್ಥಚಿಂತನೆಗೆ ವಿನೂತನ ಆಯಾಮವನ್ನೇ ನೀಡಿದೆ. ಇವು ಮಾತ್ರವಲ್ಲದೆ ಪ್ರತಿಯೊಂದು ಪದ ವಾಕ್ಯಗಳಿಗೆ ಅವರು ನೀಡಿದ ವಿವರಣೆ ಗೀತಾರ್ಥಪ್ರಪಂಚಕ್ಕೆ ವಿನೂತನವಾದುದು. ಭಗವಂತನು ಸಾಕಾರನೇ ಹೊರತು ನಿರಾಕಾರನಲ್ಲ ಎಂಬುದಕ್ಕೆ ವಿಶ್ವರೂಪಾಧ್ಯಾಯಕ್ಕಿಂತಲೂ ಹೆಚ್ಚಿನ ಆಧಾರ ಬೇಕೇ? ಗೀತೆ ನಿಷೇಧಿಸಿರುವುದು ಅಮುಖ್ಯ ಫಲಗಳಾದ ಸ್ವರ್ಗಾದಿಗಳನ್ನೇ ಹೊರತು ಮುಖ್ಯ ಫಲಗಳಾದ ಜ್ಞಾನ ಭಕ್ತ್ಯಾದಿಗಳನ್ನಲ್ಲ; ಕರ್ಮಾಚರಣೆ ಅಜ್ಞಾನಿಗಳಿಗೆ ಹೇಗೋ ಜ್ಞಾನಿಗಳಿಗೂ ಹಾಗೆಯೇ ಅವಶ್ಯ ಕರ್ತವ್ಯ.

ಭಗವತ್ಪ್ರೀತಿಗೆಂದು ನಿಷ್ಕಾಮಕರ್ಮದ ಅನುಷ್ಠಾನ ಅಜ್ಞಾನಿಗಳಿಗೆ ಅಪರೋಕ್ಷ ಜ್ಞಾನಕ್ಕೂ, ಜ್ಞಾನಿಗಳಿಗೆ ಮೋಕ್ಷದಲ್ಲಿ ಆನಂದಾತಿಶಯಕ್ಕೂ ಸಾಧನ. ದ್ವೇಷಾದಿಗಳಿಂದ ಮುಕ್ತಿಯಿಲ್ಲ; ಭಕ್ತಿಯೇ ಮುಕ್ತಿಗೆ ಸಾಧನ ಮೊದಲಾದ ವಿಚಾರಗಳನ್ನು ಸಾಧಾರವಾಗಿ ಪ್ರತಿಪಾದಿಸಿರುವರು.

ವಿಭೂತಿಯೋಗದಲ್ಲಿ ಬಂದಿರುವ ವಿಚಾರಗಳು ಮೇಲ್ನೋಟಕ್ಕೆ ಸರಳ; ಆದರೆ ಅಲ್ಲಿ ವಿಚಾರ ಮಾಡಿದರೆ ಸಾಕಷ್ಟು ಗೊಂದಲಕ್ಕೆ ಅವಕಾಶವಿದೆ. ಆಯುಧಗಳಲ್ಲಿ ಸುದರ್ಶನದ ಬದಲು ವಜ್ರ; ಪಾಂಡವರಲ್ಲಿ ಭೀಮಸೇನನ ಬದಲು ಅರ್ಜುನ, ಯಜ್ಞಗಳಲ್ಲಿ ಜ್ಞಾನಯಜ್ಞದ ಬದಲು ಜಪಯಜ್ಞ, ವೇದಗಳಲ್ಲಿ ಋಗ್ವೇದದ ಬದಲು ಸಾಮವೇದ ಇವೆಲ್ಲ ಹೇಗೆ? ನಕ್ಷತ್ರವೇ ಅಲ್ಲದ ಚಂದ್ರ ನಕ್ಷತ್ರಗಳಲ್ಲಿ ಶ್ರೇಷ್ಠ; ಜಲಚರವೇ ಅಲ್ಲದ ವರುಣ ಜಲಚರಗಳಲ್ಲಿ ಶ್ರೇಷ್ಠ, ಹೇಗೆ? ಈ ಬಗ್ಗೆ ಇತರ ಯಾವ ಭಾಷ್ಯದಲ್ಲೂ ಉತ್ತರವಿಲ್ಲ; ಆದರೆ ಮಧ್ವಭಾಷ್ಯ ಚೆಲ್ಲುವ ಬೆಳಕು ಅತ್ಯಂತ ಅಪೂರ್ವ.

ಗೀತೆಯ ವಿಭೂತಿಯೊಗದಲ್ಲಿ ನಾಲ್ಕುತೆರನಾದ ವಿಭೂತಿ ನಿರೂಪಿತವಾಗಿವೆ. 'ಮುನೀನಾಮಪ್ಯಹಂ ವ್ಯಾಸಃ', 'ವೃಷ್ಣೀನಾಂ ವಾಸುದೇವೋಽಸ್ಮಿ', 'ಸಿದ್ಧಾನಾಂ ಕಪಿಲೋ ಮುನಿಃ', 'ರಾಮಃ ಶಸ್ತ್ರಭೃತಾಮಹಂ' ಇವೆಲ್ಲ ಸಾಕ್ಷಾದ್ವಿಭೂತಿಗಳು; ಇಂದ್ರಿಯಗಳಲ್ಲಿ ಮನಸ್ಸು 'ರುದ್ರರಲ್ಲಿ ಶಂಕರ', 'ಆನೆಗಳಲ್ಲಿ ಐರಾವತ', 'ಕುದುರೆಗಳಲ್ಲಿ ಉಚ್ಚೈಃಶ್ರವಸ್ಸು'ಮೊದಲಾದವುಗಳು. ಸಜಾತೀಯ ಶ್ರೈಷ್ಠ್ಯಪ್ರದ ವಿಭೂತಿಗಳು. 'ಪಾಂಡವರಲ್ಲಿ ಅರ್ಜುನ-ಭೀಮನ ಅನಂತರ'. ಆಯುಧಗಳಲ್ಲಿ 'ವಜ್ರಾಯುಧ, ಸುದರ್ಶನದ ಅನಂತರ', 'ಯಜ್ಞಗಳಲ್ಲಿ ಜಪಯಜ್ಞ, ಜ್ಞಾನಯಜ್ಞದ ಅನಂತರ', ಇವೆಲ್ಲ ಸಜಾತೀಯ-ಏಕದೇಶ ಶ್ರೈಷ್ಠ್ಯಪ್ರದ ವಿಭೂತಿಗಳು. ನಕ್ಷತ್ರಗಳಲ್ಲಿ ಚಂದ್ರ, ಜಲಚರಗಳಲ್ಲಿ ವರುಣ ಎಂಬವು ವಿಜಾತೀಯ ಶ್ರೈಷ್ಟ್ಯಪ್ರದ ವಿಭೂತಿಗಳು. ಇದು ಅವರು ನೀಡಿರುವ ವಿವರಣೆ.

ಹನ್ನೆರಡನೆಯ ಅಧ್ಯಾಯದಲ್ಲಿನ 'ನಿನ್ನ ಉಪಾಸನೆ ಶ್ರೇಷ್ಠವೋ', 'ಅವ್ಯಕ್ತೋಪಾಸನೆ ಶ್ರೇಷ್ಠವೋ' ಎಂಬ ಅರ್ಜುನನ ಪ್ರಶ್ನೆಗೆ ಸಗುಣೋಪಾಸನೆ ಶ್ರೇಷ್ಠವೋ? ನಿರ್ಗುಣೋಪಾಸನೆ ಶ್ರೇಷ್ಠವೋ' ಎಂಬುದಾಗಿ ಅದ್ವೈತದ ಭಾಷ್ಯದ ವಿವರಣೆಯಾಗಿದೆ; ಆದರೆ ಶ್ರೀಮದಾಚಾರ್ಯರು 'ನಾರಾಯಣೋಪಾಸನೆ ಶ್ರೇಷ್ಠವೋ', 'ಮಹಾಲಕ್ಷ್ಮಿಯ ಉಪಾಸನೆ ಶ್ರೇಷ್ಠವೋ' ಇಬ್ಬರ ಉಪಾಸನೆಯಿಂದಲೂ ಮೋಕ್ಷ ದೊರೆಯುವುದಲ್ಲವೇ! ಎಂಬುದು ಅರ್ಜುನನ

ಆಶಯ ಎಂದು ಸಾಧಾರವಾಗಿ ವಿವೇಚಿಸಿ, ನಾರಾಯಣನ ಉಪಾಸನೆಯೇ ಶ್ರೇಷ್ಠ ಎಂಬುದು ಶ್ರೀಕೃಷ್ಣನ ಸಂದೇಶ ಎಂದು ಸಾರಿರುವರು.

'ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ' ಎಂಬುದನ್ನು ಕಾಕುಸ್ವರವಾಗಿ ಓದಿಕೊಳ್ಳಬೇಕು ಎಂಬ ಅಂಶ; ಅದರಲ್ಲಿನ 'ತು' ಎಂಬುದರ ಸ್ವಾರಸ್ಯ, ಗತಾಸೂನಗತಾಂಸೂಂಶ್ಚ ಎಂಬಲ್ಲಿ 'ಚ' ಎಂಬುದನ್ನು ಇವ ಎಂಬ ಅರ್ಥದಲ್ಲಿ ನೋಡಬೇಕು ಎಂಬ ವಿವರಣೆ ಹೀಗೆ ಇಲ್ಲಿಯ ಒಂದೊಂದೂ ಅಪೂರ್ವಾರ್ಥದ ಗಣಿಯೇ ಆಗಿದೆ.

## ಗೀತಾತಾತ್ಪರ್ಯನಿರ್ಣಯ

ಗೀತಾತಾತ್ಪರ್ಯ ಅಥವಾ ಗೀತಾತಾತ್ಪರ್ಯನಿರ್ಣಯ ಭಗವದ್ಗೀತೆಯ ಮೇಲೆ ಶ್ರೀಮದಾಚಾರ್ಯರು ರಚಿಸಿರುವ ಮತ್ತೊಂದು ಗ್ರಂಥ (1300) ಗೀತಾಭಾಷ್ಯ ರಚಿಸಿದಾಗ ಅವರ ವಯಸ್ಸು ಹದಿನಾರರ ಆಸುಪಾಸಿನದಷ್ಟೆ! ಗೀತಾತಾತ್ಪರ್ಯ ನಿರ್ಣಯ ಪ್ರಾಯಃ ಬಹುಕಾಲದ ಅನಂತರದ ಕೃತಿ. ಎರಡರಲ್ಲೂ ಕಾಣುವ ಅವರ ಅತ್ಯಂತ ಖಚಿತವೂ, ಪೂರಕವೂ ಆದ ಪ್ರಾಮಾಣಿಕ ವಿಚಾರಸರಣಿ ಅವರ ಪೂರ್ಣಪ್ರಜ್ಞತ್ವಕ್ಕೆ ಮತ್ತೊಂದು ರೀತಿಯಲಿ ದ್ಯೋತಕ.

ಬ್ರಹ್ಮಸೂತ್ರಭಾಷ್ಯ ರಚಿಸಿದ ಆಚಾರ್ಯರು ಅನುವ್ಯಾಖ್ಯಾನವನ್ನು ರಚಿಸುತ್ತ ಅದಕ್ಕೆ ಕೊಟ್ಟಿರುವ ಕಾರಣ ಇದರ ರಚನೆಗೂ ಅನ್ವಯಿಸುತ್ತದೆ. ಸೂತ್ರಭಾಷ್ಯದ ಅರ್ಥದ ಸ್ಪಷ್ಟೀಕರಣಕ್ಕೆ ಅನುವ್ಯಾಖ್ಯಾನ ರಚಿತವಾದಂತೆ, ಗೀತಾಭಾಷ್ಯದ ಅರ್ಥಸ್ಪಷ್ಟೀಕರಣಕ್ಕೆ ಗೀತಾತಾತ್ಪರ್ಯ ರಚಿತವಾಗಿದೆ ಎಂದು ಭಾವಿಸಬಹುದು. ಆವರು ಇದರ ಆರಂಭದಲ್ಲಿ ಒಂದೇ ಮಾತಿನಲ್ಲಿ ಗೀತೆಯ ತಾತ್ಪರ್ಯವನ್ನು ಸಂಗ್ರಹಿಸಿರುವ ರೀತಿ ಅನ್ಯಾದೃಶವಾದುದು:

**"ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಪರಮೋ ಧರ್ಮಃ, ತದ್ವಿರುದ್ಧಃ ಸರ್ವೋಽಪ್ಯಧರ್ಮಃ, ಭಗವದಧೀನತ್ವಾತ್ ಸರ್ವಸ್ಯ" ಇತಿ ಬೋಧಯತಿ ಭಗವಾನ್ ನಾರಾಯಣಃ ।**

'ತಮ್ಮ ಪಾಲಿಗೆ ವಿಹಿತವಾದ ಕರ್ತವ್ಯಕರ್ಮದಿಂದ ಭಕ್ತಿಯಿಂದ ಭಗವಂತನನ್ನು ಆರಾಧಿಸುವುದೇ ಸಕಲರ ಪರಮಧರ್ಮ. ಅದಕ್ಕೆ ವಿರುದ್ಧವಾದುದೆಲ್ಲವೂ ಅಧರ್ಮ.

ಸರ್ವವೂ ಭಗವದಧೀನವಾದುದರಿಂದ ಎಂಬುದಾಗಿ ಭಗವಂತನಾದ ನಾರಾಯಣನು ಬೋಧಿಸಿರುವನು.'

ಅನಂತರ ಕ್ಷತ್ರಿಯರಿಗೆ ಯುದ್ಧವು ಸ್ವಧರ್ಮ. ಸ್ವಧರ್ಮವನ್ನು ಆಚರಿಸುತ್ತಲೇ ಭಗವಂತನನ್ನು ಆರಾಧಿಸುವುದು ಎಲ್ಲರ ಕರ್ತವ್ಯ; ಮಿಕ್ಕಿದ್ದು ತ್ಯಾಜ್ಯ. 'ವಿಷ್ಣುಭಕ್ತಿಯೇ ಸರ್ವಸಾಧನಗಳೆಲ್ಲೂ ಮಿಗಿಲು—ಪರೋಕ್ಷಜ್ಞಾನಿ ಅಪರೋಕ್ಷಜ್ಞಾನಿ ಎಂಬ ಇಬ್ಬರಿಗೂ ಮೋಕ್ಷವು ಭಗವದಧೀನ, ನಿಷಿದ್ಧಕರ್ಮವನ್ನು ತ್ಯಜಿಸಲೇಬೇಕು. ಸರ್ವರಿಗೂ ಭಗವದಾರಾಧನರೂಪ ಸ್ವಧರ್ಮವು ವಿಹಿತ, ನಿಷಿದ್ಧಕರ್ಮಗಳು ತ್ಯಾಜ್ಯ, ಬ್ರಹ್ಮಜ್ಞಾನಿಗೂ ಸ್ವಧರ್ಮವು ವಿಹಿತ; ಅರ್ಜುನ ಉತ್ತಮಾಧಿಕಾರಿ ಹಾಗೂ ಅಪರೋಕ್ಷ ಜ್ಞಾನಿ, ಭಗವಂತನು ಸರ್ವರಿಂದಲೂ ಭಿನ್ನ, ಸಕಲವೂ ಅವನ ಅಧೀನ, ಅವನು ಯಾರಿಗೂ ಅಧೀನನಲ್ಲ; ಅವನು ಸ್ವತಂತ್ರ, ಸರ್ವೋತ್ತಮ, ಹಾಗೂ ಸರ್ವಗುಣಪೂರ್ಣ, ಸರ್ವಶಾಸ್ತ್ರಗಳೂ ಭಗವತ್ಪರ, ಬ್ರಹ್ಮಜ್ಞಾನದಿಂದಲೇ ಮೋಕ್ಷ ಇತ್ಯಾದಿ ಪ್ರಮೇಯಗಳು ಭಗವದ್ಗೀತೆಯ ವಚನಗಳಿಂದಲೇ ಸ್ಪಷ್ಟಪಡುತ್ತವೆ ಎಂಬುದಾಗಿ ತೋರಿಸಿರುವರು.

ಗೀತಾತಾತ್ಪರ್ಯದ ಮುಂದಿನ ಭಾಗದ ವೈಶಿಷ್ಟ್ಯಗಳನ್ನು ಹೀಗೆ ಸಂಗ್ರಹಿಸಬಹುದು.

1) ಗೀತಾಭಾಷ್ಯದಲ್ಲಿನ ವಿವರಗಳನ್ನು ಪ್ರಮಾಣಾಂತರಗಳಿಂದ ಸಿದ್ಧಪಡಿಸುವುದು.

2) ಅಲ್ಲಿ ಹೇಳದೆ ಇದ್ದ ಅರ್ಥವಿಶೇಷವನ್ನು ತೋರಿಸುವುದು. ಆ ಮೂಲಕ ಮಹಾಭಾರತಕ್ಕೆ ಹತ್ತು ಅರ್ಥಗಳಾಗಿರುವುದರಿಂದ, ಅದರಲ್ಲಿ ಬರುವ ಗೀತೆಗೆ ಹತ್ತು ಅರ್ಥಗಳು ಎಂಬ ಮಾತನ್ನು ಈ ರೀತಿಯ ವಿಶೇಷಾರ್ಥಕಥನದಿಂದ ಸ್ಫುಟಪಡಿಸುವುದು. ಇದಕ್ಕೆ ನಿದರ್ಶನವಾಗಿ 2/11, 2/16, 2/47, 3/17, 4/13, 4/18, 6/3 ಇತ್ಯಾದಿ ಶ್ಲೋಕಗಳ ವಿವರಣೆಯನ್ನು ಗಮನಿಸಬಹುದು.'ಮಾ ಫಲೇಷು ಕದಾಚನ' ಎಂಬುದಕ್ಕೆ ಸ್ವರ್ಗಾದಿ ಇತರ ಕಾಮನೆಗಳು ಬೇಡ ಎಂದು ಗೀತಾಭಾಷ್ಯದಲ್ಲಿ ಅರ್ಥೈಸಿದ್ದರೆ, ಗೀತಾತಾತ್ಪರ್ಯದಲ್ಲಿ ಫಲವನ್ನು ಪಡೆಯುವುದು ನಿನ್ನ ವ್ಯಾಪ್ತಿಗೆ ಸೇರಿದ್ದಲ್ಲ ಅದನ್ನು ಭಗವಂತನೇ ನೀಡಬೇಕು' ಎಂದು ವಿವರಿಸಿರುವರು.

3) ಗೀತಾಭಾಷ್ಯದಲ್ಲಿ ವಿವರಣೆ ನೀಡದೆ ಇದ್ದ ಅನೇಕ ಶ್ಲೋಕಗಳಿಗೆ ಇಲ್ಲಿ ವಿವರಣೆ ನೀಡಿರುವರು. ಉದಾಹರಣೆಗೆ 2/40, 4/1, 4/13 ಇತ್ಯಾದಿಗಳನ್ನು ಗಮನಿಸಬಹುದು.

4) ಗೀತೆಯಲ್ಲಿನ ಅನೇಕ ಪದಗಳಿಗೆ ಅದರಲ್ಲೂ ವಿಶೇಷವಾಗಿ ವಿಭೂತಿಯೋಗಪ್ರಸಂಗದಲ್ಲಿ ಬರುವ ಮರೀಚಿ, ಮನಃ ಮೊದಲಾದ ಪ್ರತಿಯೊಂದು ಪದಗಳಿಗೂ ನಿರ್ವಚನ ಕೊಟ್ಟಿರುವರು.

5) ದೇವತಾತಾರತಮ್ಯ, ವಿಶೇಷ ಅಭಿಮಾನಿದೇವತೆಗಳು ಮೊದಲಾದ ಅನೇಕ ವಿಷಯಗಳನ್ನು ವಿಶೇಷವಾಗಿ ನಿರೂಪಿಸಿರುವರು.

ಗೀತೆ ಉಪದೇಶಿಸಿದ ಯಾದವ ಕೃಷ್ಣನೇ ವ್ಯಾಸ ಕೃಷ್ಣರೂಪದಿಂದ ಅದನ್ನು ಜನತೆಗೆ ಪ್ರಚುರಪಡಿಸಿರುವನು ಎಂಬ ಮಾತನ್ನು ಇಲ್ಲಿ ತಿಳಿಸಿರುವರು :

ಶಬ್ದಾನುಕರಣಾದ್ಯಂತರೇಣ ಪುನಃ ತಾತ್ಪರ್ಯಮೇವೋಚ್ಯತೇ' ಎಂಬುದಾಗಿ ಶ್ರೀ ಜಯತೀರ್ಥರು ಇದರ ಬಗ್ಗೆ ಬರೆದಿರುವರು.

**"ಏಕಾಂತೇ ಕಥಯನ್ನಪಿ ವ್ಯಾಸರೂಪೇಣ ತದೇವ ಲೋಕೇ ಪ್ರಕಾಶಯಿಷ್ಯತಿ ಹಿ "**

**ಗೀತಾತಾತ್ಪರ್ಯನ್ಯಾಯದೀಪಿಕಾ 2/12**

ತಾವು ವಾಯುದೇವರ ಅವತಾರ ಎಂಬುದನ್ನು ಗೀತಾಭಾಷ್ಯದ ಕೊನೆಯಲ್ಲಿ ತಿಳಿಸಿರುವಂತೆ ಇದರ ಕೊನೆಯಲ್ಲೂ 'ಯಸ್ಯ ತ್ರೀಣ್ಯುದಿತಾನಿ ವೇದವಚನೇ' ಎಂಬುದಾಗಿಯೇ ತಿಳಿಸಿರುವರು.

ಗೀತೆ ಬರುವ ಮಹಾಭಾರತಕ್ಕೆ ಮಹಾಭಾರತ ತಾತ್ಪರ್ಯನಿರ್ಣಯವನ್ನು ಮಹಾಭಾರತದಲ್ಲಿನ ಗೀತೆಗೆ ಗೀತಾಭಾಷ್ಯ ಮತ್ತು ತಾತ್ಪರ್ಯಗಳನ್ನು ರಚಿಸಿದ ಏಕಮಾತ್ರ ಆಚಾರ್ಯರು ಶ್ರೀ ಮಧ್ವಾಚಾರ್ಯರು. ಗೀತೆಯು ಮಹಾಭಾರತದ ದರ್ಶನವಾದರೆ ಮಹಾಭಾರತವು ಗೀತಾತತ್ವದ ನಿದರ್ಶನವಾಗಿದೆ. ಎರಡನ್ನೂ ವಿಶ್ಲೇಷಿಸಿ ಅವುಗಳ ಅಂತರಾರ್ಥವನ್ನು ತೆರೆದಿಟ್ಟ ಹಿರಿಮೆ ಅವರದು. ಗೀತೆಯನ್ನು ಉಪದೇಶಿಸಿದ್ದು ಭಗವಂತ ಎಂಬ ವಿಷಯ ಎಲ್ಲರಿಗೂ ಗೊತ್ತಿತ್ತು. ಆದರೆ ಗೀತೆಯನ್ನು ಲಿಖಿತರೂಪದಲ್ಲಿ ಒದಗಿಸಿದ್ದು ವೇದವ್ಯಾಸರೂಪದಿಂದ ಭಗವಂತನೇ, ಎಂದರೆ ಈ ಅರ್ಥದಲ್ಲೂ ಅದು ಭಗವದ್ಗೀತೆಯೇ ಎಂದು ಪ್ರತಿಪಾದಿಸಿದವರು ಶ್ರೀಮದಾಚಾರ್ಯರು ಒಬ್ಬರೇ.

ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯಗಳಿಗೆ ಶ್ರೀ ಜಯತೀರ್ಥರು ಕ್ರಮವಾಗಿ ಪ್ರಮೇಯದೀಪಿಕಾ ಮತ್ತು ನ್ಯಾಯದೀಪಿಕಾ ಎಂಬ ಟೀಕೆಗಳನ್ನು ರಚಿಸಿರುವರು. ಶ್ರೀಮದಾಚಾರ್ಯರ ಸಾಕ್ಷಾಚ್ಛಿಷ್ಯವರ್ಯರಾದ ಶ್ರೀ ಪದ್ಮನಾಭ ತೀರ್ಥರು ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯ ಎರಡಕ್ಕೂ ಪ್ರಕಾಶಿಕಾ ಎಂಬ ಟೀಕೆಗಳನ್ನು ಬರೆದಿರುವರು. ಶ್ರೀ ನರಹರಿತೀರ್ಥರು ಗೀತಾಭಾಷ್ಯಕ್ಕೆ ಭಾವದೀಪಿಕಾ ಎಂಬ ವ್ಯಾಖ್ಯಾನ ಬರೆದಿರುವರು. ಶ್ರೀ ಜಯತೀರ್ಥರ ಪ್ರಮೇಯದೀಪಿಕೆಗೆ ರಘೂತ್ತಮರು,

ಬೀದರಹಳ್ಳಿ ಶ್ರೀನಿವಾಸ ತೀರ್ಥರು, ಉಮರ್ಜಿ ಪ್ರಹ್ಲಾದಕೃಷ್ಣಾಚಾರ್ಯರು ಮೊದಲಾದವರು ಟಿಪ್ಪಣಿ ಬರೆದಿದ್ದಾರೆ. ಶ್ರೀ ಸುಮತೀಂದ್ರ ತೀರ್ಥರ ಗೀತಾಭಾಷ್ಯ ಪ್ರಮೇಯದೀಪಿಕಾ ಭಾವರತ್ನಕೋಶ ಎಂಬ ಟಿಪ್ಪಣಿಯು ತುಂಬಾ ವಿಶಿಷ್ಟವಾದುದು. ಗೀತಾತಾತ್ಪರ್ಯನ್ಯಾಯದೀಪಿಕೆಗೆ ತಾಮ್ರಪರ್ಣೀ ಶ್ರೀನಿವಾಸಾಚಾರ್ಯರ ಕಿರಣಾವಳಿ ಎಂಬ ಅಪೂರ್ವ ವ್ಯಾಖ್ಯಾನ ತುಂಬಾ ಪ್ರಸಿದ್ಧ. ಶ್ರೀ ರಾಘವೇಂದ್ರಸ್ವಾಮಿಗಳು ಶ್ರೀಜಯತೀರ್ಥರ ಎರಡೂ ಟೀಕೆಗಳಿಗೆ ಭಾವದೀಪವೆಂಬ ಟಿಪ್ಪಣಿಗಳನ್ನು ರಚಿಸಿರುವದಲ್ಲದೆ ಭಾಷ್ಯಟೀಕೆಗಳಲ್ಲಿನ ಅರ್ಥವಿಶೇಷಗಳನೆಲ್ಲ ಕ್ರೋಢೀಕರಿಸಿ ಗೀತಾವಿವೃತ್ತಿ ಎಂಬ ಅಪೂರ್ವ ಗೀತಾರ್ಥಸಂಗ್ರಹವನ್ನು ಪ್ರತಿಶ್ಲೋಕಕ್ಕೂ ಒದಗಿಸಿರುವರು. ಆ ಮುಂಚಿತವಾಗಿ ಗೀತಾವಿವೃತ್ತಿ ಎಂಬ ಕೃತಿಯನ್ನು ಶ್ರೀ ವಿದ್ಯಾಧಿರಾಜತೀರ್ಥರು ರಚಿಸಿದ್ದು ಅದೂ ಪ್ರಕಟವಾಗಿದೆ.

# ದಶೋಪನಿಷದ್ಭಾಷ್ಯಗಳು

ಪ್ರತಿಯೊಂದು ವೇದವೂ ಮಂತ್ರ, ಬ್ರಾಹ್ಮಣ, ಉಪನಿಷತ್ತು ಎಂಬುದಾಗಿ ಮೂರು ವಿಧ. ಎಂದರೆ ಉಪನಿಷತ್ತು ವೈದಿಕಸಾಹಿತ್ಯದ ಅವಿಭಾಜ್ಯ ಅಂಗ. ಮೂರೂ ವೈದಿಕ ಸಾಹಿತ್ಯವೇ ಆದರೂ, ಮಂತ್ರಗಳಿಗಿಂತ ಬ್ರಾಹ್ಮಣ ಆರಣ್ಯಕಗಳು ಅದಕ್ಕಿಂತ ಉಪನಿಷತ್ತುಗಳು ಮಿಗಿಲು. 'ಉಪನಿಷತ್' ಎಂಬ ಪದ ಉಪನಿಷತ್ತುಗಳಲ್ಲೇ ಹಲವಾರು ಬಾರಿ ಪ್ರಯೋಗಿಸಲ್ಪಟ್ಟಿದೆ. ಆ ಎಲ್ಲ ಕಡೆಗಳಲ್ಲಿಯೂ ಪ್ರಧಾನವಾಗಿ ರಹಸ್ಯವಿದ್ಯೆ ಎಂಬ ಅರ್ಥದಲ್ಲೇ ಅದು ಬಂದಿದೆ. ಉಪನಿಷತ್ ಎಂಬ ಪದದ ನಿರ್ವಚನವೂ ಸಹ (ಉಪ+ನಿ+ಷದಲ್ಶ್) ಗುರುಗಳ ಹತ್ತಿರ ನೆಲೆಸಿ ಸಂಪಾದಿಸುವ ರಹಸ್ಯವಿದ್ಯೆ ಎಂಬ ಅರ್ಥವನ್ನೇ ಸೂಚಿಸುತ್ತದೆ. ಆದ್ದರಿಂದಲೇ ಉಪನಿಷತ್ತುಗಳನ್ನು ವೈದಿಕ ಸಾಹಿತ್ಯದ 'ಸಾರಭಾಗ' ಎಂಬುದಾಗಿ ಪರಿಗಣಿಸುವರು.

ಇಂತಹ ಉಪನಿಷತ್ತುಗಳ ಸಂಖ್ಯೆ ಅಪಾರ. 'ಅನಂತಾ ವೈ ವೇದಾಃ' ಎಂಬ ಮಾತಿನಲ್ಲಿ ವೇದಗಳಿಗೆ ಸಂಬಂಧಿಸಿದಂತೆ ಉಪನಿಷತ್ತುಗಳೂ ಅಸಂಖ್ಯ ಎಂಬ ಸೂಚನೆ ಇದೆ. ಅವುಗಳಲ್ಲಿ 108 ಉಪನಿಷತ್ತುಗಳನ್ನು ಪ್ರಧಾನ ಎಂಬುದಾಗಿ ಮುಕ್ತಿಕೋಪನಿಷತ್ತು ಉಲ್ಲೇಖಿಸಿದೆ. (ಸರ್ವೋಪನಿಷದಾಂ ಮಧ್ಯೇ ಸಾರಮಷ್ಟೋತ್ತರಂ ಶತಂ) ಅವುಗಳಲ್ಲಿ ಹತ್ತು ಋಗ್ವೇದಕ್ಕೂ, ಹತ್ತೊಂಬತ್ತು ಶುಕ್ಲಯಜುರ್ವೇದಕ್ಕೂ, ಮೂವತ್ತೆರಡು ಕೃಷ್ಣಯಜುರ್ವೇದಕ್ಕೂ, ಹದಿನಾರು ಸಾಮವೇದಕ್ಕೂ, ಮಿಕ್ಕ ಮೂವತ್ತೊಂದು ಅಥರ್ವಣ ವೇದಕ್ಕೂ ಸಂಬಂಧಿಸಿವೆ. ಈ 108ರಲ್ಲಿ ದಶೋಪನಿಷತ್ತುಗಳನ್ನು ಅತ್ಯಂತ ಪ್ರಧಾನವೆಂಬುದಾಗಿ ಅದೇ ಮುಕ್ತಿಕೋಪನಿಷತ್ತು ಹೆಸರಿಸಿದೆ :

**ಈಶಕೇನಕಠಪ್ರಶ್ನಮುಂಡಮಾಂಡೂಕ್ಯತಿತ್ತಿರಿಃ ।**
**ಐತರೇಯಂ ಚ ಛಾಂದೋಗ್ಯಂ ಬೃಹದಾರಣ್ಯಕಂ ತಥಾ ॥**

ಈ ಹತ್ತರಲ್ಲಿ ನಾಲ್ಕುವೇದಗಳಿಗೂ ಸಂಬಂಧಿಸಿದ ಉಪನಿಷತ್ತುಗಳಿವೆ. ಎಂದರೆ ಇವು ಪ್ರಾತಿನಿಧಿಕವಾಗಿವೆ. ಆದ್ದರಿಂದ ಇವುಗಳ ಅಧ್ಯಯನ ಸಮಗ್ರ ಉಪನಿಷತ್ಪ್ರಪಂಚದ ಅಧ್ಯಯನವಾಗುತ್ತದೆ. ಉಪನಿಷತ್ಸಾರದ ಸರ್ವಸ್ವವಾಗುತ್ತದೆ. ಉಪನಿಷತ್ತುಗಳು ವೇದಗಳ ಸಾರವಾದ್ದರಿಂದ, ಇವುಗಳ ಅರಿವು ವೇದತಾತ್ಪರ್ಯದ ಪರಿಜ್ಞಾನವೇ ಆಗುತ್ತದೆ. 'ದಶ' ಎಂಬುದಕ್ಕೆ ಪೂರ್ಣ ಎಂಬ ಅರ್ಥವೂ ಇದ್ದು, ಈ ಹತ್ತು 'ಪೂರ್ಣ'ವಾಗಿ ಉಪನಿಷತ್ತುಗಳ ಸಾರ ಎಂಬ ಅರ್ಥವನ್ನೇ ಧ್ವನಿಸುತ್ತವೆ. ಶಂಕರಾಚಾರ್ಯರು ಈ ಹತ್ತೂ ಉಪನಿಷತ್ತುಗಳಿಗೂ ಭಾಷ್ಯ ರಚಿಸಿರುವುದು, ಈ ದಶೋಪನಿಷತ್ತುಗಳ ಪ್ರಾಧಾನ್ಯ ಅವರಿಗೂ ಸಂಮತ ಎಂಬುದಕ್ಕೆ ದ್ಯೋತಕ.

ಅನಂತರದ ರಾಮಾನುಜಾಚಾರ್ಯರು ಯಾವ ಉಪನಿಷತ್ತಿಗೂ ಭಾಷ್ಯ ರಚಿಸಿಲ್ಲ; 'ವೇದಾರ್ಥಸಂಗ್ರಹ' ಎಂಬ ತಮ್ಮ ಕೃತಿಯಲ್ಲಿ ಅವುಗಳಲ್ಲಿನ ದ್ವೈತಾದ್ವೈತಪರ ವಾಕ್ಯಗಳ ಅರ್ಥವಿವೇಚನೆಯನ್ನು ತಮ್ಮ ಸಿದ್ಧಾಂತಕ್ಕೆ ಪೋಷಕವಾಗುವಂತೆ ಮಾಡಿರುವರು ಮಾತ್ರ.

ಹತ್ತು ಉಪನಿಷತ್ತುಗಳಿಗೂ ಭಾಷ್ಯರಚಿಸಿದ ಎರಡನೆಯ ಆಚಾರ್ಯರು ಶ್ರೀ ಮಧ್ವಾಚಾರ್ಯರು. ಆದರೆ ಉಪನಿಷತ್ತುಗಳಲ್ಲಿ ಇತರ ಶಾಸ್ತ್ರಗ್ರಂಥಗಳಂತೆ ವಿಷ್ಣುಪಾರಮ್ಯವನ್ನು ಸಾರುತ್ತ ಅವೆಲ್ಲ ದ್ವೈತತತ್ತ್ವಬೋಧಕವಾಗಿವೆಯೇ ಹೊರತು ಅದ್ವೈತ ಬೋಧಕವಲ್ಲ ಎಂಬುದನ್ನು ಮೊದಲಬಾರಿಗೆ ಸಾರಿದ ಆಚಾರ್ಯರು ಅವರೇ.

ಹತ್ತು ಉಪನಿಷತ್ತುಗಳಲ್ಲಿ ಐತರೇಯವು ಋಗ್ವೇದಕ್ಕೂ, ಬೃಹದಾರಣ್ಯಕ, ಈಶಾವಾಸ್ಯ, ಕಾಠಕ ಮತ್ತು ತೈತ್ತಿರೀಯ ಎಂಬ ನಾಲ್ಕು ಯಜುರ್ವೇದಕ್ಕೂ, ಛಾಂದೋಗ್ಯ ಮತ್ತು ತಲವಕಾರ ಎಂಬ ಎರಡು ಸಾಮವೇದಕ್ಕೂ ಮತ್ತು ಅಥರ್ವಣ, ಮಾಂಡೂಕ ಮತ್ತು ಷಟ್ಪ್ರಶ್ನ ಎಂಬ ಮೂರು ಅಥರ್ವಣವೇದಕ್ಕೂ ಸಂಬಂಧಿಸಿವೆ. ಐತರೇಯ, ಬೃಹದಾರಣ್ಯಕ ಮತ್ತು ಛಾಂದೋಗ್ಯ ಎಂಬ ಮೂರು ಅತಿ ದೊಡ್ಡ ಉಪನಿಷತ್ತುಗಳಾಗಿದ್ದು ಇವು ಕ್ರಮವಾಗಿ ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳಿಗೆ ಸಂಬಂಧಿಸಿವೆ. ಈ ಹತ್ತರಲ್ಲಿ ಈಶಾವಾಸ್ಯ ಕಾಠಕಗಳು ಮಂತ್ರೋಪನಿಷತ್ತುಗಳಾಗಿವೆ.

ದಶೋಪನಿಷತ್ತುಗಳ ಮಧ್ವಭಾಷ್ಯ ಅನೇಕ ಕಾರಣಗಳಿಂದ ಅತ್ಯಂತ ಮಹತ್ತ್ವಪೂರ್ಣವಾಗಿದ್ದು, ಅವುಗಳ ವೈಶಿಷ್ಟ್ಯಗಳಲ್ಲಿ ಕೆಲವು ಹೀಗಿವೆ:

1) ಉಪನಿಷತ್ತುಗಳು ಮೂಲತಃ ವೈದಿಕಸಾಹಿತ್ಯವಾಗಿರುವುದರಿಂದ, ಅವುಗಳ ಅಧ್ಯಯನಕ್ಕೂ ಮೂಲತಃ ಪ್ರತಿಪಾದ್ಯ ದೇವತೆಗಳ, ದರ್ಶನಮಾಡಿದ ಋಷಿ, ಅರ್ಥ ಮತ್ತು ಛಂದಸ್ಸುಗಳ ಪರಿಜ್ಞಾನ (ಅವಶ್ಯವಿದ್ದೆಡೆ) ಅತ್ಯಂತ ಅವಶ್ಯ. ಇಲ್ಲವಾದಲ್ಲಿ ಅವುಗಳ ಅಧ್ಯಯನ ಅನರ್ಥಕರ. ಆ ಮುಂಚಿನ ಭಾಷ್ಯಗಳು ಈ ವಿವರಗಳನ್ನು ನೀಡಿರಲಿಲ್ಲ. ಮಧ್ವಭಾಷ್ಯ ಪ್ರತಿಯೊಂದು ಉಪನಿಷತ್ತುಗಳಿಗೂ ಈ ವಿವರಗಳನ್ನು ಒದಗಿಸಿದೆ.

2) ಉಪನಿಷತ್ತುಗಳ ಭಾಷೆ ಸರಳ : ಆದರೆ ಅವು ಪ್ರತಿಪಾದಿಸುವ ವಿಷಯಗಳು ಅತ್ಯಂತ ಗಹನ; ನಿರೂಪಣೆ ತುಂಬಾ ಸಂಕೀರ್ಣ. ಎಂದರೆ ಅವುಗಳ ಪದಗಳು, ವಾಕ್ಯಗಳು, ಅರ್ಥವಾಗುವಂತೆ ಕಂಡರೂ, ಅವುಗಳ ಭಾವ ಮಾತ್ರ ಒಗಟಾಗಿಯೇ ಉಳಿಯುವುದು ಅವುಗಳ ವೈಶಿಷ್ಟ್ಯ. ಆದಕ್ಕೆಂದೇ ಅವುಗಳ ಅರ್ಥವನ್ನು ಇತಿಹಾಸಪುರಾಣಗಳ ಬೆಳಕಿನಲ್ಲಿಯೇ ಕಾಣಬೇಕೆಂಬುದಾಗಿ ಪರಂಪರೆ ಎಚ್ಚರಿಸಿದೆ:

**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।**
**ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಚರಿಷ್ಯತಿ ॥**

ಎಂದರೆ ಇತಿಹಾಸಪುರಾಣಗಳು ವೈದಿಕಸಾಹಿತ್ಯದ ಪ್ರಥಮ ಭಾಷ್ಯಗಳು. ಅವುಗಳ ಸಹಾಯವಿಲ್ಲದೆ ವೇದಗಳ ಭಾವ ಎಂದೂ ತೆರೆದುಕೊಳ್ಳುವುದಿಲ್ಲ ಎಂದರ್ಥ. ಆದರೆ ಹಾಗೆ ಇತಿಹಾಸ ಪುರಾಣಗಳ ಬೆಳಕಿನಲ್ಲಿ ವೇದೋಪನಿಷತ್ತುಗಳಿಗೆ ರಚಿತವಾದ ಭಾಷ್ಯಗಳು ಎಂಬುದು ಮಧ್ವಭಾಷ್ಯಗಳ ಹಿರಿಮೆ. ಅವರ ಭಾಷ್ಯಗಳಲ್ಲಿ ಉದ್ದಕ್ಕೂ ಕಂಡುಬರುವ ಪ್ರಮಾಣಗಳ ಉದಾಹರಣೆ ಇದಕ್ಕೆ ಸಾಕ್ಷಿ.

3) ವೇದೋಪನಿಷತ್ತುಗಳಿಗೆ ಇತಿಹಾಸಪುರಾಣಗಳಲ್ಲದೆ ಋಕ್ಸಂಹಿತಾ, ಯಜುಃಸಂಹಿತಾ, ಸಾಮಸಂಹಿತಾ, ಐತರೇಯಸಂಹಿತಾ ಮೊದಲಾದ ವಿವರಣೆಗಳು ರಚಿತವಾಗಿದ್ದವು ಎಂಬ ಮತ್ತೊಂದು ಅಂಶವನ್ನು ಬೆಳಕಿಗೆ ತಂದು ಅವುಗಳ ಹಿನ್ನೆಲೆಯಲ್ಲಿ ಉಪನಿಷತ್ತುಗಳ ಮರ್ಮವನ್ನು ಅರಿಯಬೇಕೆಂಬುದನ್ನು ಶ್ರುತಪಡಿಸಿದ ಹಿರಿಮೆಯೂ ಮಧ್ವಭಾಷ್ಯಗಳದೇ ಆಗಿದೆ. ಉದಾಹರಣೆಗೆ ಐತರೇಯೋಪನಿಷತ್ತಿನ ಅನೇಕ ಗಹನಭಾಗಗಳಿಗೆ ಐತರೇಯಸಂಹಿತೆ ಎಂಬ ಗ್ರಂಥದ ವಾಕ್ಯಗಳಿಂದ ಅರ್ಥವಿವರಿಸಿರುವುದನ್ನು ಗಮನಿಸಬಹುದು.

4) ವೈದಿಕಸಾಹಿತ್ಯ ಪೂರ್ಣವಾಗಿ ತೆರೆದುಕೊಳ್ಳಲು ಶಿಕ್ಷಾ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೌತಿಷ ಮತ್ತು ಕಲ್ಪ ಎಂಬ ಆರು ವೇದಾಂಗಗಳೂ ಅಷ್ಟೇ ಅವಶ್ಯ. ವೇದಾಂಗ ಎಂಬ ಹೆಸರಿನಲ್ಲಿಯೇ ಅವುಗಳ ಮಹತ್ತ್ವ ಅಡಗಿದೆ. ಅವುಗಳಲ್ಲೂ ವ್ಯಾಕರಣ, ನಿರುಕ್ತಗಳ ಉಪಯೋಗ ಇನ್ನೂ ಪ್ರಧಾನ. ಹೆಚ್ಚಿನ ವೇದಭಾಷ್ಯಕಾರರು ಇವುಗಳ ಪ್ರಯೋಜನ ಪಡೆದದ್ದು ಕಡಿಮೆಯೇ. ಉಪನಿಷದ್ಭಾಷ್ಯಗಳಿಗೆ ಇವುಗಳ ಪ್ರಯೋಜನವನ್ನಂತೂ ಪಡೆದೇ ಇರಲಿಲ್ಲ. ಅಲ್ಲಲ್ಲಿ ಕಂಡು ಬರುವ ವಿವರಗಳು ಪಾಣಿನಿಯ ವ್ಯಾಕರಣಗಳಿಗಿಂತ ಮುಂಚಿನ ವ್ಯಾಕರಣಗಳನ್ನು ಹೆಸರಿಗೂ ಉಲ್ಲೇಖಿಸಿಲ್ಲ. ಆದರೆ ಮಧ್ವಭಾಷ್ಯಗಳಲ್ಲಿ ಇವುಗಳ ಉಪಯೋಗ ವಿಪುಲವಾಗಿದೆ. ಅವರು 'ಮಹಾವ್ಯಾಕರಣ' ಮತ್ತು ವ್ಯಾಸನಿರುಕ್ತಗಳನ್ನು ಉಲ್ಲೇಖಿಸಿರುವುದನ್ನು ಗಮನಿಸಬೇಕು.

5) ಬ್ರಹ್ಮಮೀಮಾಂಸೆ ಅಥವಾ ಬ್ರಹ್ಮಸೂತ್ರಗಳಂತೂ ಸಕಲ ಶಾಸ್ತ್ರಾರ್ಥ ನಿರ್ಣಯದ ಮಾರ್ಗದರ್ಶಕಸೂತ್ರಗಳು. ಅವುಗಳ ಮಾರ್ಗದರ್ಶನವಿಲ್ಲದೆ ತಾತ್ತ್ವಿಕವಿಚಾರದ ಅಂತಿಮನಿರ್ಣಯ ಅಶಕ್ಯ 'ತಸ್ಮಾತ್ಸೂತ್ರಾರ್ಥಮಾಗೃಹ್ಯ ಕರ್ತವ್ಯಃ ಸರ್ವನಿರ್ಣಯಃ', ವೇದೋಪನಿಷತ್ತುಗಳಿಗಂತೂ ಅವು ನೇರವಾಗಿಯೇ ನಿರ್ಣಾಯಕಸೂತ್ರಗಳು. ಆದರೆ ಅವುಗಳ ಉಪಯೋಗವನ್ನು ಪ್ರಧಾನವಾಗಿ

ಪಡೆದುಕೊಂಡದ್ದು ಮಧ್ವಭಾಷ್ಯಗಳು ಮಾತ್ರ.

6) ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ ಮತ್ತು ಅರ್ಥವಾದಗಳೆಂಬ ತಾತ್ಪರ್ಯನಿರ್ಣಾಯಕ ಲಿಂಗಗಳು ವೈದಿಕಸಾಹಿತ್ಯದ ಅರ್ಥವಿಶೇಷಣೆಗೆ ಅತ್ಯಂತ ಪ್ರಧಾನ. ಅಂತೆಯೇ ಶ್ರುತಿ, ಲಿಂಗ, ಸಮಾಖ್ಯಾ ವಾಕ್ಯ ಮತ್ತು ಪ್ರಕರಣಗಳು ಸಹ. ಇವುಗಳಲ್ಲಿ ಉಪಕ್ರಮಾದಿಗಳಲ್ಲಿ ಮುಂಚಿನದಕ್ಕಿಂತ ಅನಂತರದ್ದು ಪ್ರಬಲವಾದರೆ, ಶ್ರುತಿ, ಲಿಂಗಾದಿಗಳಲ್ಲಿ ಅನಂತರದ್ದಕ್ಕಿಂತ ಮುಂಚಿನದೇ ಪ್ರಬಲ. ಈ ಪರಿಜ್ಞಾನದೊಂದಿಗೆ ಉಪನಿಷತ್ತಿನ ಗಹನವಾಕ್ಯಗಳ ಆಂತರ್ಯವನ್ನು ನಿರ್ಣಯಿಸಿರುವುದು ಮಧ್ವಭಾಷ್ಯಗಳ ಪ್ರಮುಖ ವೈಶಿಷ್ಟ್ಯಗಳಲ್ಲೊಂದು. 'ಅಹಂ ಬ್ರಹ್ಮಾಸ್ಮಿ', 'ತತ್ತ್ವಮಸಿ' ಮೊದಲಾದ ವಾಕ್ಯಗಳ ಮೇಲಿನ ಭಾಷ್ಯಗಳನ್ನು ಇಲ್ಲಿ ನಿದರ್ಶನವಾಗಿ ಉಲ್ಲೇಖಿಸಬಹುದು.

7) ಉಪನಿಷತ್ತುಗಳು ಮೂಲತಃ ಅಧ್ಯಾತ್ಮವಿದ್ಯೆಯಾದ್ದರಿಂದ, ಅಲ್ಲಿಯ ಪದ, ವಾಕ್ಯ, ಪ್ರಕರಣ ಮೊದಲಾದ ಪ್ರತಿಯೊಂದನ್ನೂ ಅಧ್ಯಾತ್ಮಪರವಾಗಿ ಕಾಣಬೇಕು. ಹಾಗೆ ಪ್ರತಿಯೊಂದು ಪ್ರಸಂಗವನ್ನೂ ವಿಶ್ಲೇಷಿಸಿದ ಹಿರಿಮೆ ಮಧ್ವಭಾಷ್ಯಗಳದು.

8) ಉಪನಿಷತ್ತುಗಳಲ್ಲಿ ಅದ್ವೈತಪರವೆಂದು ತೋರುವ 'ಅಹಂ ಬ್ರಹ್ಮಾಸ್ಮಿ', 'ತತ್ತ್ವಮಸಿ', 'ಪ್ರಜ್ಞಾನಂ ಬ್ರಹ್ಮ', ಸರ್ವಂ ಖಲ್ವಿದಂ ಬ್ರಹ್ಮ, ನೇಹ ನಾನಾಸ್ತಿ ಕಿಂಚನ ಮೊದಲಾದ ನಾಲ್ಕಾರುವಾಕ್ಯಗಳನ್ನು ಮಾತ್ರ ತತ್ತ್ವಾವೇದಕವೆಂದು ಪರಿಗಣಿಸಿ ಅದ್ವೈತವೇ ಉಪನಿಷತ್ತಿನ ಆಂತರ್ಯವೆಂಬ ವಾದವನ್ನು ವಿಮರ್ಶಿಸಿ ಅವುಗಳು ಸಹ 'ದ್ವಾ ಸುಪರ್ಣಾ ಸಯುಜಾ ಸಖಾಯಾ', ಮೊದಲಾದ ಭೇದಪರವಾಕ್ಯಗಳಂತೆ ಭೇದಬೋಧಕವೇ ಹೊರತು ಯಾವ ರೀತಿಯಲ್ಲೂ ಅಭೇದ ಬೋಧಕವಲ್ಲ ಎಂಬುದನ್ನು ಅನೇಕ ತೆರನಾಗಿ ಪ್ರತಿಪಾದಿಸಿದ್ದು ಮಧ್ವಭಾಷ್ಯದ ಅಸಾಧಾರಣ ಮಹತ್ವ.

9) ಉಪನಿಷತ್ತಿನ ವಿವರಗಳ ನಿರ್ಣಯಕ್ಕೆ ಅವಶ್ಯವಾದ ಹಿನ್ನೆಲೆ, ಸ್ಪಷ್ಟೀಕರಣ, ಉಪಾಖ್ಯಾನಗಳ ಮರ್ಮ, ವಿರೋಧಪರಿಹಾರಕ್ಕೆ ಸಂಬಂಧಿಸಿದ ವಿವರಗಳನ್ನು ಸಾಧಾರವಾಗಿ ಒದಗಿಸಿರುವುದು ಮಧ್ವಭಾಷ್ಯದ ಮತ್ತೊಂದು ವೈಶಿಷ್ಟ್ಯ. ಉದಾಹರಣೆಗೆ ಈಶಾವಾಸ್ಯೋಪನಿಷತ್ತಿನ ಋಷಿದೇವತೆಗಳ ವಿವೇಚನೆಗೆ ಅವರು ಪದ್ಮಪುರಾಣ, ಭಾಗವತಗಳಿಂದ ಒದಗಿಸಿರುವ ವಿವರಗಳ ವೈವಿಧ್ಯವನ್ನು ಗಮನಿಸಬಹುದು.

10) ಮುಖ್ಯ ವಿಷಯಗಳ ಸ್ಪಷ್ಟೀಕರಣದಂತೆ, ಆಟಕೀ, ಪ್ರಾದ್ರಾಣಕ, ಚರಕ

ಮೊದಲಾದ ನೂರಾರು ಪದಗಳ ನಿಖರವಾದ ಅರ್ಥವನ್ನು ಸಾಧಾರವಾಗಿಯೇ ವಿವರಿಸಿರುವುದು ಮಧ್ವಭಾಷ್ಯಗಳ ಪರಿಪೂರ್ಣತೆಗೆ ಮತ್ತೊಂದು ಕಾರಣ.

11) ಪ್ರತಿಯೊಂದು ವಿಷಯಗಳ ಬಗ್ಗೆ ತಮ್ಮ ವಿವರಣೆಯನ್ನು ಸಂಕ್ಷೇಪವಾಗಿ ನೀಡಿ, ಅದನ್ನು ವಿವರವಾಗಿ ಪ್ರಮಾಣವಾಕ್ಯಗಳಿಂದಲೇ ಸಮರ್ಥಿಸುವ ಅವರ ವಿಶಿಷ್ಟ ಶೈಲಿ ಉಪನಿಷದ್ಭಾಷ್ಯಗಳಲ್ಲೂ ವ್ಯಾಪಕವಾಗಿಯೇ ಕಂಡುಬರುವುದು.

12) ಉಪನಿಷತ್ತಿನಲ್ಲೆಲ್ಲ ಬಹು ಪ್ರಧಾನವಾಗಿ ಕಂಡುಬರುವ ಪ್ರಮುಖ ತತ್ತ್ವ 'ಬ್ರಹ್ಮತತ್ತ್ವ'. ಅನಂತರದ ಮಹತ್ವಪೂರ್ಣವಾದ ಮತ್ತೊಂದು ತತ್ತ್ವ. 'ಪ್ರಾಣತತ್ತ್ವ', 'ಬ್ರಹ್ಮತತ್ತ್ವ'ವು ಶ್ರೀ ಹರಿ, ಪ್ರಾಣತತ್ತ್ವವು, ಮುಖ್ಯಪ್ರಾಣ ಎಂದರೆ ಅವರ ಮಹತ್ವದ ಪ್ರತಿಪಾದನೆ ಎಂದರೆ ಉಪನಿಷತ್ತುಗಳ ಪ್ರಧಾನ ಸಂದೇಶ ಹರಿಸರ್ವೋತ್ತಮತ್ತ್ವ ಮತ್ತು ವಾಯುದೇವೋತ್ತಮತ್ತ್ವದ ಪ್ರತಿಪಾದನೆಯೇ ಆಗಿದೆ. ಇದನ್ನು ಅವರು ಎಲ್ಲೆಡೆಗಳಲ್ಲಿಯೂ ಪ್ರತಿಪಾದಿಸಿರುವರು.

## ದಶೋಪನಿಷತ್ತುಗಳ ಋಷಿ-ದೇವತಾವಿವರ

| ಉಪನಿಷತ್ | ವೇದಶಾಖೆ | ಋಷಿ | ಪ್ರತಿಪಾದ್ಯ ದೇವತೆ |
|---|---|---|---|
| ಈಶಾವಾಸ್ಯ | ಶುಕ್ಲಯಜುರ್ವೇದ ವಾಜಸನೇಯ ಸಂಹಿತಾ | ಸ್ವಾಯಂಭುವಮನು | ಯಜ್ಞ |
| ತಲವಕಾರ | ಸಾಮವೇದ ತಲವಕಾರ ಬ್ರಾಹ್ಮಣ | ಬ್ರಹ್ಮ ಮತ್ತು ಸದಾಶಿವ | ವಿಷ್ಣು |
| ಕಠೋಪನಿಷತ್ | ಕೃಷ್ಣಯಜುರ್ವೇದ ತೈತ್ತಿರೀಯ ಸಂಹಿತಾ | ಯಮ | ವಾಮನ |
| ಷಟ್ಪ್ರಶ್ನ | ಅಥರ್ವವೇದ-ಪಿಪ್ಪಲಾದಶಾಖಾ | ಪಿಪ್ಪಲಾದಾದಿಗಳು | ವಾಸುದೇವ |
| ಆಥರ್ವಣ | ಅಥರ್ವವೇದ | ಬ್ರಹ್ಮ-ಅಥರ್ವಣರು | ಅಕ್ಷರನಾಮಕ ವಿಷ್ಣು |
| ಮಾಂಡೂಕ | ಅಥರ್ವವೇದ | ಮಂಡೂಕರೂಪಿ ವರುಣ | ವಿಶ್ವ, ತೈಜಸ, ಪ್ರಾಜ್ಞ ಮತ್ತು ತುರೀಯ |
| ತೈತ್ತಿರೀಯ | ಕೃಷ್ಣಯಜುರ್ವೇದ ತೈತ್ತಿರೀಯಾರಣ್ಯಕ | ವಿಷ್ಣು, ಬ್ರಹ್ಮ ವರುಣ, ಭೃಗು | ಸೂರ್ಯಮಂಡಲಸ್ಥ ಹರಿ (ವಾಸುದೇವಾದಿ ಪಂಚರೂಪಗಳು) |

| | | | |
|---|---|---|---|
| ಐತರೇಯ | ಋಗ್ವೇದ-<br>ಐತರೇಯಾರಣ್ಯಕ | ಐತರೇಯ | ಐತರೇಯ |
| ಛಾಂದೋಗ್ಯ | ಸಾಮವೇದ<br>ಛಾಂದೋಗ ಬ್ರಾಹ್ಮಣ | ಹಯಗ್ರೀವ, ರಮಾ,<br>ಬ್ರಹ್ಮಾದಿಗಳು | ಲಕ್ಷ್ಮೀಪತಿ |
| ಬೃಹದಾರಣ್ಯಕ | ಶುಕ್ಲಯಜುರ್ವೇದ-<br>ಕಣ್ವಶಾಖಾ | ಬ್ರಹ್ಮ, ಸೂರ್ಯ,<br>ಯಜ್ಞವಲ್ಕ್ಯ<br>ಮತ್ತು ಕಣ್ವ | ಲಕ್ಷ್ಮೀಶ |

## ದಶೋಪನಿಷತ್ತುಗಳಲ್ಲಿ ಬಂದಿರುವ ಐಕ್ಯಬೋಧಕವೆಂದು ತೋರುವ ಕೆಲವು ಶ್ರುತಿಗಳು

1) ಈಶಾವಾಸ್ಯ— ಯೋಽಸಾವಸೌ ಪುರುಷಃ ಸೋಽಹಮಸ್ಮಿ

2) ಕಾಠಕೋಪನಿಷತ್ — ನೇಹ ನಾನಾಸ್ತಿ ಕಿಂಚನ (2/11)
ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥

3) ಷಟ್ಪ್ರಶ್ನೋಪನಿಷತ್ —
ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ ಗಚ್ಛಂತಿ (6/3)

4) ಆಥರ್ವಣೋಪನಿಷತ್ —
ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ
ಪರೇಽವ್ಯಯೇ ಸರ್ವ ಏಕೀಭವಂತೀ (6/7)
ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ
ಪರಾತ್ಪರಂ ಪುರುಷಮುಪೈತಿ ದಿವ್ಯಂ ॥

ಸ ಹ ಯೋ ವೈ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ॥ (6/9)

5) ಮಾಂಡೂಕೋಪನಿಷತ್—
ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ।
ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥
ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ ।
ಉಪದೇಶಾದಯಂ ವಾದೋ ಜ್ಞಾತೇ ದ್ವೈತಂ ನ ವಿದ್ಯತೇ॥ (2/9, 10)

6) ತೈತ್ತಿರೀಯೋಪನಿಷತ್—
ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ । (2/27)

7) ಬೃಹದಾರಣ್ಯಕೋಪನಿಷತ್— ಅಹಂ ಬ್ರಹ್ಮಾಸ್ಮಿ

8) ಛಾಂದೋಗ್ಯೋಪನಿಷತ್— ತತ್ತ್ವಮಸಿ

9) ಐತರೇಯೋಪನಿಷದ್ಭಾಷ್ಯ— ಯೋಽಹಂ ಸೋಽಸೌ ಯೋಽಸೌ ಸೋಽಹಂ

# ಈಶಾವಾಸ್ಯೋಪನಿಷದ್ಭಾಷ್ಯ

'ಈಶಾವಾಸ್ಯಂ' ಎಂಬ ಇದರ ಮೊದಲ ಪದದಿಂದಾಗಿ 'ಈಶಾವಾಸ್ಯೋಪ ನಿಷತ್', 'ಈಶೋಪನಿಷತ್' ಎಂಬುದಾಗಿಯೇ ಹೆಚ್ಚು ಪ್ರಸಿದ್ಧಿಯಲ್ಲಿರುವ ಈ ಉಪನಿಷತ್ತು ಶುಕ್ಲಯಜುರ್ವೇದದ ವಾಜಸನೇಯಸಂಹಿತೆಯ 14ನೇ ಅಧ್ಯಾಯವಾಗಿದ್ದು, ಸಂಹಿತೆಯ ಭಾಗವಾಗಿ ಮಂತ್ರಾತ್ಮಕವಾಗಿದೆ. ಯಜ್ಞನಾಮಕ ಶ್ರೀಹರಿಯು ಇದರ ಪ್ರತಿಪಾದ್ಯ ದೇವತೆ; ಸ್ವಾಯಂಭುವಮನು ಇದರ ಋಷಿ. ದೇವತೆಯಜ್ಞನಾಮಕನಾಗಿರುವುದರಿಂದಲೂ, ಉಪನಿಷತ್ತು ಮಂತ್ರಾತ್ಮಕವಾಗಿರು ವುದರಿಂದಲೂ, ಯಾಜ್ಞೀಯೋಪನಿಷತ್ತು, ಯಾಜ್ಞೀಯಮಂತ್ರೋಪನಿಷತ್ ಎಂಬುದಾಗಿಯೂ ಇದು ಪ್ರಸಿದ್ಧ.

"ಸಕಲ ಜಗತ್ತೂ ಭಗವದಧೀನ; ಭಗವಂತನು ಸ್ವತಂತ್ರ, ಸರ್ವಜ್ಞ, ಸರ್ವಶಕ್ತ, ಪರಮಪವಿತ್ರ. ಪರಿಪೂರ್ಣ, ಸರ್ವನಿಯಾಮಕ. ವಾಯುದೇವರ ಅಂತರ್ಯಾಮಿಯೂ, ಸರ್ವರ ಅಂತರ್ಯಾಮಿಯಾಗಿಯೂ ಸದಾ ಇರುವವನು. ಶೋಕಾದಿಗಳಾಗಲಿ, ಪ್ರಾಕೃತದೇಹವಾಗಲಿ ಎಂದೂ ಅವನಿಗೆ ಇಲ್ಲ. ಅವನು ನೀಡಿದ್ದನ್ನು ಸ್ವೀಕರಿಸಿ ಸಂತೃಪ್ತಿಯಿಂದ ಬದುಕಬೇಕು. ಅನ್ಯರನ್ನು ಎಂದೂ ಏನನ್ನೂ ಬೇಡಕೂಡದು; ತನ್ನ ಪಾಲಿಗೆ ವಿಹಿತವಾದ ಕರ್ತವ್ಯಕರ್ಮಗಳನ್ನು ಪ್ರತಿಫಲಾಪೇಕ್ಷೆಯನ್ನು ತೊರೆದು ಭಗವತ್ಪ್ರೀತ್ಯರ್ಥವಾಗಿ ಜೀವನಪೂರ್ತಿ ಆಚರಿಸಲೇಬೇಕು. ತತ್ತ್ವಜ್ಞಾನವನ್ನು ಆದರಿಸುವಂತೆ, ಮಿಥ್ಯಾಜ್ಞಾನವನ್ನು ತಿರಸ್ಕರಿಸಲೂ ಬೇಕು. ಭಗವಂತನನ್ನು ಕೇವಲ ಸೃಷ್ಟಿಕರ್ತನೆಂದು ಮಾತ್ರವಲ್ಲದೆ ಸಂಹಾರಾದಿ ಅಖಿಲಕ್ಕೂ ಕಾರಣ ಎಂಬುದಾಗಿ ಆರಾಧಿಸಬೇಕು. ಮಿಥ್ಯಾಜ್ಞಾನವನ್ನು ನಿಂದಿಸದಿದ್ದಲ್ಲಿ, ಮಿಥ್ಯಾಜ್ಞಾನಿಗಳಿಗಾಗುವ ದುರ್ಗತಿಗಿಂತಲೂ ಹೆಚ್ಚಿನ ದುರ್ಗತಿಯಾಗುವುದು; ಅದರಂತೆ ಭಗವಂತನನ್ನು ಸೃಷ್ಟಿಕರ್ತ ಎಂದು ಮಾತ್ರ ತಿಳಿಯುವುದು, ಅವನು ಸೃಷ್ಟಿಕರ್ತನೂ ಅಲ್ಲ ಎಂದು ತಿಳಿಯುವುದಕ್ಕಿಂತಲೂ ಅಪಾಯಕರ. ಅಂತಹ ಭಗವಂತನನ್ನು ಅವನ ದಿವ್ಯರೂಪವನ್ನು ತೋರಿಸಲು, ಸನ್ಮಾರ್ಗದಲ್ಲಿ ನಡೆಸಿ ಮೋಕ್ಷಕ್ಕೆ ಕರೆದೊಯ್ಯಲು, ಉದ್ಧರಿಸಲು ಸದಾ ಪ್ರಾರ್ಥಿಸಿಕೊಳ್ಳುತ್ತಿರಬೇಕು. ಅವನಿಗೆ ಭಕ್ತಿಜ್ಞಾನಗಳಿಂದ ಭರಿತವಾದ ನಮಸ್ಕಾರದ ಹೊರತು ಬೇರೇನನ್ನು ನೀಡುವ ಸಾಮರ್ಥ ನಮ್ಮಲ್ಲಿಲ್ಲ ಎಂಬ ಎಚ್ಚರ ಸದಾ ಇರಬೇಕು" ಇದು ಮಧ್ವಭಾಷ್ಯಾನುಸಾರಿಯಾಗಿ ಈಶ್ಯಾವಾಷೋಪನಿಷತ್ತಿನ ಸಾರ.

ಇದರಲ್ಲಿನ 'ಯೋಽಸಾವಸೌ ಪುರುಷಃ ಸೋಽಹಮಸ್ಮಿ' ಎಂಬ ಅಭೇದ

ಪರವೆಂದು ತೋರುವ ವಾಕ್ಯಕ್ಕೆ ಆಚಾರ್ಯರು 'ಪ್ರಾಣನಲ್ಲಿರುವ ಪೂರ್ಣನಾದ ಪರಮಾತ್ಮನೇ ಸರ್ವಜೀವರಿಗೂ ಅಹೇಯನು, ಅವನು ಸದಾ ಇರುವವನು' ಎಂಬುದಾಗಿ ಅರ್ಥವನ್ನು ತಿಳಿಸಿರುವರು. ಎಂದರೆ ಇಲ್ಲಿಯ 'ಅಹಂ', 'ಅಸ್ಮಿ', ಎಂಬ ಪದಗಳು ಭಗವಂತನ ಹೆಸರುಗಳಾಗಿರುವವೇ ಹೊರತು ಅಭೇದ ಬೋಧಕವಾಗಿಲ್ಲ ಎಂದರ್ಥ. ಇದನ್ನು 'ಅಹಂ ಚಾಸಾವಹೇಯತಃ । ಅಸ್ಮಿ ನಿತ್ಯಾಸ್ತಿತಾಮಾನಾತ್ ಸರ್ವಜೀವೇಷು ಸಂಸ್ಥಿತಃ । ಸ್ವಯಂ ತು ಸರ್ವಜೀವೇಭ್ಯೋ ವ್ಯತಿರಿಕ್ತಃ ಪರೋ ಹರಿಃ ॥' ಎಂಬುದಾಗಿ ಬ್ರಹ್ಮಾಂಡಪುರಾಣದ ಆಧಾರವನ್ನಿತ್ತು ಸಮರ್ಥಿಸಿರುವರು.[೧]

# ತಲವಕಾರೋಪನಿಷದ್ಭಾಷ್ಯ

ಸಾಮವೇದದ ತಲವಕಾರಬ್ರಾಹ್ಮಣಕ್ಕೆ ಸೇರಿದ್ದು ಕೇನೋಪನಿಷತ್ತು; ತಲವಕಾರಬ್ರಾಹ್ಮಣಕ್ಕೆ ಸೇರಿದ್ದರಿಂದ 'ತಲಕಾರೋಪನಿಷತ್' ಎಂಬುದಾಗಿಯೂ, 'ಕೇನೇಷಿತಂ ಪ್ರೇಷಿತಂ' ಮನಃ' ಎಂಬ ಆದರ ಮೊದಲ ಪದದಿಂದಾಗಿ

---

೧. ಇಲ್ಲಿಯ 'ಅಹಂ' 'ಅಸ್ಮಿ' ಎಂಬವು ಭಗವಂತನ ಹೆಸರುಗಳು ಎಂಬುದನ್ನು ಅವೆಸ್ತಾ, Old Testament (ಹಳೆಯ ಒಡಂಬಡಿಕೆ) ಗಳು ಸಹ ಒಪ್ಪಿವೆ ಎಂಬುದನ್ನು ಶ್ರೀಶ ಚಂದ್ರವಸು ಎಂಬವರು ತೋರಿಸಿರುವರು :

"Thus spoke Zarathustra - 'Tell them O pure Ahuramazda, the name which is thy greatest, best, fairest and which is most efficacious for prayer'. Thus answered ahuramazda—My first name is Ahmi; I AM................ My Twentieth name is Ahmi Mazdo : I am that I AM " (Avesta xvii, 4-6)

'And Moses said into God, "Behold, when I come unto the children of Israel and shall say unto them "The God of your fathers hath sent me unto you, and they shall say to me 'what is his name'? What shall I say unto them? And God said into Moses, "I am that I AM and He said : Thou shall say into the children of Israel— 'I AM' has sent me unto you : (Old Testament iii 13-14)

—A History of Dvaitha School of Vedantha and its literature of Dr. BNK Sharma Vol. I. P. 211.

'ಕೇನೋಪನಿಷತ್' ಎಂಬುದಾಗಿಯೂ ಪ್ರಸಿದ್ಧ. ಇದಕ್ಕೆ ಬ್ರಹ್ಮರುದ್ರರು ಋಷಿಗಳಾಗಿದ್ದು, ಮಹಾವಿಷ್ಣುವು ದೇವತೆಯಾಗಿರುವನು. ಎಂದರೆ ತ್ರಿಮೂರ್ತಿಗಳ ವ್ಯಾಪಾರವೂ ಇದರಲ್ಲಿದ್ದು, ಇದು ಬ್ರಹ್ಮನು ಹರನಿಗೆ ಹೇಳಿದ ಹರಿಮಹಿಮೆಯಾಗಿದೆ. ವಿಷ್ಣುಪಾರಮ್ಯ ಇದರ ಮಹಾತಾತ್ಪರ್ಯ.

ವೈಜಯಂತವೆಂಬ ಮೇರುಪರ್ವತದ ಮೇಲಿನ ತಮ್ಮ ಭವನದಲ್ಲಿದ್ದ ಬ್ರಹ್ಮದೇವರ ಬಳಿಗೆ ರುದ್ರದೇವರು ಬಂದು "ಮನಸ್ಸು, ಮುಖ್ಯಪ್ರಾಣ, ಕಣ್ಣು, ಕಿವಿ, ಮಾತು ಇವುಗಳಿಗೆಲ್ಲ ಮುಖ್ಯ ಪ್ರೇರಕರಾರು?' ಎಂದು ಪ್ರಶ್ನಿಸುತ್ತಾರೆ. ಅದಕ್ಕೆ ಉತ್ತರವಾಗಿ ಬ್ರಹ್ಮದೇವರು 'ಸರ್ವಾಧಾರನೂ, ಅನುಪಮನೂ, ಸರ್ವಜ್ಞನೂ, ಸರ್ವಶಕ್ತನೂ, ಸಕಲದೋಷದೂರನೂ, ಸಕಲದೇವತೆಗಳಿಂದಲೂ ಅಗಮ್ಯನೂ, ಅದ ವಿಷ್ಣುವೇ ಅಂತಹ ಮುಖ್ಯ ಪ್ರೇರಕ' ಎಂಬುದಾಗಿ ಉಪದೇಶಿಸುತ್ತಾರೆ. ಪರಮಾತ್ಮನನ್ನು ಎಷ್ಟು ಚೆನ್ನಾಗಿ ತಿಳಿದುಕೊಂಡರೂ, ತಿಳಿದದ್ದು ಮಾತ್ರ ಸ್ವಲ್ಪವೇ ಆಗಿರುತ್ತದೆ. ಬ್ರಹ್ಮನನ್ನು ಪೂರ್ಣ ತಿಳಿದಿರುವೆನೆಂದು ತಿಳಿದವನು ಆತನ ಬಗ್ಗೆ ಏನನ್ನೂ ತಿಳಿದಿರುವುದಿಲ್ಲ. ಅವನು ಪೂರ್ಣನಾದ್ದರಿಂದ ಪೂರ್ಣವಾಗಿ ತಿಳಿಯಲಾರೆನೆಂದು ತಿಳಿದವನು ಮಾತ್ರವೇ ಅವನ ಬಗ್ಗೆ ಸರಿಯಾಗಿ ತಿಳಿದವನಾಗಿರುವನು. ಅಂತಹ ಪರಮಾತ್ಮನನ್ನು ತಮ್ಮ ಯೋಗ್ಯತೆಗನುಗುಣವಾಗಿ ತಿಳಿದವರಿಗೆ ಮೋಕ್ಷವು ಲಭಿಸುವುದು. ಮಂಗಲವಾಗುವುದು; ತಿಳಿಯದವನಿಗೆ ಮಾತ್ರ ಭಾರಿ ನಷ್ಟ ಉಂಟು. ಪ್ರತಿಯೊಂದು ಪ್ರಸಕ್ತಿಯಲ್ಲಿಯೂ ಪರಮಾತ್ಮನನ್ನು ತಿಳಿದವನು, ಈ ದೇಹವನ್ನು ತೊರೆದು ಮುಕ್ತನಾಗುವನು.

ಹೀಗೆ ಬ್ರಹ್ಮತತ್ತ್ವವು ಸಾಕಲ್ಯೇನ ಅಜ್ಞೇಯ ಎಂಬುದಾಗಿ ನಿರೂಪಿಸಿ, ಬ್ರಹ್ಮದೇವರು ಅದನ್ನು ವಿವರಿಸಲು ಒಂದು ಆಖ್ಯಾಯಿಕೆಯನ್ನು ಹೇಳುವರು. ಒಮ್ಮೆ ದೇವತೆಗಳು ದೇವರ ದಯೆಯಿಂದ ದೈತ್ಯರನ್ನು ಗೆದ್ದರು; ಆದರೆ ಗೆದ್ದದ್ದು ತಾವೇ ಎಂದು ಭ್ರಮಿಸಿ ಅಹಂಕಾರಪಟ್ಟರು. ಅವರಿಗೆ ತತ್ತ್ವ ತಿಳಿಸಲು ಶ್ರೀಹರಿಯು ಅಲ್ಲಿಗೆ ಯಕ್ಷರೂಪದಿಂದ ಆಗಮಿಸಿದನು. ಅವನನ್ನು ತಿಳಿಯಲು ಇತರ ದೇವತೆಗಳಿಂದ ಕಳಿಹಿಸಲ್ಪಟ್ಟ ಅಗ್ನಿ, ನಾಸಿಕ್ಯವಾಯುಗಳು ವಿಫಲರಾಗಿ ಹಿಂದಿರುಗುವರು. ಇಂದ್ರದೇವರನ್ನು ತಿಳಿದು ಬರಲು ಕಳಿಸಿದಾಗ, ಯಕ್ಷನು ಮಾಯವಾಗಿ ಪಾರ್ವತಿ ಕಾಣಿಸಿಕೊಂಡು, "ಯಕ್ಷನು ಬೇರಾರೂ ಅಲ್ಲ, ನಿಮಗೆಲ್ಲ ಜಯ ತಂದುಕೊಟ್ಟ ಪರಮಾತ್ಮ" ಎಂದು ಸಾರುವರು. ಪರಮಾತ್ಮನು ಕಪಿಲನಾಮಕನಾಗಿ ಸಕಲವನ್ನೂ ಬೆಳಗುವನು, ಕ್ಷೀರಸಾಗರದಲ್ಲಿ ಪವಡಿಸಿರುವವನು. ಇಂತಹ ಪರಮಾತ್ಮನೇ ಮನಸ್ಸು ಮೊದಲಾದ ಸಕಲಕ್ಕೂ ಮುಖ್ಯಪ್ರೇರಕ. ಅವನು ಸರ್ವತ್ರ

ವ್ಯಾಪ್ತನಾದ್ದರಿಂದಲೂ ಸರ್ವರಿಂದಲೂ ಸೇವ್ಯನಾದ್ದರಿಂದಲೂ 'ತದ್ವನಂ' ಎಂದು ಕರೆಸುವನು. ಹೀಗೆ 'ತದ್ವನಂ' ಎಂದು ಅವನನ್ನು ಉಪಾಸನೆ ಮಾಡುವವನು, ಸರ್ವರಿಗೂ ಪ್ರಿಯನಾಗುವನು. ಇಂತಹ ಬ್ರಹ್ಮವಿದ್ಯೆಯನ್ನು ತಿಳಿಯಲು ತಪಸ್ಸು, ದಮ (ಇಂದ್ರಿಯ ನಿಗ್ರಹ) ಮತ್ತು ಸ್ವವಿಹಿತಕರ್ಮಾನುಷ್ಠಾನ ಈ ಮೂರೂ ಅತ್ಯವಶ್ಯ. ಅಂತಹವನಿಗೆ ಮಾತ್ರ ಈ ವಿದ್ಯೆ ಸಿದ್ಧಿಸುತ್ತದೆ. ವೇದಗಳು, ಶಿಕ್ಷಾ ಮೊದಲಾದ ವೇದಾಂಗಗಳು ಮತ್ತು ಬ್ರಹ್ಮ ಮೀಮಾಂಸಾ ಶಾಸ್ತ್ರಗಳು ಇವುಗಳು ಬ್ರಹ್ಮವಿದ್ಯೆಯ ಆಕರ ಸ್ಥಾನಗಳು. ಈ ರೀತಿ ಸರಿಯಾಗಿ ಬ್ರಹ್ಮವಿದ್ಯೆ ಬಲ್ಲವನು ಸಕಲತಾಪಗಳನ್ನೂ ಪರಿಹರಿಸಿಕೊಂಡು ಭಗವಂತನಾದ ಮಹಾವಿಷ್ಣುವಿನ ಬಳಿ ಆಶ್ರಯಪಡೆಯುವನು.

ಇದು ಮಧ್ವಭಾಷ್ಯಾನುಸಾರ ತಲವಕಾರೋಪನಿಷತ್ತಿನ ಸಾರ.

ಮಹಾಭಾರತದ ಶಾಂತಿಪರ್ವದ ಮೋಕ್ಷಧರ್ಮಪರ್ವದಲ್ಲಿ ಶಿವನಿಗೆ ಬ್ರಹ್ಮ ದೇವರು ಇದೇ ರೀತಿ ತತ್ತ್ವೋಪದೇಶ ಮಾಡುವ ಒಂದು ಅಧ್ಯಾಯವಿದ್ದು, ಅದು ಈ ಉಪನಿಷತ್ತಿನ ಸಾರದಂತಿದೆ. ಪ್ರಸಂಗವೂ ಇದೇ ತೆರನಾಗಿದೆ. ಶ್ರೀಮದಾ ಚಾರ್ಯರು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ 'ಆಹ ಬ್ರಹ್ಮೈತಮೇವಾರ್ಥಂ ಮಹಾದೇವಾಯ ಪೃಚ್ಛತೇ' ಎಂಬುದಾಗಿ ತಿಳಿಸಿ, ಈ ಕೆಳಗಿನ ಶ್ಲೋಕವನ್ನು ಉಲ್ಲೇಖಿಸಿರುವರು :

**ಅಹಂ ಬ್ರಹ್ಮಾ ಚಾದ್ಯ ಈಶಃ ಪ್ರಜಾನಾಂ ತಸ್ಮಾತ್ ಪ್ರಸೂತಸ್ತ್ವಂ ಚ ಮತ್ತಃ ಪ್ರಸೂತಃ ।**
**ಮತ್ತೋ ಜಗತ್ ಸ್ಥಾವರಂ ಜಂಗಮಂ ಚ ಸರ್ವೇ ವೇದಾ ಸರಹಸ್ಯಾಶ್ಚ ಪುತ್ರ ॥**

# ಕಾಠಕೋಪನಿಷದ್ಭಾಷ್ಯ

ಕಾಠಕೋಪನಿಷತ್ ಅಥವಾ ಕಠೋಪನಿಷತ್ ಕೃಷ್ಣಯಜುರ್ವೇದದ ತೈತ್ತಿರೀಯ ಶಾಖೆಗೆ ಸೇರಿದ್ದು, ಇದೂ ಈಶಾವಾಸ್ಯೋಪನಿಷತ್ತಿನಂತೆ ಮಂತ್ರಾತ್ಮಕವಾಗಿದೆ. ಯಮದೇವ ಇದಕ್ಕೆ ಋಷಿ; ವಾಮನರೂಪಿ ಶ್ರೀಹರಿಯು ಇದರ ಪ್ರತಿಪಾದ್ಯ ದೇವತೆ.

ನಚಿಕೇತನು ತನ್ನ ತಂದೆ ಉದ್ದಾಲಕನು ನಿರುಪಯುಕ್ತವಾದ ಗೋವುಗಳನ್ನು ದಾನ ಮಾಡುವದನ್ನು ಪ್ರಶ್ನಿಸಿ ಅವರ ಶಾಪಕ್ಕೆ ಗುರಿಯಾಗುತ್ತಾನೆ. ಅದರಂತೆ ದೇಹವನ್ನು ತೊರೆದು ಯಮಲೋಕವನ್ನು ತಲುಪಿ ಅವರು ಬರುವವರೆಗೂ ಒಟ್ಟು ಮೂರು ದಿನಗಳ ಕಾಲ ಉಪವಾಸ ಕಾಯುತ್ತಾನೆ. ಅನಂತರ ಯಮದೇವರು ಅವನ

ದೀಕ್ಷೆಗೆ ಸಂತುಷ್ಟರಾಗಿ ಮೂರು ವರಗಳನ್ನು ಕೇಳಿಕೊಳ್ಳಲು ಹೇಳುವರು. ನಚಿಕೇತನು ಮೊದಲ ವರದಿಂದ ತಂದೆಯ ಪ್ರಸನ್ನತೆಯನ್ನೂ, ಎರಡನೇ ವರದಿಂದ ಸ್ವರ್ಗ್ಯಾಗ್ನಿಯ ಸ್ವರೂಪವನ್ನು ಕೇಳುತ್ತಾನೆ. ಯಮದೇವರು ಅವುಗಳನ್ನು ನೀಡಿ ಸ್ವರ್ಗ್ಯಾಗ್ನಿಯು ನಾಚಿಕೇತಾಗ್ನಿಯೆಂದೆ ಪ್ರಸಿದ್ಧವಾಗುವಂತೆ ಅನುಗ್ರಹಿಸುವರು. ಮೂರನೆಯ ವರವನ್ನಾಗಿ ನಚಿಕೇತನು ಮುಕ್ತಿಯಲ್ಲಿ ಭಗವಂತನ ನಿಯಾಮಕತ್ವದ ಸ್ವರೂಪವನ್ನು ತಿಳಿಯ ಬಯಸುವನು. ಅದು ತುಂಬಾ ರಹಸ್ಯವೆಂದೂ ಅದರ ಬದಲು ಬೇರಾವುದೇ ಭೋಗಭಾಗ್ಯವನ್ನು ಬೇಕಾದರೆ ನೀಡುವೆನು ಎಂಬುದಾಗಿ ಯಮದೇವರು ನುಡಿಯುವರು. ಅಂತಹ ಯಾವುದೇ ಪ್ರಲೋಭನೆಗೂ ಒಳಗಾಗದ ನಚಿಕೇತನು ಅವುಗಳೆಲ್ಲಾ ಅಸಾರ ತನಗೆ ಅವುಗಳು ಬೇಕಿಲ್ಲ. ಮುಕ್ತಿಯಲ್ಲಿನ ಭಗವಂತನ ನಿಯಾಮಕತ್ವದ ಪರಿಯನ್ನೇ ತಿಳಿಸಬೇಕು ಎಂದು ಹಠ ಹಿಡಿಯುತ್ತಾನೆ. ಆಗ ಯಮದೇವರು ಐಹಿಕ ಸುಖಕ್ಕೆ ಸಾಧನವಾಗುವ ಪ್ರೇಯಸ್ಸನ್ನು ಬಯಸದೆ ಪಾರಮಾರ್ಥಿಕಸುಖಸಾಧನವಾದ ಶ್ರೇಯಸ್ಸನ್ನೇ ಬಯಸಿರುವಿ ಎಂಬುದಾಗಿ ಅವನನ್ನು ಪ್ರಶಂಸಿಸಿ ಭಗವತ್ಸ್ವರೂಪದ ಬಗ್ಗೆ ಉಪದೇಶವನ್ನು ನೀಡುವರು. ಭಗವಂತನು ಅನಂತಕಲ್ಯಾಣಗುಣನಿಧಿ, ಅಣುಗಳಿಗಿಂತ ಅಣು, ಮಹತ್ತಿಗಿಂತ ಮಹತ್ತು, ಸರ್ವತಂತ್ರಸ್ವತಂತ್ರ ಅವನಿಗೂ ಅವನ ಗುಣರೂಪಕ್ರಿಯಾದಿಗಳಿಗೂ ಎಷ್ಟೂ ಭೇದವಿರುವುದಿಲ್ಲ. ಅವನು ಸ್ವಗತಬೇಧ ವಿವರ್ಜಿತ, ಪರಮನಿತ್ಯ, ಪರಮಚೇತನ, ಸ್ವಪ್ರಕಾಶ; ಅವನನ್ನು ಸರಿಯಾಗಿ ತಿಳಿದು ಭಕ್ತಿಮಾಡುವವನು ಮುಕ್ತಿಯನ್ನು, ತಪ್ಪಾಗಿ ತಿಳಿದವನು ನಿತ್ಯನರಕವನ್ನು ಹೊಂದುವನು ಎಂಬುದು ಅವರ ಉಪದೇಶದ ಸಾರ. ಶ್ರಾದ್ಧಕಾಲದಲ್ಲಿ ಇದರ ಪಠನೆ ವಿಶೇಷವಾಗಿ ಪಿತೃಗಳಿಗೆ ತೃಪ್ತಿಕರ.

ಭಗವದ್ಗೀತೆಯ ಅನೇಕ ಶ್ಲೋಕಗಳು ಈ ಉಪನಿಷತ್ತಿನ ಶ್ಲೋಕಗಳ ರೂಪಾಂತರದಂತಿವೆ. ಜಗದ್ವೃಕ್ಷದ ಪರಿಕಲ್ಪನೆಯೂ ಇದರಲ್ಲಿದೆ. ಇದರಲ್ಲಿ ಬರುವ ನಚಿಕೇತನ ಮೂರನೆಯ ಪ್ರಶ್ನೆಯನ್ನು ಇತರರು ಮರಣಾನಂತರ ಜೀವನು ಇರುವನೋ ಇಲ್ಲವೋ ಎಂಬರ್ಥದಲ್ಲಿ ನಿರೂಪಿಸುವರು. ಆದರೆ ಸ್ವತಃ ದೇಹ ತೊರೆದು ಯಮಲೋಕಕ್ಕೆ ತೆರಳಿದ ನಚಿಕೇತನಿಗೆ ಆ ಸಂಶಯ ಎಂತು ಬಂದೀತು? ಎಂಬುದಾಗಿ ಶ್ರೀಮದಾಚಾರ್ಯರು ಅದನ್ನು ನಿರಾಕರಿಸಿರುವರು. ಇದರಲ್ಲಿನ ನೇಹ ನಾನಾಸ್ತಿ ಕಿಂಚನ ಎಂಬ ಅದ್ವೈತ ಪರವೆಂದು ತೋರುವ ಶೃತಿಯು ವಾಸ್ತವವಾಗಿ ಪರಮಾತ್ಮನ ಸ್ವಗತಬೇಧವಿವರ್ಜಿತತ್ವವನ್ನು ಪ್ರತಿಪಾದಿಸುವದು ಎಂಬುದಾಗಿ ಸಾಧಿಸಿ ತೋರಿಸಿರುವರು.

# ಷಟ್ಪ್ರಶ್ನೋಪನಿಷದ್ಭಾಷ್ಯ

ಷಟ್ಪ್ರಶ್ನೋಪನಿಷತ್ತು ಅಥರ್ವವೇದದ ಪಿಪ್ಪಲಾದ ಶಾಖೆಗೆ ಸೇರಿದ ಉಪನಿಷತ್ತು. ಪಿಪ್ಪಲಾದ ಮೊದಲಾದವರು ಇದಕ್ಕೆ ಋಷಿಗಳು. ವಾಸುದೇವ ರೂಪಿ ಶ್ರೀಹರಿಯು ಇದರ ಪ್ರತಿಪಾದ್ಯ ದೇವತೆ.

ಕಬಂಧಿ ಕಾತ್ಯಾಯನ, ಭಾರ್ಗವ ವೈದರ್ಭಿ, ಕೌಸಲ್ಯ ಅಶ್ವಲಾಯನ, ಸೌರ್ಯಾಯಣಿ ಗಾರ್ಗ್ಯ, ಶೈಬ್ಯ ಸತ್ಯಕಾಮ ಮತ್ತು ಸುಕೇಶಾ ಭಾರದ್ವಾಜ ಎಂಬ ಆರು ಜನ ಮುನಿಗಳು ವಿಶೇಷ ಬ್ರಹ್ಮಜಿಜ್ಞಾಸೆಯನ್ನು ಬಯಸಿ ಪಿಪ್ಪಲಾದ ಮುನಿಯ ಬಳಿಗೆ ತೆರಳುವದು ಮತ್ತು ಅವರ ಅಪ್ಪಣೆಯಂತೆ ಒಂದು ವರ್ಷಕಾಲ ಗುರುಕುಲವಾಸ ಪೂರೈಸಿ ಪ್ರತಿಯೊಬ್ಬರೂ ಒಂದೊಂದು ಪ್ರಶ್ನೆಯನ್ನು ಕೇಳಿ ಅವರಿಂದ ಸಮರ್ಪಕ ಉತ್ತರವನ್ನು ಪಡೆದುಕೊಳ್ಳುವದು ಈ ಉಪನಿಷತ್ತಿನ ಸಂದರ್ಭ.

1) ಪ್ರಜೆಗಳೆಲ್ಲ ಜನಿಸುವದು ಯಾರಿಂದ?

2) ಪ್ರಜೆಗಳನ್ನು ಪಾಲಿಸುವವರು ಎಷ್ಟು ಜನ? ಅವರಿಗೆ ಜ್ಞಾನದಾಯಕರಾರು? ಅವರಲ್ಲಿ ಶ್ರೇಷ್ಠರಾರು?

3) ಮುಖ್ಯಪ್ರಾಣನು ಶರೀರದಲ್ಲಿ ಎಂತು ನೆಲೆಸಿರುವನು? ಅವನಿಗೆ ನಿಯಾಮಕರಾರು?

4) ಸ್ವಪ್ನ ಸುಷುಪ್ತಿಗಳ ಸ್ವರೂಪ ಎಂತಹದು? ಅವುಗಳಲ್ಲಿ ಯಾರು ಎಚ್ಚತ್ತಿರುವರು? ಸುಷುಪ್ತಿಯಲ್ಲಿನ ಸುಖಾನುಭವದ ಸ್ವರೂಪ ಎಂತಹುದು?

5) ಮರಣಕಾಲದವರೆಗೂ ಓಂಕಾರವನ್ನು ಧ್ಯಾನಿಸುವವನು ಎಂತಹ ಲೋಕವನ್ನು ಪಡೆಯುವನು?

6) ಷೋಡಶಕಲ ಪುರುಷನಾರು?

ಇವು ಕ್ರಮವಾಗಿ ಅವರು ಕೇಳಿದ ಪ್ರಶ್ನೆಗಳು. ಇಂತಹ ಮೌಲಿಕವಾದ ಆರು ಪ್ರಶ್ನೆಗಳಿಗೆ ಉತ್ತರ ನೀಡುವದರಿಂದ ಇದು ಷಟ್ಪ್ರಶ್ನೋಪನಿಷತ್ ಎನಿಸಿದೆ.

1) ಭಗವಂತನು ಸೃಷ್ಟಿಯ ಪ್ರಾರಂಭದಲ್ಲಿ ರಯಿ ಎಂಬ ಭಾರತಿಯನ್ನೂ ಪ್ರಾಣನೆಂದು ವಾಯುದೇವರನ್ನೂ ಸೃಷ್ಟಿಸಿ ಅವರಿಂದ ಸೃಷ್ಟಿಯನ್ನು ಮುಂದುವರೆಸಿದನು.

2) ತತ್ತ್ವಾಭಿಮಾನಿ ದೇವತೆಗಳು ಪ್ರಜೆಗಳನ್ನು ಧರಿಸಿರುವವರು. ಜ್ಞಾನವನ್ನು ನೀಡುವವರೂ ಅವರೇ ಮುಖ್ಯಪ್ರಾಣನು ಅವರಲ್ಲೆಲ್ಲ ಶ್ರೇಷ್ಠನು.

3) ಮುಖ್ಯಪ್ರಾಣನು ಭಗವಂತನಿಂದ ಜನಿಸುವನು; ಅವನನ್ನೇ ಅವಲಂಬಿಸಿರುವನು. ಪ್ರಾಣಾಪಾನಾದಿ ರೂಪಗಳಿಂದ ಶರೀರದಲ್ಲಿ ನೆಲೆಸಿರುವನು.

4) ಜೀವನು ನಿದ್ರಿಸಿದಾಗ ಸ್ವಪ್ನಾವಸ್ಥೆಯಲ್ಲಿ ರುದ್ರದೇವರು ಎಚ್ಚೆತ್ತಿರುವರು ಸುಷುಪ್ತ್ಯವಸ್ಥೆಯಲ್ಲಿ ಪ್ರಾಣದೇವರು ಮಾತ್ರ ವ್ಯಾಪಾರ ಮಾಡುವರು. ಭಗವಂತನಿಂದಲೇ ಜೀವರಿಗೆ ಅವರವರ ಸ್ವರೂಪ ಸುಖದ ಅನುಭವ ಲಭಿಸುವದು.

5) ಜೀವನಪೂರ್ತಿ ಓಂಕಾರವನ್ನು ಸಮಗ್ರವಾಗಿ ಚಿಂತಿಸುವವನು ಬ್ರಹ್ಮಲೋಕವನ್ನೇ ಪಡೆಯುವರು.

6) ಷೋಡಶಕಲೆಗಳಿಂದ ಕೂಡಿದ ಪುರುಷನನ್ನು ನಿಯಮನ ಮಾಡುವವನು ಪರಮಪುರುಷನಾದ ಶ್ರೀಹರಿ.

ಇವು ಆರು ಪ್ರಶ್ನೆಗಳಿಗೆ ಅವರು ನೀಡಿದ ಉತ್ತರಗಳ ಸಾರಸಂಗ್ರಹ.

## ಆಥರ್ವಣೋಪನಿಷದ್ಭಾಷ್ಯ

ಮುಂಡಕೋಪನಿಷತ್ ಎಂಬುದಾಗಿಯೂ ಪ್ರಸಿದ್ಧವಾಗಿರುವ ಆಥರ್ವಣೋಪನಿಷತ್ ಅಥರ್ವವೇದಕ್ಕೆ ಸೇರಿದೆ.

ಶ್ರೀಮದಾಚಾರ್ಯರು ಇದಕ್ಕೆ ಬರೆದಿರುವ ಭಾಷ್ಯದ ಸಾರ ಹೀಗಿದೆ: ಬ್ರಹ್ಮದೇವರು ವೈವಸ್ವತಮನ್ವಂತರದ ಪ್ರಾರಂಭದಲ್ಲಿ ತಮ್ಮ ಜ್ಯೇಷ್ಠಪುತ್ರ ಅಥರ್ವಮುನಿಗೆ ನೀಡಿದ ಉಪದೇಶವೇ ಈ ಉಪನಿಷತ್ತು. ಪರಾ ಮತ್ತು ಅಪರಾ ಎಂಬುದಾಗಿ ವಿದ್ಯೆ ಎರಡು ಬಗೆಯಾಗಿದೆ. ಅಕ್ಷರನಾದ ಭಗವಂತನನ್ನು ತಿಳಿಸಿಕೊಡುವ ವಿದ್ಯೆ ಪರವಿದ್ಯೆ. ಹಾಗಲ್ಲದ್ದು ಅಪರ ವಿದ್ಯೆ. ಋಗಾದಿ ವೇದಗಳು ಶಿಕ್ಷಾದಿ ವೇದಾಂಗಗಳು ಸಹ ಮುಖ್ಯವಾಗಿ ಭಗವಂತನನ್ನೇ ಪ್ರತಿಪಾದಿಸುವದರಿಂದ ಅವೆಲ್ಲ ಪರವಿದ್ಯೆಯೇ ಆಗಿವೆ. ಆದರೆ ಅವುಗಳಲ್ಲಿ ಭಗವತ್ಪರವಲ್ಲದ ವಿಚಾರವನ್ನಷ್ಟೇ ಕಾಣತೊಡಗಿದಾಗ ಅವುಗಳಿಂದ ಬರುವ ವಿದ್ಯೆಯೂ ಅಪರ ವಿದ್ಯೆಯೇ ಆಗುತ್ತದೆ. ಎಂದರೆ ವೇದಗಳು ಮುಖ್ಯವಾಗಿ ಭಗವತ್ಪ್ರತಿಪಾದಕವೇ

ಆಗಿರುವದರಿಂದ ಅವುಗಳಲ್ಲಿ ಸದಾ ಹರಿಸರ್ವೋತ್ತಮತ್ವಾದಿ ಪ್ರಮೇಯಗಳನ್ನೇ ಕಾಣಬೇಕು. ಅದಕ್ಕೆ ಪೋಷಕವಾಗಿ ಇತರ ವಿಚಾರಗಳನ್ನು ಅರ್ಥಮಾಡಿಕೊಳ್ಳ ಬಹುದು. ಇಲ್ಲವಾದಲ್ಲಿ ಅವುಗಳು ಸಹ ಅಪರ ವಿದ್ಯೆಗಳೇ ಆಗಿ ಅಗ್ರಾಹ್ಯವಾಗಿ ಬಿಡುವವು. ಕೃತಯುಗದಲ್ಲಿ ವೇದಗಳನ್ನು ಇಷ್ಟು ಪರಿಸ್ಫುಟವಾಗಿ ವಿಷ್ಣುಸರ್ವೋತ್ತಮತ್ವ ಪ್ರತಿಪಾದಕವಾಗಿಯೇ ಜನರು ಅರ್ಥ ಮಾಡಿಕೊಳ್ಳು ತ್ತಿದ್ದರು. ಅನಂತರದ ಯುಗಗಳಲ್ಲಿ ಅನೇಕರು ಭಗವತ್ಪರವಲ್ಲದ ರೀತಿಯಲ್ಲಿ ಅವುಗಳನ್ನು ಅರ್ಥ ಮಾಡಿಕೊಳ್ಳುವ ಪರಿಪಾಠವು ಬೆಳೆದು ಅವುಗಳ ಮೂಲ ಉದ್ದೇಶ ಮರೆಯಾಗುವಂತಾಯ್ತು.

ಅಕ್ಷರ ಎಂದರೆ ಭಗವಂತನೇ; ಅವನೇ ಜಗಜ್ಜನ್ಮಾದಿ ಕಾರಣ; ಸರ್ವಜ್ಞ; ಸರ್ವಶಕ್ತ; ಸರ್ವವ್ಯಾಪ್ತ ಹಾಗೂ ಜ್ಞಾನಾನಂದಮಯಶರೀರ ಅವನನ್ನು ಅರಿಯದವರು ವೇದ ಹಿಡಿದೂ ಅವಿದ್ಯೆಯಿಂದ ಹೊರಬಾರದಾಗುವರು. ತಮ್ಮನ್ನು ಪಂಡಿತರೆಂದು ಭ್ರಮಿಸಿ ಕುರುಡನ ಹಿಂದೆ ಸಾಗುವ ಕುರುಡರಂತೆ ವಿನಾಶ ಹೊಂದುವರು. ಭೌತಿಕ ಸುಖಗಳ ಇತಿ ಮಿತಿಗಳನ್ನು ಅರಿತು ಅವುಗಳಲ್ಲಿ ವೈರಾಗ್ಯ ಹೊಂದಿ ಮುಮುಕ್ಷುವು ಬ್ರಹ್ಮಜ್ಞಾನವನ್ನು ಸಂಪಾದಿಸಿಕೊಳ್ಳಬೇಕು.

ಪ್ರಣವವೇ ಧನುಸ್ಸು, ಮನಸ್ಸೇ ಬಾಣ, ಬ್ರಹ್ಮನೇ ಸಾಧಿಸಬೇಕಾದ ಗುರಿ; ಎಚ್ಚರ ತಪ್ಪದೇ ಬಾಣವನ್ನು ಪ್ರಯೋಗಿಸಿ ಗುರಿಯನ್ನು ಸಾಧಿಸಬೇಕು. ಭಗವಂತನನ್ನು ಪೂರ್ಣ ಎಂದು ಉಪಾಸನೆ ಮಾಡಿ ಅವನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಆಗ ಮುಕ್ತಿಯು ಲಭಿಸುವದು.

ಜೀವಾತ್ಮ ಮತ್ತು ಪರಮಾತ್ಮರು ಅತ್ಯಂತ ಭಿನ್ನರು. ಒಂದೇ ದೇಹದಲ್ಲಿ ಜೀವನೊಂದಿಗೆ ಅವನ ಅಂತರ್ಯಾಮಿಯಾಗಿ ನೆಲೆಸಿರುವನು. ಜೀವನ ಸುಖ ದುಃಖಗಳು ಎಂದೂ ಅವನಿಗೆ ತಟ್ಟಲಾರವು. ಮುಕ್ತಿಯಲ್ಲಿ ಜೀವನಿಗೆ ಪ್ರಾಕೃತ ದೇಹವು ತೊಲಗಿ ಸ್ವರೂಪ ದೇಹವು ವ್ಯಕ್ತವಾಗುವದು. ಪ್ರಾಕೃತ ದೇಹದ ಷೋಡಶಕಲೆಗಳ ಅಭಿಮಾನಿ ದೇವತೆಗಳು ತಮ್ಮ ತಮ್ಮ ಮೂಲರೂಪಗಳಲ್ಲಿ ಸೇರಿಕೊಳ್ಳುವರು. ಹೀಗೆ ಪರಬ್ರಹ್ಮನನ್ನು ತಿಳಿದವರು ಮುಕ್ತಿಯಲ್ಲಿ ತನ್ನ ಸ್ವರೂಪ ಯೋಗ್ಯತೆಗೆ ಅನುಗುಣವಾಗಿಯೇ ಶಾಶ್ವತವಾದ ಪೂರ್ಣಸುಖವನ್ನು ಪಡೆಯುವನು. ಇಂತಹ ಸಾಧಕನ ವಂಶದಲ್ಲಿಯೂ ಸಾಮಾನ್ಯವಾಗಿ ಬ್ರಹ್ಮಜ್ಞಾನಿಗಳೇ ಜನಿಸುವರು.

ಈ ಉಪನಿಷತ್‌ನಲ್ಲಿಯ "ಪರೇಽವ್ಯಯೇ ಸರ್ವ ಏಕೀಭವಂತೀ" ಮತ್ತು

"ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ" ಎಂಬ ವಾಕ್ಯಗಳು ಅಭೇದ ಬೋಧಕವೆಂಬಂತೆ ತೋರುತ್ತವೆ. ಶ್ರೀಮದಾಚಾರ್ಯರು ಅವುಗಳ ಆಂತರ್ಯವನ್ನು ವಿವರಿಸುತ್ತಾ ಮುಕ್ತಿಯಲ್ಲಿ ಮುಕ್ತಜೀವರು ಭಗವಂತನೊಂದಿಗೆ ಒಟ್ಟಾಗಿ ಇರುವರು. ಎಂದರೆ ಅವನಿಗೆ ವಿರೋಧವಾಗದ ರೀತಿಯಲ್ಲಿ ಅವನ ಲೋಕದಲ್ಲಿ ಒಂದಾಗಿ ಇರುವರು ಎಂಬುದಾಗಿಯೂ, ಪರಬ್ರಹ್ಮನನ್ನು ತಿಳಿದ ಮೇಲೂ ಜೀವನು ತನ್ನ ಯೋಗ್ಯತೆಗೆ ಅನುಗುಣವಾಗಿ ಮಾತ್ರವೇ ಪೂರ್ಣನಾಗುವನು ಎಂಬುದಾಗಿಯೂ ಸಪ್ರಮಾಣವಾಗಿ ಪ್ರತಿಪಾದಿಸಿರುವರು. ಮುಖ್ಯಪ್ರಾಣನು ಭಗವಂತನ ಪ್ರಧಾನಧಾಮ. ಆದ್ದರಿಂದ ಪ್ರಾಣನ ಮೂಲಕ ಆರಾಧಿಸಿಯೇ ಸಾಧಕನು ಶ್ರೀಹರಿಯನ್ನು ಪ್ರಸನ್ನಗೊಳಿಸಿ ಸದ್ಗತಿ ಪಡೆಯಬೇಕು ಎಂಬ ಅತ್ಯಂತ ಮುಖ್ಯ ಪ್ರಮೇಯವೂ ಈ ಉಪನಿಷತ್ತಿನಲ್ಲಿ ಬಂದಿದೆ.

# ಮಾಂಡೂಕೋಪನಿಷದ್ಭಾಷ್ಯ

'ಮಾಂಡೂಕ' ಅಥರ್ವವೇದಕ್ಕೆ ಸೇರಿದ ಉಪನಿಷತ್ತು. ಮಂಡೂಕರೂಪಿ ವರುಣನು ಇದಕ್ಕೆ ಋಷಿ. ಆದ್ದರಿಂದ ಇದಕ್ಕೆ 'ಮಾಂಡೂಕೋಪನಿಷತ್' ಎಂದು ಹೆಸರು. ವಿಶ್ವ, ತೈಜಸ, ಪ್ರಾಜ್ಞ ಮತ್ತು ತುರೀಯ ಎಂಬ ಭಗವದ್ರೂಪಗಳು ಇದರ ಪ್ರತಿಪಾದ್ಯ ದೇವತೆಗಳು.

ಓಂಕಾರ ವಾಚ್ಯನಾದವನು ಅಕ್ಷರನಾಮಕ ಪರಮಾತ್ಮ. ಅವನು ಭೂತ, ವರ್ತಮಾನ ಮತ್ತು ಭವಿಷ್ಯತ್ ಎಂಬ ಮೂರು ಕಾಲಗಳಲ್ಲೂ ಒಂದೇ ತೆರನಾಗಿ ಪರಿಪೂರ್ಣನಾಗಿದ್ದು 'ಓಂ' ಎನ್ನಿಸಿರುವನು. ಅವನು ಎಲ್ಲೆಡೆಗಳಲ್ಲಿಯೂ ಪರಿಪೂರ್ಣ. ಲಕ್ಷ್ಮೀ ಬ್ರಹ್ಮಾದಿ ಸಕಲರಿಗೂ ಅವನೇ ಅಂತರ್ನಿಯಾಮಕನಾದ ಸ್ವಾಮಿ. ಆತನ ಅವಸ್ಥಾಪ್ರೇರಕರೂಪಗಳು ವಿಶ್ವ, ತೈಜಸ, ಪ್ರಾಜ್ಞ ಮತ್ತು ತುರೀಯ ಎಂಬುದಾಗಿ ನಾಲ್ಕು ಬಗೆ. ಇವು ಕ್ರಮವಾಗಿ ಜಾಗ್ರತ್, ಸ್ವಪ್ನ, ಸುಷುಪ್ತಿ ಮತ್ತು ಮುಕ್ತಿ ಎಂಬ ನಾಲ್ಕು ಅವಸ್ಥೆಗಳಿಗೆ ನಿಯಾಮಕ. ವಿಶ್ವ ಮತ್ತು ತೈಜಸಗಳು ಹತ್ತೊಂಬತ್ತು ಮುಖಗಳ ರೂಪಗಳು. ಅವುಗಳ ಮಧ್ಯದ ಮುಖ ಗಜಾಕಾರದ್ದು; ಉಳಿದವುಗಳು ಮಾನವಾಕಾರ. ಇವುಗಳ ಉಪಾಸನೆಯಿಂದಲೇ ವಿನಾಯಕ ಗಜಮುಖನಾದದ್ದು. ಇವುಗಳೊಂದಿಗೆ ಪ್ರಾಜ್ಞರೂಪವನ್ನೂ ಉಪಾಸನೆ ಮಾಡಿ

ಇಂದ್ರನು ಇಂದ್ರ ಪದವಿ ಪಡೆದ: ವಿಶ್ವಾದಿ ನಾಲ್ಕು ರೂಪಗಳ ಉಪಾಸನೆಯಿಂದಾಗಿ ರುದ್ರದೇವರಿಗೆ ರುದ್ರಪದವಿ ಲಭಿಸಿದೆ.

ವಿಶ್ವನು ಬಲಗಣ್ಣಿನಲ್ಲೂ, ತೈಜಸನು ಕಂಠಪ್ರದೇಶದಲ್ಲೂ, ಪ್ರಾಜ್ಞನು ಹೃದಯಕಮಲದ ತುದಿಯಲ್ಲಿಯೂ ನೆಲೆಸಿರುವರು. ವಿಶ್ವನು ಜಾಗ್ರದವಸ್ಥೆಯನ್ನಿತ್ತು ಹೊರಗಿನ ಪದಾರ್ಥಗಳ ಅರಿವನ್ನಿತ್ತರೆ, ತೈಜಸನು ಸ್ವಪ್ನವನ್ನು ಕಾಣಿಸುವನು, ಪ್ರಾಜ್ಞನು ಸುಷುಪ್ತಿಯಲ್ಲಿ ಸಾಧಕ ಜೀವನಿಗೆ ಸ್ವರೂಪಸುಖದ ಅನುಭವವನ್ನು ತಂದುಕೊಡುವನು. ತುರೀಯ ಮುಕ್ತಿಯಲ್ಲಿ ಆನಂದಾನುಭವ ನೀಡುವ ರೂಪ.

ಜಗತ್ಸೃಷ್ಟಿಯ ಬಗ್ಗೆ ಅನೇಕರು ತಪ್ಪುಕಲ್ಪನೆ ಹೊಂದಿರುವರು. ಕೆಲವರು ಭಗವಂತನೇ ಜಗತ್ತಾಗಿ ಪರಿಣಾಮ ಹೊಂದಿರುವನು ಎಂದರೆ, ಮತ್ತೆ ಕೆಲವರು ಜಗತ್ತೆಲ್ಲಾ ಸ್ವಪ್ನ ಮಾಯೆಗಳಂತೆ ಭ್ರಮೆ ಎನ್ನುವರು. ಕೆಲವರ ಪ್ರಕಾರ ಇದಕ್ಕೆ ಕಾಲ ಕಾರಣ; ಇನ್ನು ಕೆಲವರ ಪ್ರಕಾರ ರುದ್ರಾದಿದೇವತೆಗಳು ಕಾರಣ. ವಾಸ್ತವವಾಗಿ ಭಗವಂತನಾದ ಶ್ರೀಹರಿಯೇ ಇದಕ್ಕೆಲ್ಲ ನಿಮಿತ್ತಕಾರಣ.

ಭಗವಂತನು ಜಗತ್ತನ್ನು ಸೃಷ್ಟಿಸಿರುವುದು ತನ್ನ ಭೋಗಕ್ಕಾಗಿ ಎಂದು ಕೆಲವರ ಭಾವನೆ; ಮತ್ತೆ ಕೆಲವರು ತನ್ನ ವಿಲಾಸಕ್ಕಾಗಿ ಅವನು ಜಗತ್ತನ್ನು ಸೃಷ್ಟಿಸಿರುವನು ಎನ್ನುವರು. ಇಂತಹ ಸೃಷ್ಟ್ಯಾದಿಗಳು ಅವನಿಗೆ ಸಹಜವಾದ ಲೀಲೆ; ಅವನಿಗೆ ಇದರಿಂದ ಏನಾಗಬೇಕಿದೆ! ಎಂಬುದು ತತ್ತ್ವ.

ತುರೀಯನು ಮುಕ್ತಿಯಲ್ಲಿ ಆನಂದಪ್ರದ; ಅವನು ದೇಹದಲ್ಲಿ ಮೂಗಿನ ತುದಿಯಿಂದ ಹನ್ನೆರಡುಅಂಗುಲಗಳ ಮೇಲೆ ಶಿರಸ್ಸಿನ ಮಧ್ಯಭಾಗದಲ್ಲಿ ನೆಲೆಸಿರುವನು. ಅವನು ನಿತ್ಯವ್ಯವಹಾರದಲ್ಲಿ ಅಗೋಚರ. ಈ ಸಂಸಾರ ಭಗವದಿಚ್ಛೆಗೆ ಅಧೀನವಾಗಿರುವ ಅವಿದ್ಯೆಯ ಪರಿಣಾಮ. ಆದ್ದರಿಂದ ಅವನ ಅನುಗ್ರಹದಿಂದಲೇ ಪರಿಹಾರವಾಗುವುದು.

ಓಂಕಾರದಲ್ಲಿನ ಅ, ಉ ಮ ಎಂಬ ಮೂರು ಅಕ್ಷರಗಳಿಂದ ವಿಶ್ವ, ತೈಜಸ, ಪ್ರಾಜ್ಞರು ಪ್ರತಿಪಾದ್ಯರಾಗಿದ್ದರೆ, ಅದರಲ್ಲಿನ ನಾದವೆಂಬ ಅಕ್ಷರದಿಂದ ತುರೀಯನು ಪ್ರತಿಪಾದ್ಯನಾಗಿರುವನು. ಹೀಗೆ ಪ್ರಣವವನ್ನು ಉಪಾಸನೆ ಮಾಡುವವನಿಗೆ ಎಂದೂ ಸಂಸಾರದ ಭೀತಿ ಇರುವುದಿಲ್ಲ. ಓಂಕಾರವನ್ನು ಹೀಗೆ ಸಮಗ್ರ ಅರಿತವನೇ ಮುನಿ, ಸ್ಥಿತಪ್ರಜ್ಞ.

ಮಾಂಡೂಕೋಪನಿಷತ್ತಿನಲ್ಲಿನ ಅನೇಕ ಮಂತ್ರಗಳನ್ನು ವರುಣ ಕಂಡ

ಬ್ರಹ್ಮದೃಷ್ಟವಾದ ಶ್ರುತಿವಾಕ್ಯಗಳು ಎಂಬುದಾಗಿ ಆಚಾರ್ಯರು ಸ್ಪಷ್ಟಪಡಿಸಿರುವರು.

**ಪ್ರಮಾಣಸ್ಯ ಪ್ರಮಾಣಂ ಚ ಬಲವದ್ವಿದ್ಯತೇ ಮುನೇ ।**
**ಬ್ರಹ್ಮದೃಷ್ಟಾನ್ ಯತೋ ಮಂತ್ರಾನ್ ಪ್ರಮಾಣಂ ಸಲಿಲೇಶ್ವರಃ ।**
**ಅತ್ರ ಶ್ಲೋಕಾ ಭವಂತೀತಿ ಚಕಾರೈವ ಪೃಥಕ್ ಪೃಥಕ್ ॥**

—ಎಂದು ಗರುಡಪ್ರಮಾಣದ ಆಧಾರವನ್ನಿತ್ತು ತೋರಿಸಿರುವರು.

ಮಾಂಡೂಕೋಪನಿಷತ್ತಿನ ಈ ಮಂತ್ರಗಳು ಗೌಡಪಾದರ ಕಾರಿಕೆಗಳು ಎಂದು ಕೆಲವು ಆಧುನಿಕರ ವಾದ. ಇವರ ವಾದಕ್ಕೆ ಆಚಾರ್ಯರ ಮಾತುಗಳು ಉತ್ತರರೂಪವಾಗಿವೆ ಎಂಬುದು ಗಮನಾರ್ಹ. ಇವುಗಳಲ್ಲಿನ 'ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ'' ಎಂಬ ಮಾತನ್ನು ಶಂಕರಾಚಾರ್ಯರೇ ತಮ್ಮ 'ವಿವೇಕ ಚೂಡಾಮಣಿ'ಯಲ್ಲಿ ಶ್ರುತಿವಾಕ್ಯ ಎಂಬುದಾಗಿಯೇ ಉದಾಹರಿಸಿರುವರು:

**ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ।**
**ಇತಿ ಬ್ರೂತೇ ಶ್ರುತಿಃ ಸಾಕ್ಷಾತ್ ಸುಷುಪ್ತಾವನುಭೂಯತೇ ॥ ಶ್ಲೋ 46**

'ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ' ಎಂಬ ವಾಕ್ಯವನ್ನು ಎಲ್ಲ ಆಚಾರ್ಯರೂ ಶ್ರುತಿವಾಕ್ಯವೆಂದೇ ಉದಾಹರಿಸುವುದನ್ನು ಇಲ್ಲಿ ಗಮನಿಸಬಹುದು. ಎಂದರೆ ಮೂಲತಃ ಉಪನಿಷತ್ತಿನಲ್ಲಿನ ಬ್ರಹ್ಮದೃಷ್ಟ ಮಂತ್ರಗಳನ್ನೇ ಗೌಡಪಾದರು ತಮ್ಮ ಕೃತಿಯಲ್ಲಿ ಉಪಯೋಗಿಸಿಕೊಂಡರು, ಅದನ್ನು ಕೆಲವರು ಅವರ ಕಾರಿಕೆಗಳೆಂದೇ ಭ್ರಮಿಸಿದರು ಎಂಬುದು ಸ್ಪಷ್ಟ.

ಹೀಗೆ ಮಧ್ವಭಾಷ್ಯವೂ ಉಪನಿಷತ್ಸ್ವರೂಪ ನಿರ್ಣಯದ ವಿಷಯದಲ್ಲೂ ಅಪೂರ್ವ ರೀತಿಯಲ್ಲಿ ನೆರವಾಗುವುದು.

# ತೈತ್ತಿರಿಯೋಪನಿಷದ್ಭಾಷ್ಯ

ತೈತ್ತೀರಿಯೋಪನಿಷತ್ತು ಕೃಷ್ಣ ಯಜುರ್ವೇದದ ತೈತ್ತೀರಿಯಾರಣ್ಯಕಕ್ಕೆ ಸೇರಿದೆ. ವಿಷ್ಣು, ಬ್ರಹ್ಮ, ವರುಣ ಮತ್ತು ಭೃಗು ಇದರ ಋಷಿಗಳು. ಸೂರ್ಯ ಮಂಡಲಸ್ಥನಾದ ಶ್ರೀ ಹರಿಯ ನಾರಾಯಣಾದಿ ಪಂಚರೂಪಗಳು ಇದರ ಪ್ರತಿಪಾದ್ಯ ದೇವತೆಗಳು. ಇದರಲ್ಲಿ ಶಿಕ್ಷಾವಲ್ಲಿ, ಬ್ರಹ್ಮವಲ್ಲಿ ಮತ್ತು ಭೃಗುವಲ್ಲಿ ಎಂಬ ಮೂರು ಅಧ್ಯಾಯಗಳಿವೆ. ಶಿಕ್ಷಾವಲ್ಲಿಯು ಶಾಂತಿಮಂತ್ರದಿಂದ ಪ್ರಾರಂಭವಾಗಿ

ವರ್ಣಾದಿಗಳನ್ನೂ, ಲೋಕ ಮೊದಲಾದ ಐದು ಅಧಿಕರಣಗಳನ್ನೂ ನಿರೂಪಿಸುತ್ತವೆ. ಸಾಧಕನು ತತ್ತ್ವಜ್ಞಾನಪ್ರಾಪ್ತಿಗಾಗಿ ಕೈಗೊಳ್ಳಬೇಕಾದ ಮುಖ್ಯಸಾಧನವಾದ ಸ್ವಾಧ್ಯಾಯಪ್ರವಚನಗಳ ಸ್ವರೂಪ ಇಲ್ಲಿ ಹೃದಯಂಗಮವಾಗಿ ನಿರೂಪಿತವಾಗಿವೆ. ಅಧ್ಯಯನ ಪೂರೈಸಿದ ಶಿಷ್ಯನಿಗೆ "ಸತ್ಯಂ ವದ" "ಧರ್ಮಂ ಚರ" ಮೊದಲಾಗಿ ನೀಡುವ ಭವ್ಯ ಉಪದೇಶವಂತು ವಿಶ್ವವಿಖ್ಯಾತ.

ಬ್ರಹ್ಮವಲ್ಲಿಯು ಬ್ರಹ್ಮಜ್ಞಾನಿಯು ತನ್ನ ಹೃದಯದಲ್ಲಿ ನೆಲೆಸಿರುವ ಪರಬ್ರಹ್ಮನನ್ನು ಆರಾಧಿಸಿ ಮುಕ್ತಿಯನ್ನು ಪಡೆಯುವ ಬಗೆಯನ್ನು ನಿರೂಪಿಸುವುದು. ಭಗವಂತನು ಜಗತ್ತಿನ ಸೃಷ್ಟಿಯನ್ನು ಮಾಡಿ ಪ್ರತಿಯೊಂದು ದೇಹದೊಳಗೆ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಮತ್ತು ಆನಂದಮಯ ಎನ್ನಿಸುವ ನಾರಾಯಣಾದಿ ಪಂಚರೂಪಗಳಿಂದ ನೆಲೆಸಿರುವನು. ಅವನ ಆ ರೂಪಗಳನ್ನು ಅರಿತು ಆರಾಧಿಸಿದವನು ಮಾತ್ರವೇ ಮುಕ್ತಿಯನ್ನು ಪಡೆಯಬಹುದು. ಮುಕ್ತಿಯಲ್ಲಿ ಮಾನುಷಾನಂದದಿಂದ ಪ್ರಾರಂಭಿಸಿ ಚತುರ್ಮುಖ ಬ್ರಹ್ಮದೇವರ ಆನಂದದವರೆಗೆ ಎಲ್ಲವೂ ಯಥಾಯೋಗ್ಯವಾಗಿ ಪೂರ್ಣ; ಆದರೆ ಅವರಲ್ಲಿ ತಾರತಮ್ಯ ಇದ್ದೇ ಇರುವದು. ಇನ್ನು ಪರಬ್ರಹ್ಮನ ಆನಂದವನ್ನಂತು ಬಣ್ಣಿಸಲು ಅಸಾಧ್ಯ; ಮುಕ್ತಿಗೆ ಹೋದವನಿಗೆ ದುಃಖಗಳ ಪ್ರಸಕ್ತಿಯೇ ಇರುವುದಿಲ್ಲ.

ಭೃಗವಲ್ಲಿಯಲ್ಲಿ ಭೃಗುಮುನಿಯು ತನ್ನ ತಂದೆಯಾದ ವರುಣನ ಬಳಿಗೆ ಮತ್ತೆ ಮತ್ತೆ ತೆರಳಿ ಭಗವಂತನ ಸ್ವರೂಪವನ್ನು ತಿಳಿಯಲು ಮಾಡುವ ಪ್ರಯತ್ನದ ವಿವರಣೆ ಇದೆ. ಅವರು ಅನ್ನ, ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು ಮತ್ತು ವಾಕ್ ಇವು ಗಳನ್ನು ಬ್ರಹ್ಮನೆಂದು ಉಪದೇಶಿಸಿ ಸಕಲ ಪ್ರಾಣಿಗಳ ಹುಟ್ಟು, ಬದುಕು, ಮರಣ ಮತ್ತು ಮೋಕ್ಷ ಗಳಿಗೆ ಕಾರಣವಾದ ಪರವಸ್ತುವೇ ಭಗವಂತ ಎಂಬುದಾಗಿ ಅವನ ಲಕ್ಷಣವನ್ನು ತಿಳಿಸುತ್ತಾರೆ. ಅನಂತರ ಭೃಗುವು ಮತ್ತೆ ಮತ್ತೆ ತಪಸ್ಸು ಮಾಡಿ ಅನ್ನ, ತಪಸ್ಸು, ಮನಸ್ಸು, ವಿಜ್ಞಾನ ಮತ್ತು ಆನಂದ ಶಬ್ದವಾಚ್ಯವನ್ನಾಗಿ ಭಗವತ್ ತತ್ತ್ವ ವನ್ನು ಸಾಕ್ಷಾತ್ಕರಿಸಿಕೊಳ್ಳುವನು. ಬ್ರಹ್ಮವಿದ್ಯೆಯನ್ನು ಅರಿಯಲು ಬಯಸಿ ಬರುವ ಯೋಗ್ಯ ಜಿಜ್ಞಾಸುವನ್ನು ತಿರಸ್ಕರಿಸಬಾರದೆಂಬ ಮುಖ್ಯಸಂದೇಶವು ಈ ಭಾಗದಲ್ಲಿದೆ.

## ಐತರೇಯೋಪನಿಷದ್ಭಾಷ್ಯ

ದಶೋಪನಿಷತ್ತುಗಳಲ್ಲಿ ಋಗ್ವೇದಕ್ಕೆ ಸೇರಿದ ಏಕಮಾತ್ರ ಉಪನಿಷತ್ತು ಐತರೇಯೋಪನಿಷತ್ತು. ಮಹೈತರೇಯೋಪನಿಷತ್, ಬಹ್ವೃಚೋಪನಿಷತ್,

ಮಹಾಭೂತಿಶ್ರುತಿ ಎಂಬುದಾಗಿಯೂ ಇದು ಪ್ರಸಿದ್ಧ. ಆಚಾರ್ಯ ಶ್ರೀ ಮಧ್ವರಿಗೆ ಅತಿಪ್ರಿಯವಾದ ಉಪನಿಷತ್ತು ಎಂಬುದು ಇದರ ಮತ್ತೊಂದು ಮಹತ್ವ. ಅವರು ಅನೇಕ ಸಲ ಐತರೇಯಶ್ರುತಿಯ ಪ್ರವಚನ ನೀಡಿದ ಉಲ್ಲೇಖ ಸುಮಧ್ವ ವಿಜಯದಲ್ಲಿ ಬಂದಿದೆ (3/55, 6/1, 6/50, 16/16, 16/54). ಗುರುದಕ್ಷಿಣೆಯ ನೆಪದಲ್ಲಿ ತೋಟಂತಿಲ್ಲಾಯರಿಗೆ ಅವರು ಇದರ ರಹಸ್ಯಪ್ರಮೇಯಗಳನ್ನು ಉಪದೇಶಿಸಿದ ವಿವರ ಸುಮಧ್ವವಿಜಯದಲ್ಲಿದೆ (3/55). ಎಂದರೆ ಇದು ಆಚಾರ್ಯರ ಮೊದಲ ಭಾಷ್ಯ. ಇಂಥ ಗಹನ ಉಪನಿಷತ್ತಿಗೆ ವಿವರಣೆ ನೀಡಿದಾಗ ಅವರ ವಯಸ್ಸು ಇನ್ನೂ ಎಂಟರ ಆಸುಪಾಸಿನಲ್ಲಿತ್ತು! ಅವರು ಪೂರ್ಣಪ್ರಜ್ಞರೆಂಬುದನ್ನು ನಿರೂಪಿಸುವ ಅನೇಕ ಪ್ರಸಂಗಗಳಲ್ಲಿ ಇದೂ ಒಂದು.

ಐತರೇಯೋಪನಿಷತ್ ಋಗ್ವೇದದ ಐತರೇಯಾರಣ್ಯಕದ ದ್ವಿತಿಯಾರಣ್ಯಕದ ಏಳು ಅಧ್ಯಾಯಗಳನ್ನು ಮತ್ತು ತೃತೀಯಾರಣ್ಯಕದ ಎರಡು ಅಧ್ಯಾಯಗಳನ್ನು ಎಂದರೆ ಒಟ್ಟಾಗಿ ಒಂಬತ್ತು ಅಧ್ಯಾಯಗಳನ್ನು ಹೊಂದಿದೆ. ಪ್ರಧಾನವಾಗಿ ಗದ್ಯರೂಪದ ಈ ಉಪನಿಷತ್‌ನಲ್ಲಿಯ ಒಟ್ಟು ಖಂಡಗಳ ಸಂಖ್ಯೆ 38. ಶಂಕರಾಚಾರ್ಯರ ಐತರೇಯ ಭಾಷ್ಯವು ಎರಡನೇ ಆರಣ್ಯಕದ 4, 5 ಮತ್ತು 6ನೆಯ ಅಧ್ಯಾಯಗಳಿಗೆ ಮಾತ್ರ ಉಂಟು. ರಾಮಾನುಜರಂತೂ ಯಾವ ಉಪನಿಷತ್ತಿಗೂ ಭಾಷ್ಯ ರಚಿಸಿಲ್ಲವಾದ್ದರಿಂದ ಇದಕ್ಕೆ ಅವರ ಭಾಷ್ಯದ ಪ್ರಸಕ್ತಿಯೇ ಇಲ್ಲ.

ಸಮಗ್ರ ಉಪನಿಷತ್ತಿಗೆ ಮೊಟ್ಟ ಮೊದಲಿಗೆ ರಚಿತವಾದ ಭಾಷ್ಯ ಎಂಬುದು ಈ ಕೃತಿಯ ವಿಶೇಷ. ಎಂದರೆ ಮಧ್ವಭಾಷ್ಯಕ್ಕಿಂತ ಮುಂಚೆ, ಈ ಉಪನಿಷತ್ತಿನ ಸಮಗ್ರಸ್ವರೂಪದ ಪರಿಚಯವೇ ಇರಲಿಲ್ಲವೆಂದಾಯಿತು. ಆಚಾರ್ಯರು ತೋರಿಸಿದ ಉಪನಿಷತ್ತಿನ ಸ್ವರೂಪ ಅನಂತರ ಇತರರಿಗೂ ಗ್ರಾಹ್ಯವಾಯಿತೆನ್ನಲು ಇದರ ಮೇಲೆ ಅನಂತರ ರಚಿತವಾದ ಉಪನಿಷದ್ಬ್ರಹ್ಮಯೋಗಿ (ಅದ್ವೈತಪರ) ಮತ್ತು ರಂಗರಾಮಾನುಜ (ವಿಶಿಷ್ಟಾದ್ವೈತಪರ) ಭಾಷ್ಯಗಳು ಸಾಕ್ಷಿ. ಅವೆರಡರಲ್ಲೂ ಆಚಾರ್ಯರು ತೋರಿಸಿಕೊಟ್ಟಿರುವ 9 ಅಧ್ಯಾಯಗಳೂ ಗೃಹೀತವಾಗಿವೆ.

ಭಗವಂತನನ್ನು ಉಕ್ಥ, ಅರ್ಕ, ಬೃಹತ್ ಪವಮಾನ ಎಂಬುದಾಗಿ ಉಪಾಸನೆ ಮಾಡಬೇಕು. ಅವನ ಪ್ರಾಪ್ತಿಗೆ ಅವನ ಅನುಗ್ರಹವೇ ಸಾಧನೆ. ಅವನನ್ನು ಗೌರವಿಸದ ಪಿಶಾಚಿಗಳು, ರಾಕ್ಷಸರು ಮತ್ತು ಅಸುರರು ನಾಶ ಹೊಂದಿದರು. ಅವನಿಂದಲೇ ದೇವತೆಗಳು ಮೊದಲಾದ ಸಕಲರ ಸೃಷ್ಟಿ. ವಾಯುದೇವರು ಜೀವೋತ್ತಮರಾಗಿದ್ದು ಸಕಲಶರೀರಧಾರಕರಾಗಿರುವದರಿಂದ ಅವರೂ ಉಕ್ಥಶಬ್ದವಾಚ್ಯರಾಗಿರುವರು. ಸರ್ವಶಬ್ದಗಳೂ, ಸಕಲಶಾಸ್ತ್ರಗಳೂ, ಭಗವತ್ಪರ. ಸಮಸ್ತಋಷಿನಾಮಗಳು, ಸಮಸ್ತ

ದೇವತಾನಾಮಗಳು, ಸಕಲ ಛಂದೋನಾಮಗಳು, ಸಕಲ ವಸ್ತು ನಾಮಗಳು, ಒಟ್ಟಾಗಿ ಸರ್ವಶಬ್ದಗಳು ಮೂಲತಃ ಪರಮಮುಖ್ಯವೃತ್ತಿಯಿಂದ ಭಗವದ್ವಾಚಕ.

ಬೃಹತೀಸಹಸ್ರವು ಭಗವಂತನಿಗೆ ಅನ್ನ. ಅದು ವಾಯುಪ್ರತಿಪಾದಕವೂ ಆಗಿದೆ. ಬೃಹತೀಸಹಸ್ರವೂ ವಿಷ್ಣುಸಹಸ್ರನಾಮಕ್ಕೆ ಭಾಷ್ಯರೂಪವೂ ಆಗಿದೆ. ಅಹಂ,-ತ್ವಂ-ಅಸ್ಮಿ-ಪ್ರಾಣ ಮೊದಲಾಗಿ ಸರ್ವಶಬ್ದಗಳು ಭಗವತ್ಪರವೇ. ಬೃಹತೀ ಸಹಸ್ರದಿಂದ ಪ್ರತಿಪಾದಿತವಾದ 72 ಸಾವಿರ ಭಗವದ್ರೂಪಗಳು ಶರೀರದೊಳಗಿನ 72 ಸಾವಿರ ನಾಡಿಗಳಲ್ಲಿ ನೆಲೆಸಿವೆ. ಭಗವಂತನಿಗೆ ಪುರುಷ ರೂಪವಂತೆ ಸ್ತ್ರೀರೂಪಗಳೂ ಉಂಟು. ಆದರೆ ನಪುಂಸಕರೂಪ ಮಾತ್ರ ಸರ್ವಥಾ ಇಲ್ಲ. ಭಗವಂತನ ಪುರುಷರೂಪಗಳು ಬೃಹತೀಸಹಸ್ರದ ಸ್ವರಗಳಿಂದಲೂ ಸ್ತ್ರೀರೂಪಗಳು ವ್ಯಂಜನಗಳಿಂದಲೂ ವಾಚ್ಯವಾಗಿವೆ.

ಭಗವಂತನು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಮತ್ತು ನಾರಾಯಣ ರೂಪಗಳಿಂದ ಸರ್ವತ್ರ ನೆಲೆಸಿರುವನು. ಸಂಕರ್ಷಣ ಮತ್ತು ಪ್ರದ್ಯುಮ್ನ ರೂಪಗಳು ಭೋಕ್ತೃಗಳಲ್ಲಿದ್ದು ಭೋಕ್ತೃಶಕ್ತಿಪ್ರದವೂ ಸ್ವತಃ ಮುಖ್ಯ ಭೋಕ್ತೃಗಳೂ ಆಗಿವೆ. ನಾರಾಯಣ ಮತ್ತು ಅನಿರುದ್ಧ ರೂಪಗಳು ಭೋಗ್ಯ ವಸ್ತುಗಳಲ್ಲಿ ನೆಲೆಸಿದ್ದು ಸರ್ವರಿಗೂ ತೃಪ್ತಿ ನೀಡುವವು. ವಾಸುದೇವರೂಪವು ಆಕಾಶದಲ್ಲಿದ್ದು ಸದಾ ಅವಕಾಶ ಪ್ರದವಾಗಿದೆ. ಭಗವಂತನೂ ಸಕಲಕ್ಕೂ ಮುಖ್ಯ ಸೃಷ್ಟಿಕರ್ತನಾಗಿರುವನು. ಅವನು ಕತರ(ಆನಂದತಮ).

ಅನಂತರ ಆಧಿದೈವತ, ಅಧಿಸಂಹಿತೆಗಳ ವಿವರಗಳು ಬಂದಿವೆ. ವಿಷ್ಣುಶಬ್ದದ ಅರ್ಥ ವಿವರಣೆ, ಶಾರೀರ ಪುರುಷ ಎಂದರೆ ಶಿವ, ಛಂದಃ ಪುರುಷ ಎಂದರೆ ಗರುಡ ವೇದಪುರುಷ ಎಂದರೆ ಶೇಷ ಮತ್ತು ಮಹಾಪುರುಷ ಎಂದರೆ ಚತುರ್ಮುಖ ಬ್ರಹ್ಮ ಎಂಬ ವಿವರಣೆ ಇದೆ. ಭಗವತ್ಸ್ವರೂಪದ ಬಗ್ಗೆ ಮಿಥ್ಯಾಜ್ಞಾನ, ರಮಾ ಬ್ರಹ್ಮಾದಿಗಳಲ್ಲಿನ ತಾರತಮ್ಯವನ್ನು ತಿಳಿಯದಿರುವಿಕೆ, ಅವಿಹಿತಕರಣ ಮತ್ತು ವಿಹಿತತ್ಯಾಗಗಳು ಮತ್ತು ಅನರ್ಹರಿಗೆ ಉಪದೇಶ ಎಂಬುದಾಗಿ ಭಗವದ್ವಿಷಯಕವಾದ ತ್ಯಾಗ ನಾಲ್ಕು ವಿಧ. ಮೊದಲೆರಡು ತ್ಯಾಗಗಳಿಂದ ಅಂಧಂತಮಸ್ಸು; ಮೂರನೇಯ ತ್ಯಾಗದಿಂದ ಅನೇಕ ತೆರನಾದ ನರಕಗಳು ಮತ್ತು ನಾಲ್ಕನೆಯ ತ್ಯಾಗದಿಂದ ಊರ್ಧ್ವಲೋಕಕ್ಕೆ ಹೋಗುವ ಶಕ್ತಿಯ ಅಭಾವ— ಇವು ಕ್ರಮವಾಗಿ ಭಗವತ್ತ್ಯಾಗದ ದುಷ್ಪರಿಣಾಮಗಳಾಗಿವೆ. ಮರಣಸೂಚಕ ದುಃಶಕುನಗಳನ್ನು ಮತ್ತು ದುಃಸ್ವಪ್ನಗಳನ್ನು ನಿರೂಪಿಸಿ ರಾತ್ರಿಸೂಕ್ತದ ಜಪಹೋಮಾದಿಗಳನ್ನು ಅವುಗಳ ಪರಿಹಾರದ ಉಪಾಯಗಳನ್ನಾಗಿ ವಿಧಿಸಲಾಗಿದೆ.

ಅವುಗಳಿಂದ ಅಪಮೃತ್ಯುಯೋಗವು ಪರಿಹಾರವೇ ಆಗುತ್ತದೆ; ಕಾಲಮೃತ್ಯುವಾಗಿದ್ದಲ್ಲಿ ಸದ್ಗತಿಪ್ರಾಪ್ತಿಗೆ ಸಾಧನವಾಗುತ್ತದೆ. ಬ್ರಹ್ಮಾದಿದೇವತೆಗಳ ದೇಹವೇ ವಿಷ್ಣುವನ್ನು ಆರಾಧಿಸುವ ದೈವೀವೀಣೆಯಾಗಿದ್ದು ಮಾನುಷವೀಣೆ ಅದರ ಅನುಕರಣೆ ಮಾತ್ರ. ದೈವೀ ವೀಣೆಯನ್ನು ಹೀಗೆ ಉಪಾಸನೆ ಮಾಡುವವನು ಅಪರೋಕ್ಷ ಜ್ಞಾನಿಯೂ, ಕೀರ್ತಿಶಾಲಿಯೂ ಆಗುವನು. ವಿಷ್ಣುಶಬ್ದವು ಭಗವಂತನು ವಿಶಿಷ್ಟ ಚೇಷ್ಟಕನೂ, ಬಲವಂತನೂ ಎಂಬುದನ್ನು ತಿಳಿಸಿ ಸಕಲವೇದಾರ್ಥದ ಸಾರವೇ ಆಗಿದೆ.

ಇದು ಸಂಕ್ಷಿಪ್ತವಾಗಿ ಐತರೇಯೋಪನಿಷದ್ಭಾಷ್ಯದ ಸಾರ.

ಹರಿಸರ್ವೋತ್ತಮತ್ವ ಮತ್ತು ವಾಯುಜೀವೋತ್ತಮತ್ವಗಳು ಈ ಉಪನಿಷತ್ತಿನಲ್ಲಿ ವಿಶೇಷವಾಗಿ ನಿರೂಪಿತವಾಗಿರುವ ಪ್ರಧಾನ ಪ್ರಮೇಯಗಳು. ಬೃಹತೀಸಹಸ್ರದ ಮಹಿಮೆ ಇಡೀ ಉಪನಿಷತ್ತಿನ ಕೇಂದ್ರ ಬಿಂದು. ರಾತ್ರೀಸೂಕ್ತ, ಯಚಂತೀ ಋಕ್ಕುಗಳು ಮೊದಲಾಗಿ ಅನೇಕ ವೇದ ಮಂತ್ರಗಳಿಗೆ ಇದರಲ್ಲಿ ಅಪೂರ್ವ ವಿವರಣೆ ಉಂಟು. ಯೋಽಹಂ ಸೋಽಸೌ ಯೋಽಸೌ ಸೋಹಂ ಎಂಬ ಅದ್ವೈತ ಪರವೆಂದು ತೋರುವ ಇದರಲ್ಲಿನ ವಾಕ್ಯಕ್ಕೆ ಭೇದ ಪರವಾದ ಸುಂದರ ಅರ್ಥವನ್ನು ಆಚಾರ್ಯರು ಸಪ್ರಮಾಣವಾಗಿ ನೀಡಿರುವರು.

# ಛಾಂದೋಗ್ಯೋಪನಿಷದ್ಭಾಷ್ಯ

ಛಾಂದೋಗ್ಯವು ಸಾಮವೇದದ ಉಪನಿಷತ್ತು. ದೊಡ್ಡ ಉಪನಿಷತ್ತುಗಳಲ್ಲಿ ಮೂರನೆಯದು. ಭಾಷ್ಯದ ಗ್ರಂಥಸಂಖ್ಯೆ 1200. ಹಯಗ್ರೀವರೂಪಿ ನಾರಾಯಣನು ಮುಖ್ಯತಃ ಇದರ ಋಷಿ, ಅನಂತರ ರಮಾಬ್ರಹ್ಮಾದಿಗಳು ಋಷಿಗಳು, ಶೇಷಶಾಯಿ ರೂಪಿಯಾದ ನಾರಾಯಣನು ಪ್ರತಿಪಾದ್ಯ ದೇವತೆ. ಓಂಕಾರದ ಅರ್ಥ, ಉದ್ಗೀಥ ಶಬ್ದಾರ್ಥ, ಭಗವಂತನು ಅಷ್ಟಮರಸ, ಪರಾರ್ಧ್ಯ ಎಂಬುದರ ನಿರೂಪಣೆ, ವಾಯುದೇವರ ಅಖಿಣಾಶ್ಮಸಮತ್ವ ನಿರೂಪಣೆ, ಸಾಮವಿದ್ಯೆ, ಉಷಸ್ತಿಚಾಕ್ರಾಯಣರ ಕಥೆ, ಸತ್ಯಕಾಮಜಾಬಾಲರಿಗೆ ಋಷಭಾದಿರೂಪದ ವಾಯು ಮೊದಲಾದ ದೇವತೆಗಳಿಂದ ವಾಸುದೇವಾದಿಭಗವತ್ಸ್ವರೂಪದ ಉಪದೇಶ, ಉಪಕೋಸಲರಿಗೆ ಆಹವನೀಯ, ಗಾರ್ಹಪತ್ಯ ಮತ್ತು ಅನ್ವಾಹಾರ್ಯಪಚನ ಎಂಬ ಅಗ್ನಿಗಳಿಂದ ಭಗವತ್ಸ್ವರೂಪದ ನಿರೂಪಣೆ, ಜಾನಶ್ರುತಿ ಪೌತ್ರಾಯಣನಿಗೆ ರೈಕ್ವರಿಂದ ಸಂವರ್ಗವಿದ್ಯೆಯ ಉಪದೇಶ; ವಾಯುವೇ ಸಂವರ್ಗ ಎಂಬುದರ ನಿರೂಪಣೆ, ಮೊದಲ 24 ವರ್ಷಗಳಿಗೆ ವಸುಗಳು, ಅನಂತರದ 44 ವರ್ಷಗಳಿಗೆ ರುದ್ರರು,

ಕೊನೆಯ 48 ವರ್ಷಗಳಿಗೆ ಆದಿತ್ಯರು ಹೀಗೆ ಜೀವನದಲ್ಲಿನ 116 ವರ್ಷಗಳಿಗೆ ದೇವತಾದಿನಿರೂಪಣೆ; ವಸ್ವಾದಿಗಳ ಉಪಾಸನೆಯಿಂದ ರೋಗಾದ್ಯುಪದ್ರವ ಪರಿಹಾರ, ಐತರೇಯನೆಂಬ ಋಷಿಯು ಇದರ ಉಪಾಸನೆಯಿಂದ ಗಳಿಸಿದ ಸಿದ್ಧಿ, ಜ್ಯೇಷ್ಠ ಶ್ರೇಷ್ಠ ಎಂಬ ವಾಯುವಿನ ಉಪಾಸನೆ ಅದರ ಫಲ ಮತ್ತು ಶ್ವೇತುಕೇತುವಿಗೆ ಉದ್ದಾಲಕರಿಂದ ಭಗವತ್ತತ್ವಜ್ಞಾನದ ಮಹಿಮೆ ಹಾಗೂ ಜಗತ್ಸೃಷ್ಟಿಯ ಕ್ರಮದ ನಿರೂಪಣೆ (ಅ)ತತ್ತ್ವಮಸಿ ವಾಕ್ಯಾರ್ಥ; ಹನ್ನೆರಡು ವರ್ಷಗಳ ಕಾಲ ವೇದಾಧ್ಯಯನ ಮಾಡಿಯೂ ಅದರ ಅಂತರ್ಯವನ್ನು ತಿಳಿಯದೆ ಅಹಂಕಾರಿಯಾಗಿದ್ದ ಶ್ವೇತಕೇತುವಿಗೆ ಆತನ ತಂದೆ ಉದ್ದಾಲಕರು ನೀನೇನು ಭಗವಂತನೇ? (ಅತತ್ತ್ವಮಸಿ) ಎಂಬುದಾಗಿ ಎಚ್ಚರಿಸಿದ ಪ್ರಸಂಗ ಈ ಉಪನಿಷತ್ತಿನ ಅತ್ಯಂತ ಪ್ರಮುಖ ಭಾಗ. ಅದನ್ನು ಶ್ರೀಮದಾಚಾರ್ಯರು ವಿಶ್ಲೇಷಿಸಿರುವ ರೀತಿ ಅತ್ಯಂತ ಅಪೂರ್ವ. ನಾರದರಿಗೆ ಸನತ್ಕುಮಾರರು ಉಪದೇಶಿಸಿದ ನಾಮವಿದ್ಯಾ ಮತ್ತು ಕೊನೆಯದಾಗಿ ಇಂದ್ರವಿರೋಚನರಿಗೆ ಬ್ರಹ್ಮದೇವರ ಉಪದೇಶ. ಮೋಕ್ಷಸ್ವರೂಪವನ್ನು 'ನ ಚ ಪುನರಾವರ್ತತೇ' ಎಂದು ವರ್ಣಿಸುತ್ತ ಉಪನಿಷತ್ತಿನ ಉಪಸಂಹಾರ.

ಹೀಗೆ ಅನೇಕ ತೆರನಾದ ರಹಸ್ಯಪ್ರಮೇಯಗಳಿಂದ ಭರಿತವಾದ ಈ ಉಪನಿಷತ್ತಿಗೆ ಶ್ರೀಮದಾಚಾರ್ಯರು ರಚಿಸಿರುವ ಭಾಷ್ಯವು ಪ್ರತಿಯೊಂದು ಹಂತದಲ್ಲೂ ಮುಖ್ಯ ಪ್ರಮೇಯಗಳ ಮೇಲೆ ಅಪಾರಬೆಳಕು ಚೆಲ್ಲುತ್ತದೆ.

'ಸರ್ವಂ ಹ ವೈ ಭವತಿ', 'ಸರ್ವಂ ಖಲ್ವಿದಂ ಬ್ರಹ್ಮ', 'ತಜ್ಜಲಾನಿತಿ ಶಾಂತ ಉಪಾಸೀತ', 'ತತ್ತ್ವಮಸಿ' ಮೊದಲಾದ ಅಭೇದಬೋಧಕವೆಂದು ತೋರುವ ಶ್ರುತಿಗಳಿಗೆ ಭೇದವೇ ಮುಖ್ಯ ತಾತ್ಪರ್ಯ ಎಂಬುದನ್ನು ಶ್ರೀ ಮದಾಚಾರ್ಯರು ಸಪ್ರಮಾಣವಾಗಿ ಇದರಲ್ಲಿ ಸಮರ್ಥಿಸಿರುವರು.

# ಬೃಹದಾರಣ್ಯಕೋಪನಿಷದ್ಭಾಷ್ಯ

ಬೃಹದಾರಣ್ಯಕೋಪನಿಷತ್ತು ದಶೋಪನಿಷತ್ತುಗಳಲ್ಲಿ ತುಂಬಾ ದೊಡ್ಡದು. ಆದ್ದರಿಂದ ದಶೋಪನಿಷದ್ಭಾಷ್ಯಗಳಲ್ಲಿ ಬೃಹದಾರಣ್ಯಕೋಪನಿಷದ್ಭಾಷ್ಯವೇ ದೊಡ್ಡದು. ಶುಕ್ಲಯಜುರ್ವೇದಕ್ಕೆ ಸೇರಿದ ಈ ಉಪನಿಷತ್ತಿಗೆ ಬ್ರಹ್ಮದೇವರು, ಸೂರ್ಯ, ಯಾಜ್ಞವಲ್ಕ್ಯ, ಕಣ್ವರು ಋಷಿಗಳು. ಲಕ್ಷ್ಮೀಶನಾದ ನಾರಾಯಣನೇ ಪ್ರತಿಪಾದ್ಯ ದೇವತೆ. ವಾಜಸನೇಯೋಪನಿಷತ್, ಕಣ್ವೋಪನಿಷತ್ ಎಂಬುದಾಗಿ ಇದು ಪ್ರಸಿದ್ಧ.

ಇದರಲ್ಲಿ ಒಟ್ಟು 6 ಅಧ್ಯಾಯಗಳಿದ್ದು ಅಶ್ವಮೇಧದ ಕುದುರೆಯ ಆಧ್ಯಾತ್ಮಿಕ ವರ್ಣನೆ ಆ ಅಶ್ವದ ಅವಯವಗಳಲ್ಲಿ ಬ್ರಹ್ಮದೇವರು, ಇತರ ದೇವತೆಗಳು ಹಾಗೂ ಪರಮಾತ್ಮನು ನೆಲೆಸಿರುವ ವಿವರ ಬಂದಿದೆ.

ಭಗವಂತನು ಲಯಕರ್ತ. ಲಯ ಎಂದರೆ ಕೇವಲ ಸಂಹಾರವಲ್ಲ. ವಿಶ್ರಾಂತಿ ಪ್ರದಾನವೇ ಲಯದ ಅಂತರ್ಯ. ದೇವದಾನವರ ಯುದ್ಧದಲ್ಲಿ ದೇವತೆಗಳು ಪರಾಜಿತ ರಾಗಿ ಜಯದ ಸಾಧನೆಗಾಗಿ ಭಗವಂತನನ್ನು ಸ್ತುತಿಸಲು ಉದ್ಯುಕ್ತರಾಗುವರು. ಆದರೆ ಅವರು ಆ ಕಾರ್ಯಕ್ಕೆ ಆರಿಸಿಕೊಂಡ ಸಕಲ ಇಂದ್ರಿಯಾಭಿಮಾನಿದೇವತೆಗಳಲ್ಲೂ ಅಸುರರು ಪ್ರವೇಶಿಸಿ ಅವರ ಸ್ತೋತ್ರಕಾರ್ಯಕ್ಕೆ ವಿಘ್ನವೆಸಗುವರು. ಕೊನೆಗೆ ಅವರು ವಾಯುದೇವನ ಮೂಲಕ ಭಗವತ್ ಸ್ತುತಿಯನ್ನು ಕೈಗೊಂಡಾಗ ಅಸುರರ ಆಟ ನಡೆಯದಾಯಿತು. ವಾಯುದೇವರೊಳಗೆ ಪ್ರವೇಶಿಸಲು ಯತ್ನಿಸಿದ ದೈತ್ಯರೆಲ್ಲ ಬಂಡೆಗೆ ಅಪ್ಪಳಿಸಿದ ಮಣ್ಣಹೆಂಟೆಗಳಂತೆ ನಾಶವಾಗಿ ಹೋದರು. ವಾಯುದೇವರು ಆಖಣಾಶ್ಮಸಮರು. ಅವರ ಮೂಲಕವೇ ಭಗವಂತನ ಅನುಗ್ರಹ ಪಡೆದು ಸಂಸಾರ ಜಯವನ್ನು ಸಾಧಿಸಲು ಸಾಧ್ಯ ಎಂಬ ಪ್ರಮೇಯ ಸ್ಥಾಪಿತವಾಗಿದೆ.

ಮತ್ತೊಂದು ಪ್ರಸಂಗದಲ್ಲೂ ತತ್ತ್ವಾಭಿಮಾನಿದೇವತೆಗಳಲ್ಲಿ ತಾರತಮ್ಯ ನಿರ್ಣಯಕ್ಕೆ ಪ್ರಯೋಗ ನಡೆಯಿತು. ಶ್ರಮವಿಲ್ಲದೆ ತಮ್ಮ ಕಾರ್ಯವನ್ನು ಸದಾ ನಡೆಸುವ ದೇವತೆಯೇ ತತ್ತ್ವಾಭಿಮಾನಿಗಳಲ್ಲಿ ಶ್ರೇಷ್ಠ ಎಂಬುದಾಗಿ ಬ್ರಹ್ಮದೇವರು ತಿಳಿಸುವರು. ಆದರೆ ಚಕ್ಷುರಾದಿ ಅಭಿಮಾನಿ ದೇವತೆಗಳು ಹಾಗೆ ಮಾಡಲು ಪ್ರಯತ್ನಿಸಿ ಸ್ವಲ್ಪ ಕಾಲದಲ್ಲೇ ಆಯಾಸಗೊಂಡು ಅದನ್ನು ಸಾಧಿಸುವಲ್ಲಿ ಸೋಲುತ್ತಾರೆ. ಆದರೆ ಪ್ರಾಣದೇವರ ಶ್ವಾಸೋಚ್ಛ್ವಾಸ ಕಾರ್ಯವು ಮಾತ್ರ ಅವ್ಯಾಹತವಾಗಿ ಯಾವ ಶ್ರಮವೂ ಇಲ್ಲದೆ ಸದಾ ನಡೆದೇ ಇರುತ್ತದೆ. ಇದರಿಂದ ವಾಯುದೇವರ ಜೀವೋತ್ತಮತ್ವವು ಮತ್ತೊಮ್ಮೆ ಸ್ಥಾಪಿತವಾಗುತ್ತದೆ. ಹರಿವ್ರತದಂತೆ ಹಂಸಮಂತ್ರಜಪರೂಪವಾದ ಪ್ರಾಣವ್ರತವನ್ನೂ ಸರ್ವರೂ ತಪ್ಪದೇ ಆಚರಿಸಬೇಕು ಎಂಬ ವಿಧಿ ಇದರಲ್ಲಿ ನಿರೂಪಿತವಾಗಿದೆ.

ಸಪ್ತಾನ್ನಬ್ರಾಹ್ಮಣ ಈ ಉಪನಿಷತ್ತಿನ ಮತ್ತೊಂದು ಪ್ರಮುಖ ಭಾಗ. ಭಗವಂತನು ದೇವತೆಗಳಿಗೆ ಬಲಿ, ಯಜನ ಎಂಬ ಎರಡು ವಿಧ ಅನ್ನವನ್ನೂ, ಮನುಷ್ಯರಿಗೆ ಅನ್ನವೆಂಬ ಒಂದು ಅನ್ನವನ್ನೂ, ಪಶುಗಳಿಗೆ ಹಾಲು ಎಂಬ ಒಂದು ಅನ್ನವನ್ನು ಆಹಾರವಾಗಿ ವಿಧಿಸಿರುವನು. ತನಗಾಗಿ ಮನಸ್ಸು, ವಾಕ್ ಮತ್ತು ಪ್ರಾಣ ಎಂಬ ಮೂರು ವಿಧ ಅನ್ನವನ್ನೂ ಸೃಜಿಸಿರುವನು. ಆದ್ದರಿಂದ ಮನಸ್ಸು, ಮಾತು ಮತ್ತು ಪ್ರಾಣಗಳನ್ನು ಭಗವತ್ಪ್ರೀತಿಕರವಾದ ಕಾರ್ಯಗಳಲ್ಲಿ ತೊಡಗಿಸುವುದೇ

ಮುಖ್ಯವಾದ ಅರ್ಥದಲ್ಲಿ ಭಗವಂತನಿಗೆ ಅರ್ಪಿಸಬೇಕಾದ ನೈವೇದ್ಯ ಎಂಬ ಪ್ರಮೇಯ ಸಪ್ತಾನ್ನಬ್ರಾಹ್ಮಣದ ಸಾರ. ದೇವಲೋಕ, ಸ್ವರ್ಗಲೋಕ ಮತ್ತು ಮನುಷ್ಯಲೋಕವೆಂಬ ಮೂರು ಲೋಕಗಳನ್ನು ಕ್ರಮವಾಗಿ ತತ್ತ್ವಜ್ಞಾನ, ಸತ್ಕರ್ಮಗಳ ಆಚರಣೆ ಮತ್ತು ಸತ್ಪುತ್ರರ ಉತ್ಪತ್ತಿಯಿಂದ ಸಂಪಾದಿಸಿಕೊಳ್ಳಬೇಕು. ತಂದೆ ತನ್ನ ಅಂತ್ಯಕಾಲದಲ್ಲಿ ತನ್ನ ಮಗನಿಗೆ "ತ್ವಂ ಬ್ರಹ್ಮ", "ತ್ವಂ ಯಜ್ಞಃ" ಮತ್ತು "ತ್ವಂ ಲೋಕಃ" ಎಂಬುದಾಗಿ ಉಪದೇಶಿಸಬೇಕು. ಅದನ್ನು ಮಗನು "ಅಹಂ ಬ್ರಹ್ಮ", "ಅಹಂ ಯಜ್ಞಃ" ಮತ್ತು "ಅಹಂ ಲೋಕಃ" ಎಂಬುದಾಗಿ ಅಂಗೀಕರಿಸಬೇಕು. ಎಂದರೆ ನೀನು ವೇದಾಧ್ಯಯನ ಪರಾಯಣನಾಗಿ ವಿಹಿತ ಯಜ್ಞಗಳನ್ನು ಆಚರಿಸುತ್ತ ಉತ್ತಮ ಲೋಕಗಳನ್ನು ಸಂಪಾದಿಸಬೇಕು ಎಂದು ತಂದೆ ಆದೇಶವೀಯಬೇಕು. ಮಗನು ಅದನ್ನು ತಪ್ಪದೇ ಪಾಲಿಸಿ ಕೃತಾರ್ಥನಾಗಬೇಕು ಎಂದು ಭಾವ.

ಅದ್ವೈತಪರವೆಂಬುದಾಗಿ ತುಂಬಾ ಪ್ರಸಿದ್ಧವಾಗಿರುವ ಅಹಂ ಬ್ರಹ್ಮಾಸ್ಮಿ ಎಂಬ ವಾಕ್ಯವು ಬರುವದು ಈ ಉಪನಿಷತ್ತಿನಲ್ಲಿಯೇ, ಪ್ರತಿಯೊಬ್ಬ ಸಾಧಕನೂ ಭಗವಂತನನ್ನು ಗುಣಪೂರ್ಣನೆಂದು ಉಪಾಸನೆ ಮಾಡಿಯೇ ಪೂರ್ಣಸುಖದ ನೆಲೆಯಾದ ಮುಕ್ತಿಯನ್ನು ಸಂಪಾದಿಸಿಕೊಳ್ಳಬೇಕು.

ಭಗವಂತನು "ಅಹಂ ಬ್ರಹ್ಮಾಸ್ಮಿ" ಎಂಬುದಾಗಿಯೇ ತನ್ನನ್ನು ತಿಳಿದುಕೊಂಡಿರುವವನು. ಉಪನಿಷತ್ತಿನ ಈ ಮಾತಿನಲ್ಲಿ ಅದ್ವೈತದ ಪ್ರಸಕ್ತಿಯೇ ಇಲ್ಲ. ಭಗವಂತನು ತನ್ನನ್ನು ಅಹಂ ಬ್ರಹ್ಮಾಸ್ಮಿ ಎಂಬುದಾಗಿ ತಿಳಿದುಕೊಂಡನೆಂದು ಹೇಳಿದರೆ ಇತರರು ತನ್ನನ್ನು ಹಾಗೆ ತಿಳಿದುಕೊಳ್ಳಬೇಕೆಂದು ಹೇಗೆ ಅರ್ಥವಾದೀತು? ಇತರರು ಅಹಂ ಬ್ರಹ್ಮಾಸ್ಮಿ ಎಂಬುದಾಗಿ ಉಪಾಸನೆ ಮಾಡಬೇಕು ಎಂದರೆ ಭಗವಂತನು ಅಹೇಯನು, ಪೂರ್ಣನೂ, ಸದಾ ಒಂದೇ ತೆರನಾಗಿರುವವನೂ ಎಂಬುದಾಗಿ ಉಪಾಸನೆ ಮಾಡಿ ಕೃತಾರ್ಥರಾಗಬೇಕು ಎಂಬುದು ಇದರ ಸಂದೇಶ; ಎಂದರೆ ಇಲ್ಲಿಯ ಅಹಂ, ಬ್ರಹ್ಮ ಮತ್ತು ಅಸ್ಮಿ ಎಂಬ ಮೂರು ಪದಗಳು ಭಗವಂತನ ನಾಮಗಳೇ ಆಗಿವೆ ಎಂದು ಭಾವ.

ಅದೇ ಪ್ರಸಂಗದಲ್ಲಿ ಮುಂದೆ ಬರುವ, "ಅಥಃ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸೌ ಅನ್ಯೋಽಹಮಸ್ಮೀತಿ-ನ ಸ ವೇದ ಯಥಾ ಪಶುಃ" ಎಂಬ ಮಾತಿಗೂ "ಪರಮಾತ್ಮನು ನಮ್ಮಿಂದ ಭಿನ್ನನಾಗಿರುವದು ನಿಜ. ಆದರೆ ಅವನು ಸ್ವಾಮಿ ಮತ್ತು ನಾವು ಭೃತ್ಯರಾಗಿರುವದರಿಂದ ನಮ್ಮಿಬ್ಬರಿಗೂ ಸಂಬಂಧವಿರುವದು ತಪ್ಪಿದ್ದಲ್ಲ. ಹಾಗೆ ತಿಳಿಯದೆ ನಮಗೂ ಅವನಿಗೂ ಯಾವುದೇ ಸಂಬಂಧವೂ ಇಲ್ಲವೇ ಇಲ್ಲ ಎಂಬುದಾಗಿ ಭಾವಿಸುವವನು ಪಶುವೇ ಸರಿ. ಎಂದರೆ ಭಗವಂತನನ್ನು ಪ್ರತಿಯೊಬ್ಬರೂ ನಮ್ಮ ಸ್ವಾಮಿ ಎಂಬುದಾಗಿ ಶ್ರದ್ಧಾಭಕ್ತಿಗಳಿಂದ

ಆರಾಧಿಸಲೇಬೇಕು ಎಂದು ಭಾವ. ಶ್ರೀಮದಾಚಾರ್ಯರು ಈ ಪ್ರಸಂಗದಲ್ಲಿ ಅಭೇದ ಬೋಧಕವೆಂದು ಅದ್ವೈತಿಗಳು ಭಾವಿಸಿರುವ ಏಕಮೇವಾದ್ವಿತೀಯಂ ಬ್ರಹ್ಮ, ತತ್ತ್ವಮಸಿ, ನೇಹ ನಾನಾಸ್ತಿ ಕಿಂಚನ ಮೊದಲಾದ ಸಕಲ ಶ್ರುತಿಗಳಿಗೂ ಭೇದದಲ್ಲಿ ಮಹಾತಾತ್ಪರ್ಯ ಎಂಬುದನ್ನು ವಿಶೇಷರೀತಿಯಲ್ಲಿ ಪ್ರತಿಪಾದಿಸಿರುವರು.

ತನ್ನ ಬಳಿಗೆ ಬ್ರಹ್ಮವಿದ್ಯೆಯ ಉಪದೇಶ ನೀಡಲು ಕಾತರದಿಂದ ಬಂದ ಬಾಲಾಕಿ ಮುನಿಗೆ ಅಜಾತಶತ್ರು ಎಂಬ ರಾಜನು ಕೇಳುವನು : "ನಿಮಗೆ ತಿಳಿದಿರುವದನ್ನು ಹೇಳಿ." ಅವರು ಸೂರ್ಯಾದಿ ಸಕಲ ಅಧಿಷ್ಠಾನಗಳಲ್ಲಿ ಇರುವ ಭಗವಂತನನ್ನು ನಾನು ಬಲ್ಲೆ ಎನ್ನುವರು. ಅಜಾತಶತ್ರುವು ನಿಮಗೆ ಗೊತ್ತಿರುವದು ಇಷ್ಟು ಮಾತ್ರ ತಾನೇ? ಎಂದಾಗ ಅವರು ಹೌದು ಎಂಬುದಾಗಿ ಒಪ್ಪಿಕೊಂಡು ಅದಕ್ಕಿಂತಲೂ ಮಿಗಿಲಾದ ವಿಚಾರವನ್ನು ಅವನಿಂದಲೇ ತಿಳಿದುಕೊಳ್ಳಲು ಬಯಸುವರು. ಆಗ ಅಜಾತಶತ್ರುವು ಈ ರೀತಿಯಾಗಿ ಹೊರಗಿನ ಅಧಿಷ್ಠಾನಗಳಲ್ಲಿ ಮಾತ್ರವೇ ಭಗವಂತನನ್ನು ಅರಿತರೆ ಸಾಲದು; ನಮ್ಮ ಹೃದಯಕಮಲದಲ್ಲಿ ಭಗವಂತನು ನೆಲೆಸಿರುವನು ಎಂದು ತಿಳಿದು ತಪ್ಪದೇ ಆರಾಧಿಸಲೇಬೇಕು ಎಂದು ಎಚ್ಚರಿಸುವರು.

ಯಾಜ್ಞವಲ್ಕ್ಯರು ತಮ್ಮ ಇಬ್ಬರು ಪತ್ನಿಯರಾದ ಮೈತ್ರೇಯಿ ಮತ್ತು ಕಾತ್ಯಾಯನಿಯರಿಗೆ ತಮ್ಮ ಸಂಪತ್ತೆಲ್ಲವನ್ನೂ ಹಂಚಿ ತಾವು ಸನ್ಯಾಸಿಯಾಗಲು ಉದ್ಯುಕ್ತರಾಗುವರು. ಕಾತ್ಯಾಯನಿಯು ಒಪ್ಪಿಕೊಳ್ಳುವಳು. ಮೈತ್ರೇಯಿಯು ಕೇಳಿದಳು : "ನೀವು ನೀಡುವ ಸಂಪತ್ತಿನಿಂದ ನಾನು ಮೋಕ್ಷವನ್ನು ಪಡೆಯಲು ಸಾಧ್ಯವೇ?. ಯಾಜ್ಞವಲ್ಕ್ಯರು ಕೇವಲ ಐಶ್ವರ್ಯದಿಂದ ಮುಕ್ತಿಯು ಎಂದಿಗೂ ಲಭಿಸದು ಎನ್ನುವರು. ಮೈತ್ರೇಯಿಯು ಹಾಗಿದ್ದಲ್ಲಿ ಮುಕ್ತಿಗೆ ಸಾಧಕವಾಗದ ಇಂತಹ ಸಂಪತ್ತಿನಿಂದೇನು? ದಯವಿಟ್ಟು ನನಗೆ ಮೋಕ್ಷದ ಉಪಾಯವನ್ನು ಬೋಧಿಸಿ ಎಂದು ಪ್ರಾರ್ಥಿಸಿಕೊಳ್ಳುವಳು. ಯಾಜ್ಞವಲ್ಕ್ಯರು ಅವಳ ಆಸಕ್ತಿಯನ್ನು ಮೆಚ್ಚಿ ಪತ್ನಿ, ಪುತ್ರ, ಪತಿ, ಬಂಧು ಮೊದಲಾಗಿ ಪ್ರತಿಯೊಂದು ವಸ್ತುವು ಪ್ರಿಯವಾಗುವದು ಭಗವಂತನ ಇಚ್ಛೆಯಿಂದಲೇ ಹೊರತು ಅವರವರ ಅಪೇಕ್ಷೆ ಮಾತ್ರದಿಂದಲ್ಲ. ಅಂತಹ ಭಗವಂತನೇ ಸಕಲರಿಗೂ ಮುಕ್ತಿದಾಯಕನು. ಶ್ರವಣ, ಮನನ ಮತ್ತು ಧ್ಯಾನಗಳಿಂದ ಅವನನ್ನು ಸಾಕ್ಷಾತ್ಕಾರ ಮಾಡಿಕೊಂಡಾಗಲೇ ಮುಕ್ತಿಯು ಲಭಿಸುವದು ಎಂಬುದಾಗಿ ಉಪದೇಶಿಸಿ, ಮುಕ್ತಿಯ ಸ್ವರೂಪವನ್ನು ವಿವರಿಸುತ್ತ "ನ ಪ್ರೇತ್ಯ ಸಂಜ್ಞಾಸ್ತಿ" ಎನ್ನುವರು. ಅದಕ್ಕೆ ಮುಕ್ತಿಗೆ ಹೋದವರಿಗೆ ಜ್ಞಾನವಿರುವದಿಲ್ಲ ಎಂಬ ಅಭಿಪ್ರಾಯ ಇರುವಂತೆ ತೋರುವದರಿಂದ ಸ್ಪಷ್ಟೀಕರಣಕ್ಕಾಗಿ ಮೈತ್ರೇಯಿಯು ಕೇಳಿಕೊಳ್ಳುವಳು. ಆಚಾರ್ಯರು ಯಾಜ್ಞವಲ್ಕ್ಯರ ಭಾವವನ್ನು ವಿವರಿಸುತ್ತ ಮುಕ್ತಿಯಲ್ಲಿ ನಿರ್ಮಲವಾದ ಸ್ವರೂಪಭೂತಜ್ಞಾನವು

ಇದ್ದೇ ಇರುವದು. ಆದರೆ ಅಲ್ಲಿ ಇಲ್ಲಿಯಂತೆ ಇಂದ್ರಿಯಜನ್ಯವಾದ ವೃತ್ತಿಜ್ಞಾನವಿರುವುದಿಲ್ಲ. ಎಂಬುದಾಗಿಯೂ, ಮುಕ್ತಿಗೆ ತೆರಳಿದವರ ಬಗ್ಗೆ ಸಂಸಾರಿಗಳಿಗೆ ಯಾವ ಪರಿಜ್ಞಾನವೂ ಇರುವದಿಲ್ಲ ಎಂಬುದಾಗಿಯೂ ಉತ್ತರಿಸಿದರು ಎಂದು ಭಾಷ್ಯದಲ್ಲಿ ವಿವರಿಸಿರುವರು.

ಜನಕರಾಜನ ಸಭೆಯಲ್ಲಿ ಒಮ್ಮೆ ಬೃಹತ್‌ಪ್ರಮಾಣದ ವಿದ್ವತ್‌ಗೋಷ್ಠಿಯು ಏರ್ಪಡುವದು. ಜನಕರಾಜನು "ನಿಮ್ಮಲ್ಲಿ ಶ್ರೇಷ್ಠ ಬ್ರಹ್ಮಜ್ಞಾನಿಗಳಾದವರು ನಾನು ನೀಡುವ ಸಾವಿರ ಗೋವುಗಳನ್ನು ತೆಗೆದುಕೊಳ್ಳಬಹುದು" ಎನ್ನುವನು. ಹಾಗೆ ತೆಗೆದುಕೊಳ್ಳಲು ಇತರರಾರೂ ಮುಂದಾಗದಿದ್ದಾಗ ಯಾಜ್ಞವಲ್ಕ್ಯರು ಅವುಗಳನ್ನು ಸ್ವೀಕರಿಸಲು ಸಿದ್ಧರಾಗುವರು; ಇತರರು ಅದನ್ನು ಪ್ರತಿಭಟಿಸಿದಾಗ ಯಾಜ್ಞವಲ್ಕ್ಯರು ತಾವು ಬ್ರಹ್ಮಜ್ಞಾನಿಗಳೆಂದು ನಿರೂಪಿಸಲು ಸಿದ್ಧರಾಗುವರು. ಅಶ್ವಲ, ಕಹೋಲ, ಉಷಸ್ತಿ ಚಾಕ್ರಾಯಣ ಮೊದಲಾದ ವಿದ್ವಾಂಸರು ಅನೇಕ ತೆರನಾದ ಪ್ರಶ್ನೆಗಳನ್ನು ಮುಂದಿಟ್ಟಾಗ ಯಾಜ್ಞವಲ್ಕ್ಯರು ಅವೆಲ್ಲವುಗಳಿಗೂ ಸಮರ್ಪಕ ಉತ್ತರ ನೀಡುವರು. ತಮ್ಮ ಪತ್ನಿ ಗಾರ್ಗಿಯು ಕೇಳಿದ ಪ್ರಶ್ನೆಗೂ ಸೂಕ್ತ ಉತ್ತರ ನೀಡುವರು. ಕೊನೆಗೆ ಯಾಜ್ಞವಲ್ಕ್ಯರು ಬ್ರಹ್ಮಜ್ಞಾನಿಗಳೆಂದು ಎಲ್ಲರೂ ಒಪ್ಪಿಕೊಳ್ಳುವರು. ಜನಕರಾಜನು ಸ್ವತಃ ಅವರಿಂದ ಉಪದೇಶ ಪಡೆದು ಕೃತಾರ್ಥನಾಗುವನು. ಈ ಪ್ರಸಂಗದಲ್ಲಿ ವಾಯುದೇವರು ಜಗತ್ತಿನ ಸೂತ್ರ ನಾರಾಯಣನು ಅಂತರ್ಯಾಮಿ, ಮಹಾಲಕ್ಷ್ಮಿಯು ಆಕಾಶ ಶಬ್ದವಾಚ್ಯಳು, ನಾರಾಯಣನು ಅಕ್ಷರಶಬ್ದವಾಚ್ಯನು, ವಿಶ್ವದ ಎಲ್ಲಕ್ಕೂ ಅವನೇ ಕಾರಣ ಪುರುಷ ಮೊದಲಾದ ಅನೇಕ ಮಹತ್ವಪೂರ್ಣಪ್ರಮೇಯಗಳು ನಿರೂಪಿತವಾಗಿವೆ.

ಒಮ್ಮೆ ಬ್ರಹ್ಮದೇವರು ತಮ್ಮ ಬಳಿಗೆ ಬಂದ ದೇವತೆಗಳು ಮಾನವರು ಮತ್ತು ದಾನವರು ಎಂಬ ಮೂರು ವರ್ಗದವರಿಗೆ "ದ" ಎಂಬ ಒಂದೇ ಅಕ್ಷರದ ಉಪದೇಶವನ್ನು ನೀಡುವರು. ಅದನ್ನು ಆ ಮೂವರು ತಮ್ಮ ಸ್ವಭಾವಕ್ಕನು ಗುಣವಾಗಿ ಅರ್ಥಮಾಡಿಕೊಳ್ಳುವರು. ದೇವತೆಗಳು "ದಮ"ವುಳ್ಳವರಾಗಿ ಎಂದೂ ಮಾನವರು "ದಾನ" ಮಾಡುವವರಾಗಿ ಎಂದೂ ದಾನವರು "ದಯೆ"ಯುಳ್ಳವರಾಗಿ ಎಂದೂ ಗ್ರಹಿಸುವರು. ಸ್ವರೂಪ ಯೋಗ್ಯತೆಗೆ ಅನುಗುಣವಾಗಿಯೇ ಶಾಸ್ತ್ರಗಳು ತಮ್ಮ ಭಾವವನ್ನು ತೆರೆದುಕೊಳ್ಳುವವು ಎಂಬ ತತ್ವ ಇಲ್ಲಿ ನಿರೂಪಿತವಾಗಿದೆ.

ಹೀಗೆ ಬೃಹದ್ಭಾಷ್ಯವು ಅನೇಕ ಪ್ರಮೇಯಗಳ ತವನಿಧಿಯಾಗಿದೆ.

ಹತ್ತು ಉಪನಿಷತ್‌ಗಳಿಗೂ ಭಾಷ್ಯ ಟೀಕೆಗಳಲ್ಲಿನ ಅರ್ಥ ಸಂಗ್ರಹ ರೂಪವಾದ ವಿವರಣೆಗಳನ್ನು ಶ್ರೀ ರಾಘವೇಂದ್ರ ಸ್ವಾಮಿಗಳು ರಚಿಸಿದ್ದು ಅವುಗಳು

ಉಪನಿಷತ್ತುಗಳ ಮಧ್ವಭಾಷ್ಯಾನುಸಾರಿಯಾದ ವಿವರಣೆಯನ್ನು ಸ್ಫುಟವಾಗಿ ತಿಳಿಯಲು ಅತ್ಯಂತ ಉಪಯುಕ್ತವಾಗಿವೆ. ಅವುಗಳಲ್ಲಿ ಐತರೇಯೋಪನಿಷತ್ತಿಗೆ ಮಂತ್ರಗಳ ಭಾಗಕ್ಕೆ ಮಾತ್ರ ಅವರು ಅರ್ಥ ಬರೆದಿರುವರು. ಷಟ್ಪ್ರಶ್ನ ಖಂಡಾರ್ಥ ಮುದ್ರಿತವಾಗಿಲ್ಲ— ನನ್ನ ಸಂಗ್ರಹದಲ್ಲಿ ಉಪಲಬ್ಧವಿದೆ. ಮುದ್ರಿತ ಷಟ್ಪ್ರಶ್ನ ಖಂಡಾರ್ಥ ಅವರದ್ದಲ್ಲ.

ಬೃಹದಾರಣ್ಯಭಾಷ್ಯಕ್ಕೆ ಶ್ರೀ ರಘೂತ್ತಮತೀರ್ಥರ ಭಾವಬೋಧವೆಂಬ ಟೀಕೆಯು, ಛಾಂದೋಗ್ಯ, ಕಾಠಕ, ತಲವಕಾರ ಭಾಷ್ಯಗಳಿಗೆ ಅವರ ಶಿಷ್ಯರಾದ ಶ್ರೀ ವೇದೇಶತೀರ್ಥರ ಟೀಕೆಗಳು, ಐತರೇಯಕ್ಕೆ ಶ್ರೀ ವಿಶ್ವೇಶ್ವರತೀರ್ಥರ ವಿವರಣ ಮತ್ತು ತಾಮ್ರಪರ್ಣೀಶ್ರೀನಿವಾಸಾಚಾರ್ಯರ ರತ್ನಮಾಲಾ ಎಂಬ ಟೀಕೆಗಳೂ ಆಥರ್ವಣಭಾಷ್ಯಕ್ಕೆ ಉಮರ್ಜಿಪ್ರಹ್ಲಾದಕೃಷ್ಣಾಚಾರ್ಯರ ಟೀಕೆಯೂ ಮಾಂಡೂಕಭಾಷ್ಯ ತೈತ್ತಿರಿಯಭಾಷ್ಯಗಳಿಗೆ ಬಿದರಹಳ್ಳಿ ಶ್ರೀನಿವಾಸತೀರ್ಥರ ಟೀಕೆಗಳೂ ಅಧ್ಯಯನ ಪರಂಪರೆಯಲ್ಲಿ ವಿಶೇಷವಾಗಿ ಬಳಕೆಯಲ್ಲಿವೆ. ಆಥರ್ವಣ ಮೊದಲಾದ ಐದು ಚಿಕ್ಕ ಉಪನಿಷದ್ಭಾಷ್ಯಗಳಿಗೆ ಶ್ರೀ ವಾದಿರಾಜ ಸ್ವಾಮಿಗಳ ಟೀಕೆಗಳೂ ಉಂಟು. ಶ್ರೀ ವರದತೀರ್ಥರೆಂಬವರ ಟೀಕೆಗಳು ಉಂಟು.

ಶ್ರೀಮದಾಚಾರ್ಯರ ದಶೋಪನಿಷದ್ಭಾಷ್ಯಗಳಲ್ಲಿ ಈಶಾವಾಸ್ಯಭಾಷ್ಯ ಮತ್ತು ಷಟ್ಪ್ರಶ್ನ ಭಾಷ್ಯಗಳಿಗೆ ಮಾತ್ರ ಶ್ರೀ ಜಯತೀರ್ಥರು ಟೀಕೆ ರಚಿಸಿರುವರು. ಆ ಟೀಕೆಗಳಿಗೆ ಶ್ರೀ ವಾದಿರಾಜ ತೀರ್ಥರು, ಬಿದರಹಳ್ಳಿ ಶ್ರೀನಿವಾಸತೀರ್ಥರು ಮೊದಲಾದವರ ಟಿಪ್ಪಣಿಗಳುಂಟು. ಉಳಿದ ಎಂಟು ಉಪನಿಷದ್ಭಾಷ್ಯಗಳಿಗೂ ಅವರ ಶಿಷ್ಯರಾದ ಶ್ರೀ ವ್ಯಾಸತೀರ್ಥರು ಟೀಕೆ ಬರೆದಿರುವರು. ಐತರೇಯಭಾಷ್ಯ ಟೀಕೆಯನ್ನು ಬಿಟ್ಟು, ಇತರ ಟೀಕೆಗಳು ಉಪಲಬ್ಧವಾಗಿದೆ. ಛಾಂದೋಗ್ಯ ಬೃಹದಾರಣ್ಯಕಗಳು ಟೀಕೆಗಳನ್ನು ಹೊರತು ಉಳಿದವುಗಳು ಮುದ್ರಿತವಾಗಿವೆ. ಐತರೇಯಭಾಷ್ಯ ಟೀಕೆಯ ಉಲ್ಲೇಖ ವಿಶ್ವೇಶ್ವರತೀರ್ಥರ ಟೀಕೆಯಲ್ಲಿ ಬಂದಿವೆ. ಜಯತೀರ್ಥ ವಿಜಯದಲ್ಲೂ ಅದರ ಪ್ರಸ್ತಾಪವುಂಟು.

ಉಪನಿಷದ್ಭಾಷ್ಯಗಳಿಗೆ ಶ್ರೀಮದಾಚಾರ್ಯರ ಸಾಕ್ಷಾಚ್ಛಿಷ್ಯರಾರೂ ಟೀಕೆ-ರಚಿಸಿದ ಉಲ್ಲೇಖ ಕಂಡು ಬರುವದಿಲ್ಲ. ನಾರಾಯಣಪಂಡಿತಾಚಾರ್ಯರ ಪುತ್ರರೂ, ತ್ರೈವಿಕ್ರಮಾರ್ಯದಾಸರೆಂದೇ ಹೆಚ್ಚು ಪ್ರಸಿದ್ಧರೂ ಆಗಿರುವ ವಾಮನ ಪಂಡಿತಾಚಾರ್ಯರು ಚಿಕ್ಕ ಏಳು ಉಪನಿಷತ್ತುಗಳಿಗೂ ಟೀಕೆ ರಚಿಸಿರುವ ಪ್ರತೀತಿಯುಂಟು. ಅವುಗಳಲ್ಲಿ ಈಶಾವಾಸ್ಯ, ಕಾಠಕ ಮತ್ತು ಷಟ್ಪ್ರಶ್ನ ಭಾಷ್ಯಗಳ ಟೀಕೆಗಳು ನನ್ನ ಸಂಗ್ರಹದಲ್ಲಿ ಉಪಲಬ್ಧವಿವೆ.

# ಶ್ರುತಿಪ್ರಸ್ಥಾನಗ್ರಂಥ

## ಋಗ್ಭಾಷ್ಯ

ಋಗ್ಭಾಷ್ಯವು ಋಗ್ವೇದದ ಒಟ್ಟು 64 ಅಧ್ಯಾಯಗಳಲ್ಲಿ ಮೊದಲ ಮೂರು ಅಧ್ಯಾಯಗಳಿಗೆ ರಚಿತವಾಗಿರುವ ಭಾಷ್ಯ. ಎಂದರೆ ಒಟ್ಟಾಗಿ ನಲ್ವತ್ತು ಸೂಕ್ತಗಳಿಗೆ 489 ಋಕ್‌ಗಳಿಗೆ ಶ್ರೀಮದಾಚಾರ್ಯರ ವಿವರಣೆ ಲಭಿಸುತ್ತದೆ. ವೈದಿಕಸಾಹಿತ್ಯದ ಸಂಹಿತಾಭಾಗಕ್ಕೆ ರಚಿತವಾಗಿರುವ ಏಕೈಕ ಶ್ಲೋಕರೂಪ ಭಾಷ್ಯ ಎಂಬುದು ಇದರ ಹಿರಿಮೆ.

ವೈದಿಕಸಾಹಿತ್ಯದ ಆಧ್ಯಾತ್ಮಿಕಮಹತ್ತ್ವವನ್ನು ಆ ಮುಂಚಿನ ಯಾವ ದಾರ್ಶನಿಕರೂ ಗುರುತಿಸಿರಲಿಲ್ಲ. ಆರಣ್ಯಕ ಉಪನಿಷತ್ತುಗಳನ್ನು ಅದರಲ್ಲೂ ಉಪನಿಷತ್ತುಗಳನ್ನು ಮಾತ್ರವೇ ಜ್ಞಾನಕಾಂಡ ಎಂದು ಭಾವಿಸಿ ಅವುಗಳಿಗೆ ಮಾತ್ರ ವಿವರಣೆ ನೀಡುವ ಸಂಪ್ರದಾಯ ಆ ಮುಂಚಿನ ಮತಾಚಾರ್ಯರದಾಗಿತ್ತು. ವೇದಾಂತಿಗಳ ನಿಲವು ಹೀಗಿದ್ದರೆ ಮೀಮಾಂಸಕರ ನಿಲವು ಇನ್ನೂ ವಿಚಿತ್ರವಾಗಿತ್ತು. ಅವರು ಉಪನಿಷದ್ಭಾಗವನ್ನು ಗೌಣವಾಗಿ ಕಂಡರು. ಅಲ್ಲದೆ ವೇದಗಳ ಸಂಹಿತಾಭಾಗದಲ್ಲಿ ಬಂದಿರುವುದು ಕರ್ಮದ ಮಹತ್ತ್ವ, ಕರ್ಮವೇ ತಾರಕ, ಅದರಲ್ಲಿ ದೇವರಿಗಾಗಲಿ, ದೇವತೆಗಳಿಗಾಗಲಿ, ಅವಕಾಶವೇ ಇಲ್ಲ ಎಂಬ ಧೋರಣೆ ಅವರದು. ವೇದ ಒಪ್ಪಿಯೂ, ದೇವರನ್ನು ಒಪ್ಪದ ವೈದಿಕನಾಸ್ತಿಕರು ಅವರು. ಹೀಗೆ ವೇದಭಾಗವನ್ನು ಜ್ಞಾನಕಾಂಡ, ಕರ್ಮಕಾಂಡ ಎಂದು ವಿಭಾಗಿಸಿ ಉಪನಿಷತ್ತುಗಳನ್ನು ಮಾತ್ರ ಜ್ಞಾನಕಾಂಡವೆಂದು ಬಗೆದು ಅದಕ್ಕಷ್ಟೇ ಮಹತ್ತ್ವ ಕೊಟ್ಟವರು ಅವರೆಗಿನ ವೇದಾಂತಿಗಳಾಗಿದ್ದರೆ, ಕರ್ಮವೇ ತಾರಕವೆಂದು ಬಗೆದು ಮಂತ್ರ ಬ್ರಾಹ್ಮಣಗಳಿಗೆ ಮಾತ್ರ ಜೋತುಬಿದ್ದವರು ಮೀಮಾಂಸಕರಾಗಿದ್ದರು.

ಸಮಗ್ರ ವೈದಿಕಸಾಹಿತ್ಯವೂ ಒಟ್ಟಾಗಿಯೇ ತತ್ತ್ವಶಾಸ್ತ್ರ, ಕರ್ಮಬೋಧಕ ಭಾಗವೂ ಮೂಲತಃ ಜ್ಞಾನಸಾಧನವನ್ನಾಗಿಯೆ ಅದನ್ನು ವಿಧಿಸಿದೆ ಎಂಬುದನ್ನು 'ವೇದೈಶ್ಚ ಸರ್ವೈರಹಮೇವ ವೇದ್ಯಃ' 'ಸರ್ವೇ ವೇದಾ ಯತ್ಪದಮಾಮನಂತಿ' ಮೊದಲಾದ ಪ್ರಮಾಣಗಳಿಂದ ಸಾಧಿಸಿ ಅವುಗಳಲ್ಲಿನ ತಾತ್ತ್ವಿಕ ಮಹತ್ತ್ವವನ್ನು ಹೊರಹಾಕಿದ ಶ್ರೇಯಸ್ಸು ಶ್ರೀ ಮಧ್ವಾಚಾರ್ಯರದು.

ಋಗ್‌ಭಾಷ್ಯವು ಓಂಕಾರ, ವ್ಯಾಹೃತಿ ಮತ್ತು ಗಾಯತ್ರೀ ಮಂತ್ರಗಳ ಅರ್ಥ

ವಿವರಣೆಯೊಂದಿಗೆ ಪ್ರಾರಂಭವಾಗಿ ಅವುಗಳಿಂದಲೂ ಪುರುಷಸೂಕ್ತದಿಂದಲೂ ಪ್ರತಿಪಾದ್ಯನಾದ ಶ್ರೀಹರಿಯೇ ಸಕಲ ವೇದಾರ್ಥವೂ ಆಗಿರುವನು ಎಂಬುದನ್ನು ಪ್ರತಿಪಾದಿಸುತ್ತದೆ. ಪ್ರಥಮ ಸೂಕ್ತವನ್ನು ವ್ಯಾಖ್ಯಾನಿಸಿದ ನಂತರ ಆಚಾರ್ಯರು ವೈದಿಕ ಸಾಹಿತ್ಯದ ಅಂತರ್ದರ್ಶನಕ್ಕೆ ನೆರವಾಗುವ ಒಂದು ಅಪೂರ್ವಭೂಮಿಕೆಯನ್ನು ನೀಡಿದ್ದಾರೆ.

ಋಷಿ ದೇವತಾದಿಗಳ ಪರಿಜ್ಞಾನವಿಲ್ಲದ ವೈದಿಕ ಸಾಹಿತ್ಯದ ಅಧ್ಯಯನ ತಾರಕವಾಗುವ ಬದಲು ಮಾರಕವಾದೀತು ಎಂಬ ಮಾತು ವೇದದಲ್ಲೇ ಬಂದಿದೆ: "ಯೋ ಹ ವಾಽವಿದಿತಾರ್ಷಛಂದೋದೈವತಬ್ರಾಹ್ಮಣೇನ ಮಂತ್ರೇಣ ಯಜತಿ ಯಾಜಯತಿ ವಾಽಧ್ಯಾಪಯತಿ ಸ್ಥಾಣುಂ ವರ್ಛತಿ ಗರ್ತೇ ವಾ ಪದ್ಯತೇ ಪ್ರವಾಮೀಯತೇ ಪಾಪೀಯಾನ್ ಭವತಿ ತಸ್ಮಾದೇತಾನಿ ಮಂತ್ರೀ ವಿದ್ಯಾತ್" — (ಸಾಮವೇದ ಬ್ರಾಹ್ಮಣ)

ಆದರೆ ವೇದಗಳು ಅನಂತವಾಗಿರುವದರಿಂದ ಅವೆಲ್ಲವುಗಳ ಋಷಿ, ಪ್ರತಿಪಾದ್ಯ ದೇವತೆ ಮೊದಲಾದವುಗಳನ್ನು ಅರಿಯುವದೆಂತು? ಎಂಬ ಸಮಸ್ಯೆಗೆ ಮೂಲಭೂತ ಪರಿಹಾರವನ್ನು ಋಷಿ ದೇವತಾ ಛಂದಸ್ಸುಗಳ ಪರಿಜ್ಞಾನದ ಮೂಲ ಸ್ವರೂಪವನ್ನೇ ವಿವೇಚಿಸಿ ನೀಡಿದ್ದಾರೆ. ಇಂದು ವೇದದ್ರಷ್ಟಾರರೆಂದು ಪ್ರಸಿದ್ಧರಾಗಿರುವ ವಿಶ್ವಾಮಿತ್ರಾದಿಗಳೆಲ್ಲ ಒಂದು ಹಂತದ ಋಷಿಗಳು ಮಾತ್ರ. ಅವರಿಗಿಂತ ಪ್ರಧಾನರಾದ ಋಷಿಗಳು ಇರುವರು. ಸಕಲವಿದ್ಯೆಗಳಿಗೂ ವೇದಗಳಿಗೂ ಶ್ರೀ ಹರಿಯೇ ಪ್ರಧಾನವಾಗಿ ದ್ರಷ್ಟಾರ ಮುನಿ. ಎಲ್ಲಾ ವಿದ್ಯೆಗಳೂ ಅವನ ಹಯಗ್ರೀವ ರೂಪದ ಹೊರಹೊಮ್ಮಿ ಬಂದಿವೆ ಎಂಬುದಾಗಿ ಆಕರಗಳು ಸಾರಿವೆ. ಬ್ರಹ್ಮದೇವರಿಗೆ ಕಪಿಲ ರೂಪದಿಂದ ಸಕಲ ವೇದಗಳನ್ನೂ ಉಪದೇಶಿಸಿದವನು ಅವನೇ. ಹಾಗೆ ಶ್ರವಣ ಮಾಡಿದ ಬ್ರಹ್ಮದೇವರು ವೇದಗಳ ಅನಂತರದ ಋಷಿಗಳು. ಅವರ ಅನಂತರದ ದ್ರಷ್ಟಾರರಾಗಿ ವೇದಗಳಿಗೆ ಶೇಷನೂ ಪಂಚರಾತ್ರಕ್ಕೆ ಗರುಡನೂ ಇರುವನು. ವೇದ ಮಂತ್ರಕ್ಕೆ ಭಾಗಶಃ ದರ್ಶನಮಾಡಿದ ವಿಶ್ವಾಮಿತ್ರ ಮೊದಲಾದವರು ಅನಂತರದ ಋಷಿಗಳು. ವೇದವಾಕ್ಯಗಳನ್ನು ಸ್ವಯಂ ಸಾಕ್ಷಾತ್ಕರಿಸಿಕೊಳ್ಳುವವರೆಲ್ಲರೂ ಆ ವೇದ ಭಾಗಗಳಿಗೆ ಋಷಿಗಳೆನ್ನಿಸುವರು :

**ಯಃ ಪಶ್ಯತಿ ಸ್ವಯಂ ವಾಕ್ಯಂ ಸ ಋಷಿಸ್ತಸ್ಯ ಕೀರ್ತಿತಃ.**

## ವೇದಗಳ ಸ್ವರಗಳಿಗೂ ವಿಶಿಷ್ಟಾರ್ಥವುಂಟು

ಸ್ವರಗಳು ವೈದಿಕ ಸಾಹಿತ್ಯದ ವಿಶಿಷ್ಟ ಲಕ್ಷಣ. ಅಂತಹ ಪ್ರತಿಯೊಂದು ಸ್ವರಕ್ಕೂ ತನ್ನದೇ ಆದ ವಿಶಿಷ್ಟ ಅರ್ಥವುಂಟು ಎಂಬುದನ್ನು ಆಚಾರ್ಯರು ವಿವರಿಸಿರುವರು:

**ದಾರ್ಢ್ಯಮೇವಾನುದಾತ್ತಾರ್ಥಃ ಉದಾತ್ತಸ್ಯೋಚ್ಚತಾಽರ್ಥತಾ ।**
**ನೀಚತಾ ಸ್ವರಿತಸ್ಯಾರ್ಥಃ ಪ್ರಚಯಸ್ಯ ಯಥಾಸ್ಥಿತಿಃ ॥**
**ಸಮಾಹಾರೇಽಖಿಲಾ ಅರ್ಥಾಃ ಸ್ವರಾರ್ಥಾನಾಮಿಯಂ ಸ್ಥಿತಿಃ ॥**

ಬೇರಾವ ವೇದಭಾಷ್ಯಕಾರರೂ ಸ್ವರಗಳ ಅರ್ಥದ ಬಗೆಗಿನ ಈ ಸೂಕ್ಷ್ಮವನ್ನು ಗುರುತಿಸಿರಲಿಲ್ಲ. ಸಾಯಣ ಭಾಷ್ಯವೂ ಇದಕ್ಕೆ ಅಪವಾದವಾಗಿಲ್ಲ. ವೈದಿಕ ಸಾಹಿತ್ಯದ ಅಧ್ಯಯನಕ್ಕೆ ಅತ್ಯಂತ ಆವಶ್ಯಕವಾಗಿದ್ದ ಈ ವಿವರವನ್ನು ಪ್ರಥಮ ಬಾರಿಗೆ ಸಾಧಾರವಾಗಿ ನಿರೂಪಿಸಿದ ಶ್ರೇಯಸ್ಸು ಶ್ರೀಮಧ್ವಾಚಾರ್ಯರದು.

ಹೀಗೆ ಋಷ್ಯಾದಿಗಳ ಬಗ್ಗೆ ಸಮಗ್ರ ಪರಿಜ್ಞಾನದ ಮೂಲಕ ನಡೆಯುವ ವೇದಾಧ್ಯಯನವು ಅಪರೋಕ್ಷಜ್ಞಾನದ್ವಾರಾ ಮೋಕ್ಷಕ್ಕೆ ಸಾಧನ. ಐಹಿಕ ಫಲವು ಸಹ ಅದನ್ನು ಅಪೇಕ್ಷಿಸುವವರಿಗೆ ಲಭಿಸುವದು. ಸ್ವಾಧ್ಯಾಯಕ್ಕಿಂತ ಪ್ರವಚನ ಸಾವಿರ ಪಟ್ಟು ಮಿಗಿಲು; ಅರ್ಥಪರಿಜ್ಞಾನ ಕೋಟಿ ಪಟ್ಟು ಮಿಗಿಲು. ಅರ್ಥವನ್ನು ಸ್ಫುಟವಾಗಿ ಪ್ರತಿಪಾದಿಸುವವನಿಗೆ ದೊರಕುವ ಫಲವಂತೂ ಅನಂತ. ಹೀಗೆ ಅಧ್ಯಯನ, ಅಧ್ಯಾಪನಗಳ ವೈವಿಧ್ಯ ಮತ್ತು ಫಲಗಳಲ್ಲಿನ ತಾರತಮ್ಯವನ್ನು ಋಗ್ಭಾಷ್ಯದಲ್ಲಿ ವಿವರಿಸಿರುವರು.

## ವೇದಗಳ ಅರ್ಥವೈವಿಧ್ಯ

ವೇದಗಳ ಅರ್ಥ ವಿಸ್ತಾರದ ಬಗ್ಗೆ ಶ್ರೀ ಮಧ್ವಾಚಾರ್ಯರು ನೀಡಿದ ವಿವರ ವಾಙ್ಮಯಪ್ರಪಂಚದಲ್ಲೇ ಅಪೂರ್ವ. ಸ್ಕಂದಪುರಾಣದ ಆಧಾರವನ್ನಿತ್ತು ಅವರು ಸಾರಿದರು; ವೇದಗಳಿಗೆ ಅತಿ ಕಡಿಮೆಯೆಂದರೂ ಮೂರು ಅರ್ಥಗಳು; ಮಹಾಭಾರತಕ್ಕೆ ಹತ್ತು ಅರ್ಥಗಳು ಮತ್ತು ವಿಷ್ಣುಸಹಸ್ರನಾಮದ ಪ್ರತಿನಾಮಕ್ಕೂ ನೂರು ಅರ್ಥಗಳು:

**ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ ।**
**ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್ ॥**

ಹಾಗೆ ತಿಳಿಸಿದ್ದು ಮಾತ್ರವಲ್ಲದೆ ಅಂತಹ ಅರ್ಥವಿಶೇಷಗಳನ್ನು

ನಿರೂಪಿಸಿಯೂ ತೋರಿಸಿರುವರು. ವೇದಗಳ ಆಧ್ಯಾತ್ಮಿಕಾರ್ಥ ಅವರ ಮತ್ತೊಂದು ಕೊಡುಗೆ. ಸೋಮ ಎಂದರೆ ಮನಸ್ಸು, ಹರಿಗಳು ಎಂದರೆ ಇಂದ್ರಿಗಳು, ವೃತ್ರ ಎಂದರೆ ಮಿಥ್ಯಾಜ್ಞಾನ, ಅತ್ರಿ ಎಂದರೆ ದೇವ, ಮನುಷ್ಯ ಮತ್ತು ಅಪವರ್ಗ ಎಂಬ ಮಾರ್ಗತ್ರಯಗಳಿಂದ ರಹಿತರಾದ ಅಸುರರು. ಇಂತಹ ಅರ್ಥಗಳು ಅವರ ಭಾಷ್ಯದಲ್ಲಿ ಓತ-ಪ್ರೋತವಾಗಿ ತುಂಬಿದೆ. ಯಜ್ಞದ ಬಾಹ್ಯ ಪರಿಕಲ್ಪನೆಯಲ್ಲೇ ಅನೇಕ ತಲೆಮಾರುಗಳನ್ನು ಕಳೆದಿದ್ದ ಜಿಜ್ಞಾಸುವರ್ಗಕ್ಕೆ ಇಂತಹ ಅಪೂರ್ವಾರ್ಥಗಳ ಮೂಲಕ ಒಳಗಣ್ಣು ತೆರೆಸಿದ ಹಿರಿಮೆ ಅವರದ್ದು. ಆಚಾರ್ಯರ ಈ ಕೊಡುಗೆಯನ್ನು ಈಚಿನ ದಿನಗಳಲ್ಲಿ ಅರವಿಂದಾಶ್ರಮದ ಕಪಾಲಿಶಾಸ್ತ್ರಿಗಳಂತಹವರೂ ಸಹ ಮುಕ್ತ ಕಂಠದಿಂದ ಶ್ಲಾಘಿಸಿರುವರು (ಪುಟ. 62)

"ಏವಮಪಿ ನ ಕೋಽಪ್ಯಾಸೀದ್ವೇದಾನಾಮಧ್ಯಾತ್ಮಪರತ್ವ ಪಕ್ಷಸ್ಯೋಜ್ಜೀವನಾಯ ಪ್ರವೃತ್ತಃ ಇತಿ ನ ಶಕ್ಯಂ ವದಿತುಂ ಆಚಾರ್ಯಮಧ್ವ ಗ್ರಂಥೇಷು ಜಾಗ್ರತ್ಸು । ಯತ್ ಸಾಯಣಾತ್ ಕಿಂಚಿತ್ಪೂರ್ವಂ ಆನಂದತೀರ್ಥಃ ಆಚಾರ್ಯಃ ಋಙ್ಮಂತ್ರತಾತ್ಪರ್ಯ ಪರಿಗ್ರಹಸ್ಯ ಪ್ರಕಾರೋಪಪ್ರದರ್ಶನಾಯ ಋಕ್ಸಂಹಿತಾಯಾ ಪ್ರಥಮಮಂಡಲೀಯಾನಿ ಚತ್ವಾರಿಂಶತ್ಸೂಕ್ತಾನಿ ವ್ಯಾಚಖ್ಯೌ। ವೈದಿಕಧರ್ಮಾಚರಣೇ ಕರ್ಮಾನುಷ್ಠಾನಸ್ಯಾವಶ್ಯಕತಯಾ ಕರ್ಮಪರವ್ಯಾಖ್ಯಾನಂ ಮಂತ್ರಾಣಾಂ ಸಾಧ್ವಿತಿ ಕರ್ಮಕರಣಮೇವ ಮುಖ್ಯಂ ತಾತ್ಪರ್ಯಮಿತಿಮತಮಸಾ ಧ್ವಿತಿ ಚ ಮಧ್ವ ಆಚಾರ್ಯೋ ಮನ್ಯತೇ । ಮಂತ್ರಾಣಾಮಧ್ಯಾತ್ಮಪರೋಽರ್ಥೋ ಮುಖ್ಯಃ ಸರ್ವೇಷಾಂ ವೇದಾನಾಂ ವಿಷ್ಣುಪದಪ್ರಾಪ್ತಿರೂಪಪರಮಪುರುಷಾರ್ಥೇ ತಾತ್ಪರ್ಯಮಿತಿ ಚ ಪ್ರತಿಪಾದಯತಿ ಆಚಾರ್ಯಃ । ಲಘು-ವಿಸ್ತರಂ ಮಾಧ್ವಮೃಗ್ಭಾಷ್ಯಮ್ । ವಿರಲಾನ್ ಮಾಧ್ವಸಂಪ್ರದಾಯಪಂಡಿತಾನಂತರಾ ಪ್ರಾಯಶೋ ವೇದವಿಚಾರಿಣಾಮವಿದಿತಮೇವ ತಾದೃಶಂ ಅಸಮಗ್ರಮಪಿ ಅಸ್ತ್ಯೇವ ವೇದಭಾಷ್ಯಮಿತಿ । ತದನುಸಾರಿಣಾ ಮಹಾನುಭಾವೇನ ಶ್ರೀರಾಘವೇಂದ್ರಸ್ವಾಮಿನಾ ಯೋಗೀಂದ್ರೇಣ ಆಚಾರ್ಯಸ್ಯ ಭಾಷ್ಯಮನುಸೃತ್ಯಾಶಯಾನ್ ವಿಶದಯಂತೀ ಮಂತ್ರಾರ್ಥಮಂಜರೀ ನಾಮ ವ್ಯಾಖ್ಯಾ ನಿಬದ್ಧಾ । ಅಗ್ನ್ಯಾದಿದೇವತಾಪರತಯಾ ತದಂತರ್ಗತ ಪರದೇವತಾಭೂತವಿಷ್ಣುಪರತಯಾ ಆಧ್ಯಾತ್ಮಪರತಯಾ ಚ ಋಚೋ ವ್ಯಾಖ್ಯೇಯಾಃ ಕಿಲ । ಯದ್ಯಪಿ ತದುಕ್ತ ತ್ರಿವಿಧಾರ್ಥಪ್ರಕಾರಪರೀಕ್ಷಾಯೈ ನ ವಯಂ ಪ್ರವೃತ್ತಾಃ ಸ್ಮಃ ತಥಾಪಿ ಕಥಮರ್ಥತ್ರಯಂ ಋಚಾಂ ಸಿದ್ಧ್ಯತಿ ಅಸ್ಮಿನ್ನರ್ಥಾವಿಷ್ಕಾರನಯ ಇತಿ ಸಮಾಸತೋ ಬ್ರೂಮಃ। ಆವಶ್ಯಕಸ್ಥಲೇಷು ಮಂತ್ರಾರ್ಥ ಮಂಜರೀ ವಾಕ್ಯಾನ್ಯೇವ ಉದ್ಧೃತ್ಯೋದಾಹರಿಷ್ಯಾಮಃ ॥

## ಶ್ರೀಮಾಧ್ವಋಗ್ಭಾಷ್ಯ–ಪ್ರಶಸ್ತಿಕಾ

'ವೇದೋ' ವಿಶ್ವವಿಭೂತ್ಯರ್ಥಂ ವಿಶ್ವವಿದ್ಯೋದಯಾಸ್ಪದಮ್ ।
ವಿಶ್ವೈಕಲ್ಯಾಣಸಿದ್ಧ್ಯರ್ಥಂ 'ವೇದೋ' ವಿಜಯತೇತರಾಮ್ ॥ ೧ ॥

'ಋಗ್ಭಾಷ್ಯಂ' ವೈ ವಿಜಯತೇ ಮಧ್ವಾಚಾರ್ಯಮುಖೋದಿತಮ್ ।
ಅನುಷ್ಟುಪ್ಛಂದಸಾ ಬದ್ಧಂ ಸಾರ್ಥತ್ರಯಸಮರ್ಥಿತಮ್ ॥ ೨ ॥

ಅಗ್ನ್ಯಾದಿ ದೇವತಾದ್ಯರ್ಥಮಧ್ಯಾತ್ಮಂ ಚಾಂತರಾರ್ಥಕಮ್ ।
ತದಂತರ್ಯಾಮಿವಿಷ್ಣ್ವರ್ಥಂ ತತ್ಸಂಕೇತಾದ್ವಿದುಃ ಸಮಮ್ ॥ ೩ ॥

ಏಕೋನನವತ್ಯಧಿಕಂ ಚತುಃ ಶತಮೃಚಾಂ ಮತಮ್ ।
ಚತ್ವಾರಿಂಶತ್ ಸೂಕ್ತಕ್ಲೃಪ್ತಂ ಸಂಕ್ಷೇಪಾತ್ತತ್ರ ವಾಙ್ಮಯಮ್ ॥ ೪ ॥

ಅಲ್ಪಗ್ರಂಥಸಮೂಹಾಪ್ತಂ ಗಂಭೀರಂ ಗರ್ಭಿತಾರ್ಥಕಮ್ ।
ವೇದಾರ್ಥಾನಾಂ ಪ್ರಕಾಶಾರ್ಥಂ ವಿದುಷಾಂ ಮಾರ್ಗದರ್ಶಕಮ್ ॥ ೫ ॥

ಅತಿಪ್ರಾಚೀನಮಪಿ ತದ್‌ಗುಪ್ತಮದ್ಯಾಪಿ ಗೋಪಿತಮ್ ।
ಸಾಂಪ್ರತಂ ತತ್‌ಪ್ರಕಾಶೇನ ಭೂಯಾಜ್ಜ್ಞಾನಾಭಿವೃದ್ಧಯೇ ॥ ೬ ॥

ದೇವತೋಪಾಸನಾದ್ಯರ್ಥಂ ಯಜ್ಞಕರ್ಮಾದಿಸಿದ್ಧಯೇ ।
ಈಶಸಂತಪ್ರಸಾದಾರ್ಥಂ ಋಗ್ಭಾಷ್ಯಮುಪಕಾರಕಮ್ ॥ ೭ ॥

ತತ್ತ್ವಜ್ಞಾನೋದಯದ್ವಾರಾ ಜನತಾಸುಖಶಾಂತಯೇ ।
ಋಗ್ಭಾಷ್ಯಸ್ಯ ಪ್ರಕಾಶೇನ ಪ್ರೀಯತಾಂ ಭಗವಾನ್ ಇತಿ ॥ ೮ ॥

'ದೈವರಾತಸ್ಯ'ವಿಜ್ಞಪ್ತಿಃ ಸಮೃದ್ಧ್ಯೈ ವೇದಸಂವಿದಾಮ್ ।
ಜನತಾ ಜಗದೀಶೇಷ್ಟ್ಯೈ ಭೂಯಾತ್ ಸಂತುಷ್ಟಯೇ ಸತಾಮ್[೧] ॥ ೯ ॥

ವೇದಾರ್ಥ ನಿರ್ಣಯಕ್ಕೆ ಶಿಕ್ಷಾ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ ಮತ್ತು ಕಲ್ಪ ಎಂಬ ಆರು ವೇದಾಂಗಗಳ ಸಹಾಯ ಅನಿವಾರ್ಯ. ವೇದಾಂಗಗಳೆಂಬ ಹೆಸರಿನಲ್ಲೇ ಅವುಗಳ ಮಹತ್ತ್ವ ಅಡಗಿದೆ. ಅವುಗಳಲ್ಲೂ ನಿರುಕ್ತಾ ಮತ್ತು ವ್ಯಾಕರಣಗಳ ಸ್ಥಾನ ಇನ್ನೂ ಪ್ರಮುಖ. ಪಾಣಿನಿವ್ಯಾಕರಣ ಮತ್ತು ಯಾಸ್ಕ ನಿರುಕ್ತಗಳನ್ನೇ ಪ್ರಧಾನ ವೇದಾಂಗಗಳೆಂದು ಭ್ರಮಿಸಿ, ಅವುಗಳ ಉಪಯೋಗಕ್ಕಷ್ಟೇ ಸೀಮಿತಗೊಂಡಿದ್ದ ಜನರಿಗೆ ವ್ಯಾಸನಿರುಕ್ತ ಮತ್ತು ಮಹಾವ್ಯಾಕರಣಗಳೇ ಪ್ರಧಾನ ವೇದಾಂಗಗಳಾದ ವ್ಯಾಕರಣ ನಿರುಕ್ತಗಳೆಂದು ಶ್ರುತಪಡಿಸಿದವರು

---

೧. ದೈವರಾತರ ಈ ವಾಕ್ಯಗಳನ್ನು ಆಲೂರುವೆಂಕಟರಾಯರು ಪ್ರಕಟಿಸಿದ್ದ ಶ್ರೀಮಾಧ್ವ ಋಗ್ಭಾಷ್ಯಪ್ರಶಸ್ತಿಕಾ ಎಂಬ ಕಿರುಹೊತ್ತಿಗೆಯಿಂದ ಆಯ್ದು ಕೊಡಲಾಗಿದೆ.

ಶ್ರೀಮದಾಚಾರ್ಯರು. ಅವುಗಳ ಉಪಯೋಗವನ್ನು ಪಡೆಯುವ ವಿಧಾನವನ್ನು ತಮ್ಮ ಭಾಷ್ಯದಲ್ಲಿ ನಿರೂಪಿಸಿ ತೋರಿಸಿರುವರು. "ಆಧಿಕ್ಯೇ ಅಧಿಕಂ", "ಸ್ವಾತಂತ್ರ್ಯೇ ಪ್ಯತ್ಯಯಃ", "ರೇಫಃ ಸ್ವರವ್ಯತ್ಯಯಶ್ಚ ತದಾಧಿಕ್ಯಾರ್ಥಮೀರಿತೌ", "ಪುಂಸೋಃ ಪೂರ್ವಸ್ಮಿನ್ ಸ್ವರಿತಾಂತೇ ಸಮಾಸೋ ಬಹುವ್ರೀಹಿಃ", "ಸ್ವಾತಂತ್ರ್ಯೇ ಭೇದಕರಣೇ ಚೋಕ್ತ ವ್ಯತ್ಯಾಸಃ". "ಅತಿನಿಶ್ಚಿತೇಽರ್ಥೇ ಭೂತಶಬ್ದಶ್ಚ", "ಸರ್ವಾ ವಿಭಕ್ತಯಶ್ಚೇತ್ವ ಮಭಾವವಾಚಿನ್ಯ ಏವ ಚ". "ದಾರ್ಢ್ಯೇ ಸ್ವಪ್ರತಿಯೋಗಿತಾ"— ಇವು ಅವರು ಉದಾಹರಿಸಿರುವ ಕೆಲವು ಮಹಾವ್ಯಾಕರಣಸೂತ್ರಗಳು. ಕಂಪ ಮೊದಲಾದವುಗಳಿಗೂ ಸಾಧಾರವಾಗಿ ಅರ್ಥವಿಶೇಷಗಳನ್ನು ತಿಳಿಸಿಕೊಟ್ಟಿರುವರು.

**ಕಂಪೋಽಶೇಷಗ್ರಹೇ ಕ್ವಾಪಿ ಲಜ್ಜಾಯಾಂ ವಾ ಪುರಾತನೇ ।**
**ಪೃಥಕ್ತ್ವೇ ಧೃಷ್ಯತಾಯಾಂ ವಾ ಹರಿಣಾಕ್ಸ್ವಂಹಿತೋದಿತಃ ॥**

ವೇದಾರ್ಥಗಳನ್ನು ಮಾಡುವಲ್ಲಿ ಗುಣಾಧಿಕ್ಯವೇ ಮುಖ್ಯ ಮಾನದಂಡ. ಉಪಕ್ರಮಾದಿಗಳೇ ತಾತ್ಪರ್ಯಾರ್ಥವನ್ನು ಗ್ರಹಿಸಲು ಮುಖ್ಯಸಾಧನ ಎಂಬುದಾಗಿಯೂ ತಿಳಿಸಿರುವರು.

**ಗುಣಾಧಿಕ್ಯಂ ಯೇನ ಭವೇದ್ವೇದಸ್ಯಾರ್ಥಃ ಸಏವಹಿ ।**
**ಉಪಕ್ರಮಾದಯೋ ಯತ್ರ ತಾತ್ಪರ್ಯಾರ್ಥಃ ಸ ಏವ ಹಿ ॥**

ಋಗ್‌ಭಾಷ್ಯವು ಮೊದಲ ಮೂರು ಅಧ್ಯಾಯಗಳಿಗೆ ಮಾತ್ರ ಇರುವದರಿಂದ ಇದೊಂದು ಅಪೂರ್ಣ ಕೃತಿಯೇ ಎಂಬ ಶಂಕೆ ಕೆಲವರದು. ಅದಕ್ಕೆ ಅದರ ಟೀಕೆಯಲ್ಲಿ ಶ್ರೀ ಜಯತೀರ್ಥರು ಇಷ್ಟು ಭಾಷ್ಯದಿಂದ ಮುಂದಿನ ವೇದ ಭಾಗಕ್ಕೆ ಅರ್ಥ ಮಾಡಿಕೊಳ್ಳಲು ಮಾರ್ಗದರ್ಶನ ಸಾಕಾಗುವದರಿಂದ ಮುಂದೆ ಆಚಾರ್ಯರು ಭಾಷ್ಯ ರಚಿಸಿಲ್ಲ ಎಂಬುದಾಗಿ ಸಮಾಧಾನ ನೀಡಿರುವರು :

**ಅನೇನ ಮಾರ್ಗೇಣೋತ್ತರಸ್ಯಾಪಿ ಮಂತ್ರಜಾತಸ್ಯ ವ್ಯಾಖ್ಯಾನಂ**
**ಸಿದ್ಧಮೇವಾತ ಉಪರಮ್ಯತ ಇತಿ ಹಿಶಬ್ದೇನಾಚಷ್ಟೇ ಭಗವಾನ್ ಮುನಿಃ.**

ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರೊಬ್ಬರಲ್ಲಾದ ಶ್ರೀಮಾಧವತೀರ್ಥರು ಋಗ್‌ಭಾಷ್ಯವನ್ನು ಅನುಸರಿಸಿ ಮುಂದಿನ ಸಕಲವೇದಭಾಗಕ್ಕೂ ವಿವೃತಿಯನ್ನು ರಚಿಸಿದ್ದರು ಎಂದು ಪ್ರಬಲ ಪ್ರತೀತಿಯುಂಟು. ಶ್ರೀ ರಾಘವೇಂದ್ರತೀರ್ಥರು ಋಗ್‌ಭಾಷ್ಯ ಮತ್ತು ಅದರ ಟೀಕೆಗಳನ್ನು ಆಧರಿಸಿ ಒದಗಿಸಿರುವ ಋಗರ್ಥ ಮಂಜರಿಯ ಮಾದರಿಯಲ್ಲಿ ವೇದತ್ರಯಗಳಿಗೂ ವಿವೃತಿ ರಚಿಸಿದ್ದ ಉಲ್ಲೇಖ ಗುರುಗುಣಸ್ತವನದಲ್ಲಿದೆ.

ಶ್ರೀಮದಾಚಾರ್ಯರ ಋಗ್ಭಾಷ್ಯಕ್ಕೆ ಸಂಬಂಧದೀಪಿಕಾ ಎಂಬ ಶ್ರೀ ಜಯತೀರ್ಥರ ಅಪೂರ್ವ ಟೀಕೆಯುಂಟು. ಅದಕ್ಕೆ ಬಿದರಹಳ್ಳಿ ಶ್ರೀನಿವಾಸತೀರ್ಥರು ವಿದ್ಯಾಧೀಶತೀರ್ಥರು ಅವರ ತಮ್ಮ ಕೇಶವಾಚಾರ್ಯ ಪಾಂಡುರಂಗಿಯವರು, ಕಂಬಾಲೂ ರಾಮಚಂದ್ರತೀರ್ಥರು, ಸತ್ಯನಾಥತೀರ್ಥರು, ಛಲಾರಿ ನರಸಿಂಹಾಚಾರ್ಯರು ಮತ್ತು ಸುಮತೀಂದ್ರತೀರ್ಥರು ರಚಿಸಿರುವ ಟಿಪ್ಪಣಿಗಳು ಉಪಲಬ್ಧವಿವೆ. ಸತ್ಯನಾಥರು, ಛಲಾರಿಯವರು, ಮತ್ತು ಬಿದರಹಳ್ಳಿಯವರ ಟಿಪ್ಪಣಿಗಳು ಮಾತ್ರ ಮುದ್ರಿತವಾಗಿವೆ.

## ಪ್ರತಿಪಾದ್ಯ ದೇವತೆಗಳು

ಸಕಲವಿದ್ಯೆಗಳಿಗೂ ಹಾಗೆಯೇ ವೇದಗಳಿಗೂ ನಾರಾಯಣನೇ ಪ್ರಧಾನ ಪ್ರತಿಪಾದ್ಯದೇವತೆ. ಅನಂತರದ ದೇವತೆ ಮಹಾಲಕ್ಷ್ಮೀ. ಬ್ರಹ್ಮವಾಯುಗಳು ಅನಂತರದ ದೇವತೆಗಳು. ಇವರೆಲ್ಲರೂ ಸಕಲ ವೇದಗಳಿಗೂ ಪ್ರತಿಪಾದ್ಯರು. ಆದರೆ ಪರಮಮುಖ್ಯವೃತ್ತಿಯಿಂದ ಶ್ರೀಹರಿಮಾತ್ರವೇ ಪ್ರತಿಪಾದ್ಯ. ಮಹಾಲಕ್ಷ್ಮಿ ಬ್ರಹ್ಮವಾಯುಗಳು ಅನಂತರದಲ್ಲಿ ಪ್ರತಿಪಾದ್ಯರೆಂದು ತಿಳಿಯಬೇಕು. ತಮ್ಮ ಮೇಲಿನವರಿಗೆ ಮೀಸಲಾದ ಸೂಕ್ತಗಳನ್ನು ಹೊರತು ಪಡಿಸಿ ಇಂದ್ರಾದಿ ಇತರ ದೇವತೆಗಳೂ ಯಥೋಚಿತವಾಗಿ ವೇದಪ್ರತಿಪಾದ್ಯರಾಗಿರುವರು.

ವೇದಗಳು ಅನಾದಿ ಮತ್ತು ನಿತ್ಯ; ಆದ್ದರಿಂದ ಅನಾದಿನಿತ್ಯನಾದ ನಾರಾಯಣನೇ ಅವುಗಳ ಪರಮಮುಖ್ಯಪ್ರತಿಪಾದ್ಯ ದೇವತೆ. ವೇದಗಳು ನಿರ್ದೋಷವಾದ್ದರಿಂದ ಸದಾ ಸಕಲದೋಷದೂರನಾದ ಶ್ರೀಹರಿಯೇ ಅವುಗಳ ಪ್ರಧಾನ ದೇವತೆ. ಅನ್ಯ ದೇವತಾಪರವೆಂದು ತೋರುವ ಇಂದ್ರ, ಅಗ್ನಿ ಮೊದಲಾದ ಸೂಕ್ತಗಳಿಂದಲೂ ಆಯಾ ಶಬ್ದವಾಚ್ಯನೂ ಮತ್ತು ಆಯಾ ದೇವತೆಗಳ ಅಂತರ್ಯಾಮಿಯೂ ಆದ ಶ್ರೀಹರಿಯೇ ಮುಖ್ಯ ಪ್ರತಿಪಾದ್ಯನಾಗಿರುವನು.

ಋಗ್ವೇದಕ್ಕೆ ಇಂದ್ರನೂ, ಯಜುರ್ವೇದಕ್ಕೆ ಸೂರ್ಯನೂ ಸಾಮವೇದಕ್ಕೆ ಸೋಮನೂ 3ನೇ ಹಂತದ ಋಷಿಗಳಾಗಿರುವರು. ವಿಷ್ಣು, ಬ್ರಹ್ಮ ವಾಯುಗಳು ಮತ್ತು ಗರುಡರಂತೆ ಕ್ರಮವಾಗಿ ಅವರ ಪತ್ನಿಯರಾದ ಮಹಾಲಕ್ಷ್ಮೀ, ಸರಸ್ವತಿ-ಭಾರತಿಯರು ಋಷಿಗಳಾಗಿರುವರು. ಈ ತೆರನಾದ ಋಷಿಗಳ ಪರಿಜ್ಞಾನದಿಂದ ವಿಶೇಷ ಫಲವುಂಟು ಎಂಬುದಾಗಿಯೂ ಆಚಾರ್ಯರು ತಿಳಿಸಿರುವರು.

**'ಏತಜ್ಜ್ಞಾನಾದದೃಷ್ಟಸ್ಯ ಫಲಸ್ಯಾಪ್ತಿಃ ಸ್ಫುಟಂ ಭವೇತ್ ।'**
**ದ್ರಷ್ಟೄಣಾಂ ತು ಚತುರ್ಥಾನಾಂ ಜ್ಞಾನಾದಪ್ಯೈಹಿಕಂ ಭವೇತ್ ॥**

# ಛಂದೋಭಿಮಾನಿ ದೇವತಾ ವಿವರ

ವೇದದ ಛಂದಸ್ಸನ್ನು ತಿಳಿಯುವದೆಂದರೆ ಅಕ್ಷರಗಣನೆಯ ಮೂಲಕ ಗಾಯತ್ರಿ ಮೊದಲಾಗಿ ಛಂದಸ್ಸುಗಳನ್ನಷ್ಟೇ ಗುರುತಿಸಿಕೊಳ್ಳುವದಲ್ಲ. ಆದರೊಂದಿಗೆ ಆಯಾ ಛಂದಸ್ಸುಗಳಿಗಿರುವ ಅಭಿಮಾನಿ ದೇವತೆಗಳನ್ನೂ ತಿಳಿಯಬೇಕು. ಎನ್ನುವ ಮೂಲಕ ಛಂದಃಪರಿಜ್ಞಾನದ ಬಗ್ಗೆ ಹೊಸ ಬೆಳಕನ್ನು ನೀಡಿರುವದು ಋಗ್‌ಭಾಷ್ಯದ ಮತ್ತೊಂದು ವಿಶೇಷ. ಅವರು ನೀಡಿರುವ ವೈದಿಕ ಛಂದಸ್ಸುಗಳ ಅಭಿಮಾನಿದೇವತೆಗಳ ವಿವರ ಹೀಗಿದೆ :

| ಛಂದಸ್ಸು | ಅಭಿಮಾನಿ ದೇವತೆಗಳು |
|---|---|
| ಗಾಯತ್ರೀ | ಮಹಾಲಕ್ಷ್ಮೀ, ಸರಸ್ವತಿ-ಭಾರತಿಯರು, ಗರುಡ ಮತ್ತು ಸ್ವಾಹಾ. |
| ಉಷ್ಣಿಕ್ | ಸಂಜ್ಞಾ |
| ಅನುಷ್ಟುಪ್ | ಸರಸ್ವತಿ, ರೋಹಿಣೀ |
| ಬೃಹತೀ | ಮಹಾಲಕ್ಷ್ಮೀ, ಸರಸ್ವತಿ-ಭಾರತೀಯರು, ಗರುಡ, ತಾರಾ |
| ಪಂಕ್ತಿ | ಶಚೀ, ಮಿತ್ರಾವರುಣರ ಪತ್ನಿಯರು |
| ಜಗತೀ | ವಾರುಣೀ, ಸಕಲದೇವತಾಸ್ತ್ರೀಯರು |
| ಅತಿಛಂದಸ್ | ಸರ್ವದೇವತಾಸ್ತ್ರೀಯರು |
| ವಿರಾಟ್ | ಮಿತ್ರಾವರುಣರ ಪತ್ನಿಯರು |

ಹೀಗೆ ಶ್ರೀಮಧ್ವಾಚಾರ್ಯರ ಋಗ್ಭಾಷ್ಯವು ಅತ್ಯಂತ ಅಪೂರ್ವ ಮಾಹಿತಿಗಳ ವಿಶ್ವಕೋಶವಾಗಿದ್ದು ಇದರ ಸಮಗ್ರ ಅಧ್ಯಯನ ವೈಧಿಕ ಪ್ರಪಂಚವನ್ನು ಸರಿಯಾದ ರೀತಿಯಲ್ಲಿ ಅರ್ಥಮಾಡಿಕೊಳ್ಳಲು ನೀಡುವ ನೆರವು ಅಪಾರವಾದುದು.

ವೇದದ್ರಷ್ಟಾರ ಮುನಿಯೊಬ್ಬರ ಸಮಗ್ರ ಪರಿಚಯವನ್ನು ಅವರು ಮಾಡಿಕೊಟ್ಟಿರುವ ವೈಖರಿಗೆ ಒಂದು ನಿದರ್ಶನ :

**ಅಗ್ನೀನ್ದ್ರಾದಿಗತಂ ಪೃಥಕ್ ಸ್ಥಿತಮಪಿ ಸ್ತೌತ್ಯಚ್ಯುತಂ ಭಕ್ತಿತಃ ।**
**ಸ್ವರ್ಣಸ್ತೂಪ ಇತಿ ಪ್ರಸಿದ್ಧಿಮಗಮದ್ ಯಃ ಸಂಸ್ತುವನ್ ಸೂರ್ಯಗಮ್ ॥**
**ವಿಷ್ಣುಂ ಸ್ವರ್ಣಸಮಾನಚಾರುವಪುಷಂ ಸ್ವರ್ಣಾಭಿಧಂ ಶಾಶ್ವತಂ**
**ತಂ ದೃಷ್ಟ್ವಾ ಪರತೋಽಭವಚ್ಚ ಮಹಿತಃ ಸುಜ್ಞಾನಮಪ್ಯಾಪ್ತವಾನ್ ॥ 2/183**

# ಪ್ರಕರಣಗ್ರಂಥಗಳು

ದಶಪ್ರಕರಣಗಳು ಆಚಾರ್ಯರ ವಿಶಿಷ್ಟರೀತಿಯ ರಚನೆಗಳು. 'ಪ್ರಕರಣ' ಪ್ರಕಾರ ದರ್ಶನಪ್ರಪಂಚಕ್ಕೆ ಹೊಸತಲ್ಲ.

**'ಶಾಸ್ತ್ರೈಕದೇಶಸಂಬದ್ಧಂ ಶಾಸ್ತ್ರಕಾರ್ಯಾಂತರೇ ಸ್ಥಿತಮ್ ।**
**ಆಹುಃ ಪ್ರಕರಣಂ ನಾಮ ಗ್ರಂಥಭೇದಂ ವಿಪಶ್ಚಿತಃ ।'**

ಎಂಬುದು 'ಪ್ರಕರಣ'ದ ಲಕ್ಷಣ. ಪ್ರಮಾಣ ಮತ್ತು ಪ್ರಮೇಯ ಎಂಬ ಶಾಸ್ತ್ರದ ಎರಡು ಮುಖ್ಯ ಭಾಗಗಳಲ್ಲಿ ಯಾವುದಾದರೂ ಒಂದಕ್ಕೆ ಸಂಬಂಧಿಸಿದಂತೆ, ಸ್ವಮತಸ್ಥಾಪನ ಮತ್ತು ಪರಪಕ್ಷಖಂಡನ ಎಂಬ ಎರಡು ಕಾರ್ಯಗಳಲ್ಲಿ ಯಾವುದಾದರೂ ಒಂದನ್ನು ಮಾಡುವ ಕೃತಿವಿಶೇಷವೇ ಪ್ರಕರಣ. ಈ ಲಕ್ಷಣವು ಅವರ ಪ್ರಕರಣಗಳಲ್ಲಿ ಸ್ಪಷ್ಟ. ಅವುಗಳಲ್ಲಿ ತತ್ತ್ವಸಂಖ್ಯಾನ ತತ್ತ್ವವಿವೇಕಗಳು ಪ್ರಮೇಯವಿಭಾಗಕ್ಕೆ ಸಂಬಂಧಿಸಿದ್ದರೆ, ಪ್ರಮಾಣಲಕ್ಷಣ ಕಥಾಲಕ್ಷಣಗಳು ಪ್ರಮಾಣವಿಭಾಗಕ್ಕೆ ಸಂಬಂಧಿಸಿವೆ. ತತ್ತ್ವಸಂಖ್ಯಾನಾದಿಗಳಲ್ಲಿ ಸ್ವಮತಸ್ಥಾಪನೆ ಪ್ರಧಾನವಾಗಿದ್ದರೆ, ಖಂಡನತ್ರಯ ಮತ್ತು ತತ್ತ್ವೋದ್ಯೋತಗಳಲ್ಲಿ ಪರಪಕ್ಷ ನಿರಾಸವಿದೆ. ತತ್ತ್ವೋದ್ಯೋತವು ಖಂಡನತ್ರಯದ ವಿವರಣರೂಪವಾಗಿದ್ದರೆ, ವಿಷ್ಣುತತ್ತ್ವನಿರ್ಣಯವು ಸಕಲಪ್ರಕರಣಗಳ ಸಾರರೂಪವಾಗಿರುವ ಬೃಹತ್ಪ್ರಕರಣವಾಗಿದೆ. ಕರ್ಮನಿರ್ಣಯವು ವೇದಾರ್ಥಮೀಮಾಂಸೆಗೆ ಪ್ರಸ್ತಾವನೆಯಂತಿರುವ ವ್ಯಾಖ್ಯಾನಕ್ರಮದ ನಿರ್ದೇಶನರೂಪ ಪ್ರಕರಣವಾಗಿದೆ.

ಅದ್ವೈತಮತದ ಆಚಾರ್ಯರಾದ ಶಂಕರರು ಈ ಬಗೆಯ ಪ್ರಕರಣಗಳನ್ನು ರಚಿಸಿಲ್ಲ. ಅವರ ಹೆಸರಿನಲ್ಲಿ ಉಪಲಬ್ಧವಿರುವ ಕೆಲವು ಪ್ರಕರಣಗಳು ಅವರವೇ ಎಂಬುದು ಖಚಿತಪಟ್ಟಿಲ್ಲ. ರಾಮಾನುಜಾಚಾರ್ಯರ 'ವೇದಾರ್ಥಸಂಗ್ರಹ' ಮಾತ್ರ ಈ ಬಗೆಯ ರಚನೆ. ಆದರೆ ಅವರ ಮತದ ಸಾರಸರ್ವಸ್ವವನ್ನು ತತ್ತ್ವಸಂಖ್ಯಾನ ತತ್ತ್ವವಿವೇಕಗಳ ಮಾದರಿಯಲ್ಲಿ ಒದಗಿಸುವ ಕೃತಿಗಳನ್ನು ಅವರಾರೂ ರಚಿಸಿಲ್ಲ. ಎಂದರೆ ಮೂಲಕಾರರ ವಾಕ್ಯಗಳಲ್ಲೇ ಅವರ ಸಿದ್ಧಾಂತಕ್ಕೆ ಪ್ರವೇಶ ಪಡೆಯುವ ಸೌಲಭ್ಯ ಮಧ್ವದರ್ಶನಕ್ಕಿರುವಂತೆ ಇತರ ದರ್ಶನಗಳಿಗೆ ಇಲ್ಲವೆಂದೇ ಹೇಳಬೇಕು.

ಪ್ರಮಾಣಲಕ್ಷಣ ಕಥಾಲಕ್ಷಣಗಳು ದ್ವೈತದರ್ಶನದ ಪ್ರಮಾಣಪ್ರಕ್ರಿಯೆ (Epistemology)ಯನ್ನು ನಿಖರವಾಗಿ ತಿಳಿಸುವ ಕೃತಿಗಳು. ಪ್ರಮಾಣಸ್ವರೂಪವೇ ಅಸ್ಪಷ್ಟವಾದಾಗ ಅವುಗಳಿಂದ ಸಾಧಿತವಾಗುವ ಪ್ರಮೇಯಪರಿಕಲ್ಪನೆಯೂ ಅಸ್ಪಷ್ಟವಾಗುವುದು ಅನಿವಾರ್ಯ. ಜ್ಞಾನ ನೀಡುವ ಇಂದ್ರಿಯಗಳಲ್ಲೇ

ದೋಷವಿದ್ದರೆ ಅವುಗಳಿಂದ ಬರುವ ಜ್ಞಾನವು ನಿರ್ದುಷ್ಟವಾಗಿರಲು ಎಂತು ಸಾಧ್ಯ? ಕಾಮಾಲೆ ರೋಗದ ಕಣ್ಣು ಬಿಳಿವಸ್ತುವನ್ನು ಹಳದಿಯಾಗಿ ಗ್ರಹಿಸುವ ಅಪಾಯ ತಪ್ಪಿದ್ದಲ್ಲ! ಅಲ್ಲವೆ!

ಮಧ್ವಾಚಾರ್ಯರು ತಮ್ಮ ದರ್ಶನದ ಪ್ರಮಾಣಮೀಮಾಂಸೆಯನ್ನು ತಮ್ಮ ಈ ಎರಡುಕೃತಿಗಳಲ್ಲೂ ಅನುವ್ಯಾಖ್ಯಾನ ತತ್ತ್ವನಿರ್ಣಯ ಮೊದಲಾದ ಇತರ ಕೃತಿಗಳಲ್ಲೂ ಮಾಡುವ ಮೂಲಕ ಪರಿಪೂರ್ಣವಾದ ಪ್ರಮಾಣಪ್ರಕ್ರಿಯೆಯನ್ನು ಒದಗಿಸಿರುವರು. ಇತರರು ನೀಡುವ ಪ್ರಮಾಣಗಳ ಲಕ್ಷಣ, ವಿಭಾಗ, ಸಂಖ್ಯೆ, ಮೊದಲಾದವುಗಳನ್ನು ವಿಮರ್ಶಿಸಿ ಅವುಗಳ ಅಸಮಗ್ರತೆಯನ್ನು ಸ್ಪಷ್ಟಪಡಿಸಿರು ವರು. ಸಾಕ್ಷಿಪ್ರತ್ಯಕ್ಷ, ಪ್ರಾಮಾಣ್ಯಸ್ವತಸ್ತ್ವ, ಪಟುಪ್ರತ್ಯಕ್ಷ ಅಪಟು ಪ್ರತ್ಯಕ್ಷ, ಸಾವಕಾಶ ನಿರವಕಾಶ ವಾಕ್ಯಗಳ ಬಲಾಬಲ, ಶ್ರುತಿಸ್ಮೃತಿಗಳ ಪ್ರಾಮಾಣ್ಯವ್ಯವಸ್ಥೆ, ಉಪಜೀವ್ಯ ಉಪಜೀವಕ ಎಂಬ ವಿವೇಚನೆ, ಪ್ರಮಾಣಗಳ ವ್ಯಾಪ್ತಿ, ಅನುಮಾನದ ಇತಿಮಿತಿ ಮೊದಲಾಗಿ ಎಲ್ಲವೂ ಪರಿಷ್ಕೃತವಾಗಿದ್ದು, ಜಾಗತಿಕದರ್ಶನ ಪ್ರಪಂಚ ಆವರೆಗೂ ಕಂಡುಕೇಳರಿಯದ ಪ್ರಮಾಣವಿವೇಚನೆಯನ್ನು ನೀಡಿದರು. ಸ್ವತಃ ಸಂಪನ್ನವಾದ ಆದರ ಮಹತ್ತ್ವವನ್ನು ಬ್ರಹ್ಮತರ್ಕ ಮೊದಲಾದ ಅಧಿಕೃತಗ್ರಂಥಗಳ ಉಲ್ಲೇಖದಿಂದ ಸ್ಪಷ್ಟಪಡಿಸಿದರು.

ಈ ಬಗೆಯ ಪ್ರಮಾಣಪ್ರಕ್ರಿಯೆಯನ್ನು ಇತರ ದರ್ಶನಗಳು ಅದರಲ್ಲೂ ಮುಖ್ಯವಾಗಿ ಅದ್ವೈತವಿಶಿಷ್ಟಾದ್ವೈತದರ್ಶನಗಳು ಒದಗಿಸಲಿಲ್ಲ. ಅದ್ವೈತವು ಭಾಟ್ಟ ಮೀಮಾಂಸಕರ ಪ್ರಕ್ರಿಯೆಯನ್ನು ಅಳವಡಿಸಿಕೊಂಡರೆ, ವಿಶಿಷ್ಟಾದ್ವೈತವು ಪ್ರಾಭಾಕರಮೀಮಾಂಸಕರ ಪ್ರಕ್ರಿಯೆಯನ್ನು ಅಳವಡಿಸಿಕೊಂಡಿತು.

ಈ ಕಾರಣಕ್ಕಾಗಿಯೇ ಮಧ್ವದರ್ಶನದಂತೆ ಇತರ ವೇದಾಂತದರ್ಶನಗಳು ಸ್ವಯಂಪೂರ್ಣವಾಗಲು ಸಾಧ್ಯವಾಗಲಿಲ್ಲ. ಆಚಾರ್ಯರ ಪ್ರಮಾಣವಿವೇಚನೆಯ ವಿರಾಡ್ರೂಪದಂತಿರುವ ಕೃತಿಯೇ ಶ್ರೀವ್ಯಾಸರಾಜರ ತರ್ಕತಾಂಡವ.

ಸಭೆಯೊಂದರಲ್ಲಿ ನಡೆದ ಅವರ ಉಪನ್ಯಾಸವೇ ತತ್ತ್ವೋದ್ಯೋತ ಅಥವಾ ವಾದ ಎಂಬ ಹೆಸರಿನಿಂದ ಒಂದು ಗ್ರಂಥವಾಗಿ ಸಿದ್ಧವಾಯಿತು. ವಾದ ಮಾಡುತ್ತಲೇ ರಚಿತವಾದ ಅಪೂರ್ವಕೃತಿ. ಕಣಕ್ಕಿಳಿದಾಗ ಬರುವ ಸಮಸ್ಯೆಗಳಿಗೆ ಸ್ಪಂದಿಸಲು ಅನುಕೂಲವಾಗುವ ಶಿಕ್ಷಣವನ್ನು ನೀಡುವ ಮೂಲಕ ವಿಶಿಷ್ಟಬಗೆಯ ರಚನೆಯಾಗಿ ಮಾನ್ಯವಾಯಿತು. ವಿಷಯಗಳೊಂದಿಗೆ ವಾದ ನಡೆದ ದಾಖಲೆಯೂ ಆಗಿ ಮಹತ್ತ್ವಪಡೆಯಿತು.

ವಿಷ್ಣುತತ್ತ್ವವಿನಿರ್ಣಯವಂತೂ ಅವರ ಸಮಗ್ರದರ್ಶನದ ಕೈಪಿಡಿಯಂತಹ ಪ್ರಕರಣ. ಬೇರಾವ ದರ್ಶನವೂ ತನ್ನೆಲ್ಲ ಮುಖ್ಯ ಪ್ರಮೇಯಗಳು ಇಷ್ಟು ಸಂಗ್ರಹವಾಗಿ ಪರಿಣಾಮಕಾರಿಯಾಗಿ ಒಂದೇ ಗ್ರಂಥದಲ್ಲಿ ಹೀಗೆ ನೀಡಿದ ನಿದರ್ಶನವಿಲ್ಲ.

ಅವರ ಮತ್ತೊಂದು ಪ್ರಕರಣ ಕರ್ಮನಿರ್ಣಯವೂ ಹೀಗೆಯೇ ವಾದಪ್ರಸಂಗವೊಂದರ ವಿವರಗಳ ದಾಖಲೆಯ ರೂಪದ ಕೃತಿ. ಜ್ಞಾನಕಾಂಡ ಕರ್ಮಕಾಂಡ ಎಂಬುದಾಗಿ ವೈದಿಕಸಾಹಿತ್ಯವನ್ನು ವಿಭಾಗಿಸುವ ಪ್ರವೃತ್ತಿಯನ್ನು ನಿರಾಕರಿಸಿ ಸಮಗ್ರ ವೈದಿಕಸಾಹಿತ್ಯವು ಅಖಂಡವಾಗಿ ಜ್ಞಾನಕಾಂಡವೇ ಆಗಿದೆ ಎಂದು ಸಾಧಿಸಿ ತೋರಿಸಿದ್ದು ಅದರ ಮಹತ್ತ್ವ.

ಅದ್ವೈತಮತ ಒಂದರ ವಿಮರ್ಶೆಗೇ ಖಂಡನತ್ರಯವೆಂಬ ಮೂರುಕೃತಿಗಳನ್ನು ಮೀಸಲಿರಿಸುವ ಮೂಲಕ ಪರಪಕ್ಷವೊಂದರ ಸಮಗ್ರ ವಿಮರ್ಶೆಗೆ ದಾರಿದೀಪದಂತಿರುವ ಕೃತಿಗಳನ್ನು ನೀಡಿರುವರು. ಆಗ ಅದ್ವೈತ ಪಡೆದಿದ್ದ ಪ್ರಸಿದ್ಧಿಯನ್ನು ಇದು ಪರ್ಯಾಯವಾಗಿ ಸೂಚಿಸುವುದು. ಇವುಗಳಲ್ಲಿ ಒಮ್ಮೆಯೂ ವ್ಯಕ್ತಿನಿಂದೆಯ ಸೋಂಕೂ ಇಲ್ಲ. ಅವರ ವಿಮರ್ಶನ ಧಾಟಿ ಆರೋಗ್ಯಕರ ವಿಮರ್ಶೆ ಎಂದೂ ವ್ಯಕ್ತಿನಿಂದೆಯ ಮಟ್ಟವನ್ನು ತಲುಪಬೇಕಿಲ್ಲ ಎಂಬುದಕ್ಕೆ ನಿದರ್ಶನವೂ ಆಗಿದೆ.

ಆಚಾರ್ಯರ ಪರಮತವಿಮರ್ಶೆಯ ಪರಿಪೂರ್ಣತೆ ಹಾಗೂ ಅದ್ವೈತ ವಿಮರ್ಶೆಯ ಸಮಗ್ರತೆಯ ವಿಶ್ವರೂಪವನ್ನು ದರ್ಶನ ಮಾಡಿಸುವ ಕೃತಿ ಶ್ರೀ ವ್ಯಾಸರಾಜರ ನ್ಯಾಯಾಮೃತ. ದಶ ಪ್ರಕರಣಗಳಲ್ಲಿ ಹೆಚ್ಚಿನವು ಗಾತ್ರದಲ್ಲಿ ತುಂಬಾ ಚಿಕ್ಕವು. ಈ ಪ್ರಕರಣಗಳ ವ್ಯಾಪ್ತಿ ಡೆಮ್ಮಿ ಅಷ್ಟಪತ್ರ ಆಕಾರದ ಮುದ್ರಣದಲ್ಲಿ ಸುಮಾರು ನಲವತ್ತು ಪುಟಗಳಷ್ಟು ಮಾತ್ರ.

..........

## ತತ್ತ್ವಸಂಖ್ಯಾನ

ವೇದಾದಿಮೂಲಶಾಸ್ತ್ರಗಳಲ್ಲಿ ನಿರೂಪಿತವಾದ ತತ್ತ್ವವಿಭಾಗದ ಕಥನ ತತ್ತ್ವಸಂಖ್ಯಾನದ ಮುಖ್ಯ ವಿಷಯ. ತತ್ತ್ವ ಎಂದರೆ ಪ್ರಮೇಯ ಎಂದರ್ಥ. ಇಂಥ ಪ್ರಮೇಯವು ಸ್ವತಂತ್ರ ಪರತಂತ್ರ ಎಂಬುದಾಗಿ ಎರಡು ಬಗೆ. ಸ್ವತಂತ್ರತತ್ತ್ವವು

ಭಗವಂತನಾದ ಮಹಾವಿಷ್ಣು ಒಬ್ಬನೇ. ಅಸ್ವತಂತ್ರ ತತ್ತ್ವವು ಭಾವ ಮತ್ತು ಅಭಾವ ಎಂಬುದಾಗಿ ಎರಡು ವಿಧ. ಅಭಾವವು ಪ್ರಾಗಭಾವ, ಪ್ರಧ್ವಂಸಾಭಾವ ಮತ್ತು ಸದಾ ಭಾವ ಎಂಬುದಾಗಿ ಮೂರು ವಿಧ. ಭಾವವು ಚೇತನ ಅಚೇತನ ಎಂಬುದಾಗಿ ಎರಡು ವಿಧ. ಚೇತನದಲ್ಲೂ ದುಃಖಸಂಪರ್ಕವಿಲ್ಲದ ಚೇತನ ಮತ್ತು ದುಃಖ ಸಂಪರ್ಕವಿರುವ ಚೇತನ ಎಂಬುದಾಗಿ ಎರಡು ಬಗೆ. ಮಹಾಲಕ್ಷ್ಮಿಯು ಎಂದೂ ದುಃಖಗಳ ಸಂಪರ್ಕವಿಲ್ಲದ ಚೇತನ; ಆವರು ನಿತ್ಯಮುಕ್ತರು. ಉಳಿದೆಲ್ಲ ಚೇತನಗಳು ದುಃಖಸಂಪರ್ಕ ಹೊಂದಿದವರು.

ದುಃಖಸಂಪರ್ಕವಿರುವ ಚೇತನವು ಮುಕ್ತ ಮತ್ತು ಸಂಸಾರಿ ಎಂಬುದಾಗಿ ಎರಡು ವಿಧ. ಮುಕ್ತರು ದೇವತೆಗಳು ಋಷಿಗಳು, ಪಿತೃಗಳು, ಚಕ್ರವರ್ತಿಗಳು ಮತ್ತು ಮನುಷ್ಯೋತ್ತಮರು ಎಂಬುದಾಗಿ ಐದು ಬಗೆ. ಸಂಸಾರಿಗಳು ಮುಕ್ತಿಯೋಗ್ಯರು ಮತ್ತು ಮುಕ್ತಿಗೆ ಅಯೋಗ್ಯರು ಎಂಬುದಾಗಿ ಎರಡು ವಿಧ. ಮುಕ್ತಿಯೋಗ್ಯರು ಸಹ ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು ಮತ್ತು ಮನುಷ್ಯೋತ್ತಮರು ಎಂಬುದಾಗಿ ಐದು ವಿಧ.

ಮುಕ್ತ್ಯಯೋಗ್ಯರು ತಾಮಸರು ಮತ್ತು ನಿತ್ಯಸಂಸಾರಿಗಳು ಎಂಬುದಾಗಿ ಎರಡು ಬಗೆ. ತಾಮಸರು ಅಂಧಂತಮಸ್ಸಿಗೆ ತೆರಳಿದವರು ಮತ್ತು ತೆರಳಲಿರುವವರು ಎಂಬುದಾಗಿ ಎರಡು ವಿಧ. ಇವರಿಬ್ಬರೂ ದೈತ್ಯರು, ರಾಕ್ಷಸರು, ಪಿಶಾಚಿಗಳು ಮತ್ತು ಮನುಷ್ಯಾಧಮರು ಎಂಬುದಾಗಿ ನಾಲ್ಕು ವಿಧ.

ಅಚೇತನವು ನಿತ್ಯ, ನಿತ್ಯಾನಿತ್ಯ ಮತ್ತು ಅನಿತ್ಯ ಎಂಬುದಾಗಿ ಮೂರು ಬಗೆ. ವೇದಗಳು, ಪಂಚಾಶದ್ವರ್ಣಗಳು ಮತ್ತು ಅವ್ಯಾಕೃತ-ಆಕಾಶ ಇವು ನಿತ್ಯ. ಪುರಾಣಾದಿಗಳು, ಕಾಲ ಮತ್ತು ಪ್ರಕೃತಿ ಈ ಮೂರು ನಿತ್ಯಾನಿತ್ಯ. ಅನಿತ್ಯವು ಸಂಸೃಷ್ಟ ಮತ್ತು ಅಸಂಸೃಷ್ಟ ಎಂಬುದಾಗಿ ಎರಡು ವಿಧ. ಪಂಚಭೂತಗಳು, ದಶೇಂದ್ರಿಯ ಗಳು, ಪಂಚತನ್ಮಾತ್ರಾಗಳು, ಬುದ್ಧಿ, ಮನಸ್ಸು, ಅಹಂಕಾರ ಮತ್ತು ಮಹತ್ತತ್ತ್ವ ಇವೆಲ್ಲ ಅಸಂಸೃಷ್ಟ. ಬ್ರಹ್ಮಾಂಡ ಮತ್ತು ಅದರೊಳಗಿನ ಎಲ್ಲವೂ ಸಂಸೃಷ್ಟ.

ಸಕಲ ಅಸ್ವತಂತ್ರತತ್ವಗಳ ಹುಟ್ಟು, ಪಾಲನೆ, ವಿನಾಶ, ನಿಯಮನ, ಅಜ್ಞಾನ, ಜ್ಞಾನ, ಬಂಧ, ಸಂಸಾರ, ಸುಖ, ದುಃಖ, ಮಿಥ್ಯಾಜ್ಞಾನ ಮತ್ತು ಪ್ರಕಾಶ ಇವೆಲ್ಲವೂ ಯಥಾಯೋಗ್ಯವಾಗಿ ಸ್ವತಂತ್ರನಾದ ಮಹಾವಿಷ್ಣುವಿನಿಂದಲೇ ನಡೆಯುವವು.

ಇದು ತತ್ತ್ವಸಂಖ್ಯಾನದ ಸಾರಸಂಗ್ರಹ.

# ತತ್ತ್ವವಿಭಾಗ (ತತ್ತ್ವಸಂಖ್ಯಾನೋಕ್ತ)



# ತತ್ತ್ವ ವಿವೇಕ

ತತ್ತ್ವವಿವೇಕವು ಸಹ ತತ್ತ್ವ ವಿವೇಚನೆಗೆಂದೆ ಮೀಸಲಾಗಿರುವ ಕೃತಿ. ತತ್ತ್ವ ಸಂಖ್ಯಾನವು ಶ್ರೀಮದಾಚಾರ್ಯರ ಸ್ವತಂತ್ರಕೃತಿ. ಅದರಲ್ಲಿನ ವಿಚಾರಗಳಿಗೆ ಆಧಾರವಾಗಿ ಸ್ವತಃ ಮಹಾವಿಷ್ಣುವಿನ ತತ್ತ್ವವಿವೇಕ ಎಂಬ ಕೃತಿಯಿಂದ ವಾಕ್ಯಗಳನ್ನು ಸಂಗ್ರಹಿಸಿ ಈ ಕೃತಿಯನ್ನು ನೀಡಿರುವರು. ಆದ್ದರಿಂದ ಒಂದೇ ವಿಷಯದ ಮೇಲೆ ಎರಡು ಪ್ರತ್ಯೇಕ ಗ್ರಂಥಗಳೇಕೆ? ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ ಎಂಬುದಾಗಿ ಶ್ರೀಜಯತೀರ್ಥರು ಇದಕ್ಕೆ ರಚಿಸಿರುವ ಟೀಕೆಯಲ್ಲಿ ವಿವೇಚಿಸಿರುವರು. ಶ್ರೀಮದಾಚಾರ್ಯರು ತಮ್ಮ ಭಾಗವತ ತಾತ್ಪರ್ಯ ಮೊದಲಾದ ಗ್ರಂಥಗಳಲ್ಲಿ ತತ್ತ್ವ ವಿವೇಕ ಎಂಬ ಕೃತಿಯನ್ನು ಉದಾಹರಿಸಿರುವದನ್ನು ಇಲ್ಲಿ ಗಮನಿಸಬಹುದು. ತತ್ತ್ವ ಸಂಖ್ಯಾನವೆಂಬ ಮೂಲ ಕೃತಿಯನ್ನು ಸಹ ಶ್ರೀಮದಾಚಾರ್ಯರು ಭಾಗವತ ತಾತ್ಪರ್ಯಾದಿಗಳಲ್ಲಿ ಉಲ್ಲೇಖಿಸಿರುವರು. ಅದು ಪ್ರತ್ಯೇಕ ಗ್ರಂಥ. ಶ್ರೀಮದಾ ಚಾರ್ಯರ ತತ್ತ್ವಸಂಖ್ಯಾನವು ಅದೇ ಹೆಸರಿನ ಮತ್ತೊಂದು ಕೃತಿಯೆಂದು ತಿಳಿಯಬೇಕು. ಇದಕ್ಕೆಲ್ಲ ಮೇಲೆ ಉಲ್ಲೇಖಿಸಿದ ಶ್ರೀ ಜಯತೀರ್ಥರ ವಚನವೇ ಆಧಾರ.

ಪ್ರಮೇಯವು ಸ್ವತಂತ್ರ ಮತ್ತು ಪರತಂತ್ರ ಎಂಬುದಾಗಿ ಎರಡು ಬಗೆ. ನಿರ್ದೋಷನೂ, ಅನಂತಗುಣಪೂರ್ಣನೂ ಆದ ಮಹಾವಿಷ್ಣುವು ಒಬ್ಬನೇ ಸ್ವತಂತ್ರ ಪ್ರಮೇಯ. ಉಳಿದೆಲ್ಲವೂ ಅವನ ಅಧೀನವಾಗಿದ್ದು ಪರತಂತ್ರ ಪ್ರಮೇಯ ಎನ್ನಿಸಿವೆ.

ಪರತಂತ್ರ ಪ್ರಮೇಯವು ಭಾವ ಮತ್ತು ಅಭಾವ ಎಂಬುದಾಗಿ ಎರಡು ಬಗೆ. ಅಭಾವವು ಪೂರ್ವಾಭಾವ (ಪ್ರಾಗಭಾವ), ಅಪರಾಭಾವ (ಪ್ರಧ್ವಂಸಾಭಾವ) ಮತ್ತು ಸದಾಭಾವ(ಅತ್ಯಂತಾಭಾವ) ಎಂಬುದಾಗಿ ಮೂರು ಬಗೆ. ಕೆಲವರು ಅನ್ಯೋನ್ಯಾಭಾವ ಎಂಬುದು ನಾಲ್ಕನೆಯ ಅಭಾವ ಎಂಬುದಾಗಿ ಹೇಳುವರು. ಆದರೆ ಅನ್ಯೋನ್ಯಾಭಾವವೆಂಬುದು ಭೇದವೇ ಆಗಿದ್ದು ಅದು ಆಯಾ (ಭಾವಾಭಾವ) ವಸ್ತುಗಳ ಸ್ವರೂಪವೇ ಆಗಿರುವದರಿಂದ ಅದನ್ನು ಅಭಾವದ ಗುಂಪಿನಲ್ಲಿ ಪರಿಗಣಿಸಕೂಡದು.

ಭಾವವು ಚೇತನ ಮತ್ತು ಅಚೇತನ ಎಂಬುದಾಗಿ ಎರಡು ವಿಧ. ಚೇತನವು ನಿತ್ಯಮುಕ್ತ ಮತ್ತು ಸಂಸಾರಿ ಎಂಬುದಾಗಿ ಎರಡು ವಿಧ. ನಿತ್ಯಮುಕ್ತ ಚೇತನವು ಮಹಾಲಕ್ಷ್ಮಿ ಒಬ್ಬರೇ. ಅವರು ಬ್ರಹ್ಮಾದಿ ಸಕಲ ದೇವತೆಗಳಿಗಿಂತಲೂ ಮಿಗಿಲು. ಶ್ರೀಹರಿಯು ಅವರಿಗಿಂತ ಅನಂತಪಟ್ಟು ಮಿಗಿಲು. ಸಂಸಾರಿಚೇತನರು ಮುಕ್ತರು

# ತತ್ತ್ವ ವಿಭಾಗ (ತತ್ತ್ವವಿವೇಕೋಕ್ತ)



ಮತ್ತು ಅಮುಕ್ತರು ಎಂಬುದಾಗಿ ಎರಡು ಬಗೆ. ಮುಕ್ತರಲ್ಲಿ ಮನುಷ್ಯೋತ್ತಮರಿಂದ ಪ್ರಾರಂಭಿಸಿ ಚತುರ್ಮುಖ ಬ್ರಹ್ಮದೇವರವರೆಗೂ ಆನಂದಾದಿಗುಣಗಳಲ್ಲಿ ತಾರತಮ್ಯ ಉಂಟು. ಅಮುಕ್ತರು ಉತ್ತಮರು, ಮಧ್ಯಮರು ಮತ್ತು ಅಧಮರು ಎಂಬುದಾಗಿ ಮೂರು ವಿಧ. ಬ್ರಹ್ಮದೇವರಿಂದ ಪ್ರಾರಂಭಿಸಿ ಮನುಷ್ಯೋತ್ತಮರ ವರೆಗಿನ ಸಾತ್ವಿಕರು ಉತ್ತಮ ಚೇತನ. ನಿತ್ಯಸಂಸಾರಿಗಳು ಮಧ್ಯಮರು. ನಿತ್ಯವಾದ ತಮಸ್ಸಿಗೆ ಅರ್ಹವಾದವರು ಅಧಮರು.

ಅಚೇತನವು ನಿತ್ಯಾನಿತ್ಯ ಎಂಬುದಾಗಿ ಎರಡು ವಿಧ. ದೇಶ, ಕಾಲ, ವೇದ, ಪಂಚಭೂತಗಳು, ದಶೇಂದ್ರಿಯಗಳು, ಪ್ರಾಣ, ಸತ್ವ, ರಜಸ್ಸು ಮತ್ತು ತಮಸ್ಸೆಂಬ ಮೂರು ಗುಣಗಳು. ಪಂಚತನ್ಮಾತ್ರಾಗಳು, ಮಹತ್ತತ್ವ, ಅಹಂಕಾರತತ್ತ್ವ ಮತ್ತು ಬುದ್ಧಿತತ್ತ್ವ ಇವುಗಳ ಸೂಕ್ಷ್ಮರೂಪಗಳು ನಿತ್ಯ. ಇವುಗಳ ವಿಕಾರಗಳೆಲ್ಲ ಅನಿತ್ಯ.

ಮೇಲ್ನೋಟಕ್ಕೆ ತತ್ವಸಂಖ್ಯಾನ ಮತ್ತು ತತ್ತ್ವವಿವೇಕಗಳಲ್ಲಿ ತತ್ತ್ವ ವಿವೇಚನೆಯ ರೀತಿಯಲ್ಲಿ ಸ್ವಲ್ಪ ವ್ಯತ್ಯಾಸ ಕಾಣುವದು. ಇದಕ್ಕೆ ಶ್ರೀ ಮದಾಚಾರ್ಯರು ಶ್ರೀಭಾಗವತತಾತ್ಪರ್ಯದಲ್ಲಿ ವಿವಕ್ಷಾಭೇದದಿಂದ ತತ್ತ್ವಸಂಖ್ಯಾನವು ಅನೇಕ ಬಗೆ ಎಂಬುದಾಗಿ ಹೇಳಿರುವುದು ಉತ್ತರವಾಗಿದೆ.

ತತ್ತ್ವವಿವೇಕದಲ್ಲಿ ಮುಂದೆ ವಸ್ತುವಿನ ಧರ್ಮಗಳನ್ನು ಯಾವದ್ದ್ರವ್ಯಭಾವಿ (ನಿತ್ಯ) ಮತ್ತು ಅಯಾವದ್ದ್ರವ್ಯಭಾವಿ (ಅನಿತ್ಯ) ಎಂಬುದಾಗಿ ವಿವೇಚಿಸಿ, ವಸ್ತುಗಳಿಗೂ ಅದರ ಯಾವದ್ದ್ರವ್ಯಧರ್ಮಗಳಿಗೂ ಸವಿಶೇಷಾಭೇದವೂ ಮತ್ತು ವಸ್ತುವಿಗೂ ಮತ್ತು ಅದರ ಅಯಾವದ್ರ್ಯವ್ಯ ಭಾವಿ ಧರ್ಮಗಳಿಗೂ ಭೇದಾಭೇದ ಸಂಬಂಧವು ಇರುವದು ಎಂಬುದಾಗಿ ನಿರೂಪಿಸಿರುವರು. ಪರತಂತ್ರವಾದ ಸಕಲ ಪ್ರಮೇಯವನ್ನು ಸದಾ ಸ್ವತಂತ್ರನಾದ ಶ್ರೀಹರಿಗೆ ಅಧೀನ ಎಂಬುದಾಗಿ ಅರಿಯುವವನು ಸಂಸಾರದಿಂದ ಬಿಡುಗಡೆ ಹೊಂದುವನು ಎನ್ನುವ ಸಂದೇಶದೊಂದಿಗೆ ತತ್ತ್ವವಿವೇಕವನ್ನು ಮುಕ್ತಾಯ ಮಾಡಿರುವರು.

ತತ್ತ್ವವಿಭಾಗ ಕಥನವು ಪ್ರತಿಯೊಂದು ದರ್ಶನಕ್ಕೂ ಒಂದು ಅವಿಭಾಜ್ಯ ಅಂಗ. ಮುಖ್ಯಪ್ರಮೇಯಗಳೆಲ್ಲ ಒಂದೆಡೆ ವ್ಯವಸ್ಥಿತವಾಗಿ ಸಂಕಲಿತವಾದಾಗ ಸಾಧಕರಿಗೆ ಅವುಗಳ ಅನುಸಂಧಾನವು ಸಾಧ್ಯವಾಗಿ ತತ್ತ್ವಸಾಕ್ಷಾತ್ಕಾರಕ್ಕೆ ಅನುಕೂಲವಾಗುತ್ತದೆ. ಆಧುನಿಕ ಪರಿಭಾಷೆಯಲ್ಲಿ ಇದನ್ನು Ontology ಎನ್ನುವರು. ಆದರೆ ಹೀಗೆ ವ್ಯವಸ್ಥಿತವಾದ ತತ್ತ್ವವಿವೇಚನೆಯನ್ನು ಸ್ಪಷ್ಟವಾಗಿ ಸಪ್ರಮಾಣವಾಗಿ ರೂಪಿಸಿಕೊಟ್ಟಿರುವ ಏಕಮಾತ್ರ ಆಚಾರ್ಯರು ಶ್ರೀ ಮಧ್ವರು.

ತತ್ತ್ವಸಂಖ್ಯಾನ ಮತ್ತು ತತ್ತ್ವವಿವೇಕ ಎರಡಕ್ಕೂ ಶ್ರೀ ಜಯತೀರ್ಥರ ಟೀಕೆಗಳುಂಟು.

ತತ್ತ್ವಸಂಖ್ಯಾನಕ್ಕೆ ಶ್ರೀ ವಿಜಯೀಂದ್ರ ತೀರ್ಥರು, ಶ್ರೀ ವೇದೇಶ ತೀರ್ಥರು, ಶ್ರೀ ರಾಘವೇಂದ್ರ ತೀರ್ಥರು ಮತ್ತು ಬಿದರಹಳ್ಳಿ ಶ್ರೀನಿವಾಸ ತೀರ್ಥರು ಮೊದಲಾದವರು ಟಿಪ್ಪಣಿಗಳನ್ನು ಬರೆದಿರುವರು. ತತ್ತ್ವವಿವೇಕಕ್ಕೆ ಶ್ರೀವ್ಯಾಸರಾಜರು ಮಂದಾರ ಮಂಜರಿಯೆಂಬ ವಿಸ್ತೃತವಾದ ಟಿಪ್ಪಣಿಯನ್ನು ಬರೆದಿರುವರು. ಇವೆರಡಕ್ಕೂ ಬಿದರಹಳ್ಳಿ ಶ್ರೀನಿವಾಸತೀರ್ಥರ ಟಿಪ್ಪಣಿಗಳೂ ಉಂಟು.

# ಪ್ರಮಾಣಲಕ್ಷಣ

ಪ್ರಮಾಣಲಕ್ಷಣವು ಪ್ರಮಾಣಗಳ ಲಕ್ಷಣ, ವಿಭಾಗ ಮತ್ತು ಇತರ ಮತಗಳ ಪ್ರಮಾಣಲಕ್ಷಣಗಳ ವಿಮರ್ಶೆಯನ್ನು ಒಳಗೊಂಡ ಪ್ರಕರಣ. ಅದ್ವೈತ ಮತ್ತು ವಿಶಿಷ್ಟಾದ್ವೈತ ಮತದ ಆಚಾರ್ಯರುಗಳು ಪ್ರಮಾಣವಿವೇಚನೆಯನ್ನು ಕುರಿತು ಈ ಬಗೆಯ ಗ್ರಂಥವನ್ನು ರಚಿಸಿಲ್ಲ ಎಂಬುದು ಗಮನಾರ್ಹ. ಅದ್ವೈತ ಮತವು ಭಾಟ್ಟಮೀಮಾಂಸಕರ ಪ್ರಮಾಣ ಪ್ರಕ್ರಿಯೆಯನ್ನು ಅವಲಂಬಿಸಿದರೆ (ವ್ಯವಹಾರೇ ಭಾಟ್ಟನಯಃ), ವಿಶಿಷ್ಟಾದ್ವೈತಮತವು ಪ್ರಾಭಾಕರಮೀಮಾಂಸಾ ಮತದ ಪ್ರಮಾಣ ಪ್ರಕ್ರಿಯೆಯನ್ನು ಅವಲಂಬಿಸಿದೆ. ತಮ್ಮದೇ ಆದ ಪರಿಸ್ಫುಟವಾದ ಪ್ರಮಾಣ ಪ್ರಕ್ರಿಯೆಯನ್ನು ಅವರು ರೂಪಿಸಿಕೊಳ್ಳಲಿಲ್ಲವೆಂಬುದು ಗಮನಾರ್ಹ.

ಪ್ರಮಾಣವೆಂದರೆ ಯಾವುದೇ ವಸ್ತುವನ್ನು ಯಥಾರ್ಥವನ್ನು ತಿಳಿಸಿಕೊಡುವ ಸಾಧನ. ಅದು ಕೇವಲ ಪ್ರಮಾಣ ಮತ್ತು ಅನುಪ್ರಮಾಣವೆಂದು ಎರಡು ಬಗೆ. ಕೇವಲಪ್ರಮಾಣವೆಂದರೆ ಯಥಾರ್ಥ ಜ್ಞಾನ. ಕೇವಲ ಪ್ರಮಾಣವು ಈಶಜ್ಞಾನ, ಲಕ್ಷ್ಮೀಜ್ಞಾನ, ಯೋಗಿಜ್ಞಾನ ಮತ್ತು ಅಯೋಗಿಜ್ಞಾನವೆಂಬುದಾಗಿ ನಾಲ್ಕು ಬಗೆ. ಈಶ ಜ್ಞಾನವೆಂದರೆ ಭಗವಂತನ ಜ್ಞಾನ. ಅದು ತನ್ನನ್ನು ಹಾಗೂ ಇತರ ಸಕಲವಸ್ತುಗಳನ್ನು ಸಂಪೂರ್ಣವಾಗಿ ಬಲ್ಲುದು. ಅನಾದಿ ಮತ್ತು ನಿತ್ಯ. ಅದರಷ್ಟು ಸ್ಫುಟವಾದ ಜ್ಞಾನ ಮತ್ತೊಂದಿಲ್ಲ. ಲಕ್ಷ್ಮೀಜ್ಞಾನವು ಅನಾಲೋಚನೆಯಿಂದ ಭಗವಂತನನ್ನು ಹೊರತು ಬೇರೆಲ್ಲವನ್ನು ಬಲ್ಲದು. ಅದು ಅನಾದಿ ಮತ್ತು ನಿತ್ಯ. ಭಗವಂತನಿಗೆ ಮಾತ್ರ ಅಧೀನ. ಭಗವಂತನನ್ನು ವೇದಾದಿ ಇತರ ಎಲ್ಲ ಶಾಸ್ತ್ರಗಳಿಗೂ ಮಿಗಿಲಾಗಿ ಬಲ್ಲದು. ಆದರೆ ಭಗವಂತನನ್ನು ಎಂದೂ ಸಾಕಲ್ಯೇನ ತಿಳಿಯಲಾರದು.

ಋಜುಯೋಗಿಜ್ಞಾನ, ತಾತ್ತ್ವಿಕಯೋಗಿಜ್ಞಾನ ಮತ್ತು ಅತಾತ್ತ್ವಿಕಯೋಗಿಜ್ಞಾನ ಎಂಬುದಾಗಿ ಯೋಗಿಜ್ಞಾನವು ಮೂರು ಬಗೆ. ಋಜುಗಳೆಂದರೆ ಬ್ರಹ್ಮದೇವರು

ಮತ್ತು ಆ ಪದವಿಗೆ ಯೋಗ್ಯರಾದ ಚೇತನರು. ಅವರು ಆಲೋಚನೆಯಿಂದ ಲಕ್ಷ್ಮೀನಾರಾಯಣರನ್ನು ಹೊರತು ಬೇರೆಲ್ಲವನ್ನು ಸಂಪೂರ್ಣವಾಗಿ ಬಲ್ಲ ಪೂರ್ಣಪ್ರಜ್ಞರು. ಭಗವಂತನಲ್ಲಿ ಲಕ್ಷ್ಮೀ ಜ್ಞಾನಕ್ಕಿಂತ ಕಡಿಮೆ, ರುದ್ರಾದಿ ಇತರ ಜೀವರಿಗಿಂತ ತುಂಬಾ ಮಿಗಿಲು. ಆಲೋಚನೆ ಮಾಡಿಯೂ ಇತರ ವಿಷಯಗಳನ್ನು ಸಂಪೂರ್ಣ ತಿಳಿಯಲಾಗದ ಜ್ಞಾನ ತಾತ್ವಿಕ ಯೋಗಿ ಜ್ಞಾನ. ತಾತ್ವಿಕರು ಎಂದರೆ ತತ್ವಾಭಿಮಾನಿದೇವತೆಗಳು ಎಂದು ಅರ್ಥ. ತತ್ವಾಭಿಮಾನಿಗಳಲ್ಲದ ದೇವತೆಗಳು ಅತಾತ್ವಿಕರು. ಈಶನನ್ನು ಬಿಟ್ಟು ಇತರ ವಿಷಯಗಳಲ್ಲೂ ಒಮ್ಮೊಮ್ಮೆ ಅದು ತಪ್ಪು ತಿಳಿಯುವಂತಹುದು.

ಇತರ ಚೇತನರು ಅಯೋಗಿಗಳು; ಅವರಲ್ಲೂ ಸಾತ್ವಿಕ, ರಾಜಸ ಮತ್ತು ತಾಮಸ ಎಂಬುದಾಗಿ ಮೂರು ಬಗೆ. ಸಾತ್ವಿಕರ ಸ್ವರೂಪಜ್ಞಾನ ನಿಯಮೇನ ಯಥಾರ್ಥ. ರಾಜಸರದು ಮಿಶ್ರ, ತಾಮಸರದು ಅಯಥಾರ್ಥ. ಮೂವರ ಬಾಹ್ಯಜ್ಞಾನವು ಎರಡು ಬಗೆಯೂ ಆಗಿರುವದು.

ಅನುಪ್ರಮಾಣವು ಪ್ರತ್ಯಕ್ಷ, ಅನುಮಾನ ಹಾಗೂ ಆಗಮ ಎಂಬುದಾಗಿ ಮೂರು ವಿಧ. ನಿರ್ದೋಷವಾದ ಇಂದ್ರಿಯಗಳಿಂದ ಜನಿಸಿದ ಜ್ಞಾನ ಪ್ರತ್ಯಕ್ಷವು. ನಿರ್ದೋಷವಾದ ಯುಕ್ತಿಯು ಅನುಮಾನ; ನಿರ್ದೋಷವಾದ ಶಬ್ದವು ಆಗಮ. ಇತರರು ಅರ್ಥಾಪತ್ತಿ, ಉಪಮಾ, ಅಭಾವ, ಸಂಭವ, ಪರಿಶೇಷ, ಐತಿಹ್ಯ ಮೊದಲಾದವುಗಳನ್ನು ಪ್ರತ್ಯೇಕಪ್ರಮಾಣಗಳೆಂದು ಭಾವಿಸುವುದುಂಟು. ಆದರೆ ಅವು ಯಾವೂ ಪ್ರತ್ಯೇಕ ಪ್ರಮಾಣಗಳಾಗಿರದೆ ಈ ಮೂರು ಪ್ರಮಾಣಗಳಲ್ಲಿ ಅಂತರ್ಭೂತವಾಗುತ್ತವೆ. ಅರ್ಥಾಪತ್ತಿ ಮತ್ತು ಉಪಮೆಗಳು ಅನುಮಾನದ ಪ್ರಭೇದಗಳು. ಅಭಾವವು ಕೆಲವೊಮ್ಮೆ ಅನುಮಾನದಲ್ಲೂ, ಪ್ರತ್ಯಕ್ಷದಲ್ಲೂ ಸೇರುವದು. ಸಂಭವ ಮತ್ತು ಪರಿಶೇಷಗಳು ಅನುಮಾನದಲ್ಲೂ, ಐತಿಹ್ಯವು ಆಗಮದಲ್ಲೂ ಅಂತರ್ಭೂತವಾಗುವವು. ವೇದಾರ್ಥನಿರ್ಣಾಯಕವಾದ ಉಪಕ್ರಮ ಮತ್ತು ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ ಮತ್ತು ಅರ್ಥವಾದಗಳು ಮತ್ತು ಶ್ರುತಿ, ಲಿಂಗ ಸಮಾಖ್ಯಾ, ವಾಕ್ಯ ಪ್ರಕರಣ ಮತ್ತು ಸ್ಥಾನಗಳು ಅನುಮಾನ ವಿಶೇಷಗಳಾಗಿವೆ.

ವ್ಯಾಪ್ತಿಯು ಉಪಪತ್ತಿಗೆ ಮೂಲ; ವಿರೋಧ, ಅಸಂಗತಿ, ನ್ಯೂನ ಮತ್ತು ಅಧಿಕ ಈ ನಾಲ್ಕು ಅನುಮಾನ ದೋಷಗಳು. ಪ್ರತ್ಯಕ್ಷವು ಸಾಕ್ಷಿ- ಮನಸ್ಸು ಮತ್ತು ಪಂಚಜ್ಞಾನೇಂದ್ರಿಗಳೆಂಬುದಾಗಿ ಏಳು ವಿಧ.

# ಪ್ರಮಾಣ ವಿವೇಚನೆ

ಪ್ರಮಾಣ

ಕೇವಲ ಪ್ರಮಾಣ

ಈಶಜ್ಞಾನ

ಲಕ್ಷ್ಮೀಜ್ಞಾನ

ಯೋಗಿಜ್ಞಾನ

ಋಜು ಯೋಗಿಜ್ಞಾನ

ತಾತ್ತ್ವಿಕ ಯೋಗಿಜ್ಞಾನ

ಅತಾತ್ತ್ವಿಕ ಯೋಗಿಜ್ಞಾನ

ಅಯೋಗಿಜ್ಞಾನ

ಸಾತ್ವಿಕ

ರಾಜಸ

ತಾಮಸ

ಅನುಪ್ರಮಾಣ

ಪ್ರತ್ಯಕ್ಷ

ಸಾಕ್ಷಿ

ಮನಸ್ಸು

ಚಕ್ಷುಷ್

ಘ್ರಾಣ

ರಸನ

ಶ್ರೋತ್ರ

ತ್ವಕ್

ಅನುಮಾನ

ಸ್ವಾರ್ಥಾನುಮಾನ

ಪರಾರ್ಥಾನುಮಾನ

ಸಾಧನಾನುಮಾನ

ದೂಷಣಾನುಮಾನ

ದೃಷ್ಟಾನುಮಾನ

ಸಾಮಾನ್ಯತೋ ದೃಷ್ಟಾನುಮಾನ

ಆಗಮ

ನಿತ್ಯ (ಅಪೌರುಷೇಯ) (ವೇದಗಳು)

ಅನಿತ್ಯ (ಪೌರುಷೇಯ) ಇತಿಹಾಸ ಪುರಾಣಾದಿಗಳು

ಇತಿಹಾಸಗಳು

ರಾಮಾಯಣ

ಮಹಾಭಾರತ

ಪಂಚರಾತ್ರ

ಪುರಾಣಗಳು

ಮಹಾಪುರಾಣಗಳು

ಸಾತ್ವಿಕ

ರಾಜಸ

ತಾಮಸ

ಉಪಪುರಾಣಗಳು

ಸಾತ್ವಿಕ

ರಾಜಸ

ತಾಮಸ

ಸ್ಮೃತಿಗಳು

ಸೂತ್ರಗಳು

ಬ್ರಹ್ಮ ಮೀಮಾಂಸಾ

ದೈವೀ ಮೀಮಾಂಸಾ

ಕರ್ಮ ಮೀಮಾಂಸಾ

ಇತರ ವಾದಿಗಳು ಅನೇಕ ತೆರನಾಗಿ ಪ್ರಮಾಣ ಲಕ್ಷಣಗಳನ್ನು ಹೇಳುವರು ಆದರೆ ಅವು ದೋಷಯುಕ್ತವಾಗಿದ್ದು ಅಂಗೀಕರಿಸಲಾಗುವದಿಲ್ಲ. ಕೆಲವರು ಸ್ಮೃತಿಗೆ ಪ್ರಾಮಾಣ್ಯವನ್ನು ಒಪ್ಪುವುದಿಲ್ಲ ಆದರೆ ಅದು ಮನಸ್ಸು ಎಂಬ ಇಂದ್ರಿಯದಿಂದ ಜನಿಸುವದರಿಂದ ಮತ್ತು ಪ್ರಮಾಣ ಎಂಬುದಾಗಿ ಅನುಭವದಿಂದಲೂ ಸಿದ್ಧವಾಗುವದರಿಂದ ಪ್ರಮಾಣವೇ ಆಗಿರುವದು.

ಸ್ವಮತಸ್ಥಾಪನೆಯನ್ನು ನಾವು ಒಪ್ಪಿರುವ ಪ್ರಮಾಣಗಳಿಂದ ಸಾಧಿಸಬೇಕು; ಪರಪಕ್ಷವನ್ನು ಅವರು ಒಪ್ಪುವ ಪ್ರಮಾಣಗಳಿಂದಲೇ ನಿರಾಕರಿಸಬೇಕು.

ಇದು ಸಂಕ್ಷಿಪ್ತವಾಗಿ ದ್ವೈತಸಿದ್ಧಾಂತದ ಪ್ರಮಾಣವಿವೇಚನೆ. ಆಚಾರ್ಯರು ಬ್ರಹ್ಮತರ್ಕವೆಂಬ ವ್ಯಾಸಕೃತ ಗ್ರಂಥವನ್ನು ಆಧರಿಸಿ ಇದನ್ನು ರಚಿಸಿರುವುದಾಗಿ ಕೊನೆಯಲ್ಲಿ ತಿಳಿಸಿರುವರು. ಅಂತಹ ಬ್ರಹ್ಮತರ್ಕವಚನಗಳನ್ನು ವಿಷ್ಣುತತ್ತ್ವ ವಿನಿರ್ಣಯ ಗ್ರಂಥದಲ್ಲಿ ಉದಾಹರಿಸಿರುವರು.

ಪ್ರಮಾಣ ಲಕ್ಷಣಕ್ಕೆ ಶ್ರೀ ಪದ್ಮನಾಭ ತೀರ್ಥರು ಮತ್ತು ಶ್ರೀ ಜಯತೀರ್ಥರು ಟೀಕೆಗಳನ್ನು ರಚಿಸಿರುವರು. ಶ್ರೀ ಜಯತೀರ್ಥರ ಪ್ರಮಾಣಪದ್ಧತಿ ಪ್ರಮಾಣ ವಿವೇಚನೆಯನ್ನು ವಿಸ್ತಾರವಾಗಿ ಮಾಡಿರುವ ಕೃತಿ. ಅವರ ಪ್ರಮಾಣಲಕ್ಷಣದ ಟೀಕೆ ಮತ್ತು ಪ್ರಮಾಣಪದ್ಧತಿಗಳಿಗೆ ಶ್ರೀ ವಿಜಯೀಂದ್ರರು, ಶ್ರೀ ರಾಘವೇಂದ್ರರು, ಶ್ರೀನಿವಾಸತೀರ್ಥರು ಮೊದಲಾದವರು ಟಿಪ್ಪಣಿಗಳನ್ನು ರಚಿಸಿರುವರು.

ಶ್ರೀವ್ಯಾಸತೀರ್ಥರ 'ತರ್ಕತಾಂಡವ'ವು ತಾರ್ಕಿಕರ ಪ್ರಮಾಣ ವಿವೇಚನೆಯನ್ನು ವಿವರಿಸಿ ಶ್ರೀ ಮಧ್ವರ ಪ್ರಮಾಣವಿವೇಚನೆಯನ್ನು ಸಮರ್ಥಿಸುವ ಕೃತಿ.

# ಕಥಾಲಕ್ಷಣ

ಪ್ರಮಾಣಲಕ್ಷಣವು ಪ್ರಮಾಣಗಳ ವಿವೇಚನೆಗೆ ಮೀಸಲಾದರೆ ಕಥಾ ಲಕ್ಷಣವು ಅಂಥಹ ಪ್ರಮಾಣಗಳ ಹಿನ್ನೆಲೆಯಲ್ಲಿ ನಡೆಯುವ ಶಾಸ್ತ್ರಚರ್ಚೆಯ ವಿವರಗಳನ್ನು ನಿರೂಪಿಸುತ್ತದೆ. ಶಾಸ್ತ್ರಚರ್ಚೆಯ ಸ್ವರೂಪ, ಅದರಲ್ಲಿ ಪಾಲ್ಗೊಳ್ಳಬೇಕಾದವರ ಅರ್ಹತೆಗಳು, ಉದ್ದೇಶ ಮತ್ತು ಫಲಶೃತಿ, ಮೊದಲಾದವುಗಳ ಬಗ್ಗೆ ಈ ಪುಟ್ಟಕೃತಿಯಲ್ಲಿ ನಿಖರವಾದ ವಿವರಗಳಿವೆ. ಶಂಕರ, ರಾಮಾನುಜರು ಈ ಬಗೆಯ ಕೃತಿಯನ್ನು ರಚಿಸಿಲ್ಲ.

ವಾದ, ಜಲ್ಪ ಮತ್ತು ವಿತಂಡಾ ಎಂಬುದಾಗಿ ಶಾಸ್ತ್ರಚರ್ಚೆ ಮೂರು ವಿಧ. ಗುರು ಶಿಷ್ಯರ ಮಧ್ಯೆ ತತ್ತ್ವನಿರ್ಣಯಕ್ಕೋಸ್ಕರ ನಡೆಯುವ ಚರ್ಚೆ, ವಾದ. ವಿಚಾರ ತಿಳಿಯುವ ಕುತೂಹಲ ಶಿಷ್ಯನದಾದರೆ ಅದನ್ನು ತಿಳಿಸುವ ಪ್ರಾಮಾಣಿಕ ಕಳಕಳಿ ಗುರುವಿನದು. ಇದಕ್ಕೆ ಸಭೆ, ಪ್ರಾಶ್ನಿಕ ನಿರ್ಣಾಯಕ ಮೊದಲಾಗಿ ಯಾವ ಕಟ್ಟುಪಾಡೂ ಇರುವದಿಲ್ಲ. ಕಾಲಮಿತಿಯೂ ಇರುವದಿಲ್ಲ. ತತ್ತ್ವನಿರ್ಣಯವಷ್ಟೇ ಇದರ ಫಲಶ್ರುತಿ.

ಇಬ್ಬರು ಸಾತ್ವಿಕ ವಿದ್ವಾಂಸರ ಮಧ್ಯೆ ಸ್ಪರ್ಧೆ, ಖ್ಯಾತಿ, ಐಶ್ವರ್ಯಗಳಿಗೋಸ್ಕರ ನಡೆಯುವ ಚರ್ಚೆ ಜಲ್ಪಕಥೆ. ನಿರ್ದಿಷ್ಟ ಸ್ಥಳ ಮತ್ತು ಅವಧಿಗಳಲ್ಲಿ ಅದಕ್ಕಾಗಿ ನಿಶ್ಚಿತವಾದ ಸಭೆಯಲ್ಲಿ ಪ್ರಾಶ್ನಿಕರು ಮತ್ತು ನಿರ್ಣಾಯಕರ ಸಮ್ಮುಖದಲ್ಲಿ ನಡೆಯಬೇಕು. ಗೆದ್ದವನು ಪುರಸ್ಕಾರಕ್ಕೆ ಅರ್ಹನಾಗುವನು. ವಿರೋಧ, ಅಸಂಗತಿ, ನ್ಯೂನ, ಅಧಿಕ, ಸಂವಾದ ಮತ್ತು ಅನುಕ್ತಿ ಎಂಬ ಆರು ದೋಷಗಳು ಸೋಲಿಗೆ ಕಾರಣವಾಗುವ ದೋಷಗಳಾಗಿವೆ (ನಿಗ್ರಹಸ್ಥಾನಗಳು). ಇದರಲ್ಲಿ ಸ್ವಪಕ್ಷ ಸ್ಥಾಪನೆ ಮತ್ತು ಪರಪಕ್ಷ ನಿರಾಕರಣೆ ಎರಡೂ ಆಗಲೇ ಬೇಕು.

ಇಂತಹುದೇ ಚರ್ಚೆ ಯೋಗ್ಯ ಮತ್ತು ಅಯೋಗ್ಯರ ಮಧ್ಯೆ ನಡೆದಾಗ ವಿತಂಡಾ ಎನ್ನಿಸುತ್ತದೆ. ಇದರಲ್ಲಿ ಸ್ವಪಕ್ಷಸ್ಥಾಪನೆಯ ಅವಶ್ಯಕತೆಯಿಲ್ಲ. ಪ್ರತಿವಾದಿ ತತ್ತ್ವಜ್ಞಾನಕ್ಕೆ ಅನರ್ಹನಾಗಿರುವುದೇ ಅದಕ್ಕೆ ಕಾರಣ. ಪರಪಕ್ಷಖಂಡನೆಯೇ ಪ್ರಧಾನ. ಉಳಿದಂತೆ ಜಲ್ಪದಂತೆಯೇ ಇದೂ ನಡೆಯಬೇಕು. ಪರಾಜಿತನನ್ನು ನಿಂದೆ ಅಥವಾ ದಂಡನೆಗಳಿಗೆ ಗುರಿ ಮಾಡಬೇಕು.

ಪ್ರಾಶ್ನಿಕರು, ನಿರ್ಣಾಯಕರು, ಉತ್ತಮವಿದ್ವಾಂಸರೂ ರಾಗದ್ವೇಷರಹಿತರೂ ಆಗಿರಬೇಕು. ವಿಷ್ಣುಭಕ್ತಿ ಅವರ ಕನಿಷ್ಠ ಅರ್ಹತೆ. ಕಥಾಲಕ್ಷಣವನ್ನು ಸಹ ಬ್ರಹ್ಮತರ್ಕದ ಆಧಾರದ ಮೇಲೆಯೇ ರಚಿಸಿರುವುದಾಗಿ ತಿಳಿಸಿರುವರು. ಬೃಹದಾರಣ್ಯಕಭಾಷ್ಯದಲ್ಲಿ ಅದಕ್ಕೆ ಸಂಬಂಧಿಸಿದ ಬ್ರಹ್ಮತರ್ಕವಚನಗಳನ್ನೇ ಉದಾಹರಿಸಿರುವರು.

ಪ್ರಮಾಣಲಕ್ಷಣ ಮತ್ತು ಕಥಾಲಕ್ಷಣ ಎರಡೂ ಸಹ ತಾತ್ವಿಕ ಪ್ರಪಂಚವನ್ನು ತೆರೆದಿಡುವ ದಿವ್ಯನೇತ್ರಗಳು ಎಂಬುದಾಗಿ 'ಸುಮಧ್ವವಿಜಯ' ಬಣ್ಣಿಸಿದೆ. ಕಥಾಲಕ್ಷಣಕ್ಕೆ ಶ್ರೀ ಪದ್ಮನಾಭತೀರ್ಥರು ಮತ್ತು ಶ್ರೀ ಜಯತೀರ್ಥರು ಟೀಕೆಗಳನ್ನು ರಚಿಸಿರುವರು. ಶ್ರೀ ಜಯತೀರ್ಥರ ಟೀಕೆಗಳಿಗೆ ಶ್ರೀ ವೇದೇಶ ತೀರ್ಥರು, ಶ್ರೀ ರಾಘವೇಂದ್ರತೀರ್ಥರು, ಬಿದರಹಳ್ಳಿ ಶ್ರೀನಿವಾಸತೀರ್ಥರು ಮೊದಲಾದವರ ಟಿಪ್ಪಣಿಗಳು ಪ್ರಸಿದ್ಧವಾಗಿವೆ.

# ಉಪಾಧಿ ಖಂಡನ

ಉಪಾಧಿಖಂಡನವು ಅದ್ವೈತಮತದ ಉಪಾಧಿ ಎಂಬ ಪ್ರಕ್ರಿಯೆಯನ್ನು ವಿಮರ್ಶಿಸುವ ಕೃತಿ. ಜೀವಬ್ರಹ್ಮರಿಗೆ ಸ್ವಾಭಾವಿಕ ಐಕ್ಯವಿದ್ದರೂ ಔಪಾಧಿಕ ಭೇದದಿಂದಾಗಿ ಅಜ್ಞಾನವು ಕೂಡುತ್ತದೆ ಎಂಬುದು ಅದ್ವೈತಿಗಳ ವಾದ. ಬ್ರಹ್ಮನು ಸ್ವಾಭಾವಿಕವಾಗಿ ಸರ್ವಜ್ಞ, ಅಂತಹ ಸರ್ವಜ್ಞನಿಗೆ ಅಜ್ಞಾನವೆಂತು ಒದಗೀತು. ಉಪಾಧಿಯಿಂದ ಒದಗುವ ಭೇದದಿಂದಾಗಿ ಅಜ್ಞಾನವು ಕೂಡುವದು ಎಂದರೆ ಆ ಉಪಾಧಿಗೆ ಏನು ಕಾರಣ ಎಂದು ಪ್ರಶ್ನಿಸಬೇಕಾಗುತ್ತದೆ. ಅದಕ್ಕೆ ಯಾವುದೇ ರೀತಿಯ ಉತ್ತರಕ್ಕೂ ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕಾಶ್ರಯ, ಅನವಸ್ಥಾ ಮೊದಲಾದ ಒಂದಲ್ಲ ಒಂದು ದೋಷವು ತಪ್ಪಿದ್ದಲ್ಲ. ಉಪಾಧಿಯು ಸತ್ಯವಾದರೆ ಅದ್ವೈತಕ್ಕೆ ಹಾನಿ. ಸತ್ಯವಲ್ಲವೆಂದರೆ ಅದಕ್ಕಾಗಿ ಅಜ್ಞಾನದ ಕಲ್ಪನೆ. ಹೀಗೆ ಸಮಸ್ಯೆ ಅಪರಿಹಾರ್ಯವೇ ಆಗುವದು. ಅಲ್ಲದೆ ಉಪಾಧಿಗೆ ಇರುವ ಭೇದವನ್ನು ತೋರಿಸುವ ಸಾಮರ್ಥ್ಯವುಂಟೇ ಹೊರತು ಇಲ್ಲದ ಭೇದವನ್ನು ಸೃಷ್ಟಿಸಲು ಅಲ್ಲ ಎಂಬ ಅಂಶವನ್ನೂ ತೋರಿಸಿರುವರು.

ಜೀವಬ್ರಹ್ಮರಿಗೆ ಐಕ್ಯವಿದ್ದಲ್ಲಿ ಅವರಿಬ್ಬರಿಗೂ ಒಂದೇ ತೆರನಾದ ಅನುಭವವೂ ಇರಬೇಕು. ಅಂಥ ಅನುಭವ ಒಪ್ಪಿದಲ್ಲಿ ಜೀವರ ದುಃಖಾನುಭವವು ಬ್ರಹ್ಮನಿಗೂ ಒದಗಬೇಕಾಗುವದರಿಂದ ಅವನೂ ದುಃಖಿಯಾಗಬೇಕಾಗುವುದು. ಭೋಗಾನು ಭವದಲ್ಲಿ ಆ ತೆರನಾದ ಐಕ್ಯಾನುಸಂಧಾನವು ಆಗದಿದ್ದಲ್ಲಿ ಬಹುರೂಪಗಳನ್ನು ಸ್ವೀಕರಿಸಿ ಯೋಗಿಗಳು ಸಾಧನೆ ಮಾಡಿಕೊಳ್ಳುವ ಪ್ರಸಂಗಕ್ಕೆ ಅರ್ಥ ತಪ್ಪಿಹೋಗುತ್ತಿತ್ತು. ಸೌಭರಿ ಮೊದಲಾದ ಯೋಗಿಗಳು ಬಹುರೂಪ ಸ್ವೀಕರಿಸಿದ ನಿದರ್ಶನವಿರುವದರಿಂದ ಐಕ್ಯಾನುಸಂಧಾನವನ್ನು ಒಪ್ಪಲೇ ಬೇಕಾಗುವದು. ಆದ್ದರಿಂದ ಉಪಾಧಿಯನ್ನು ಒಪ್ಪಿದರೂ ಬ್ರಹ್ಮಾತ್ಮೈಕ್ಯವಾದ ಸ್ವರಸವಾಗುವದಿಲ್ಲ. ಅದು ಪ್ರಮಾಣ ವಿರುದ್ಧ ಮತ್ತು ಅಪ್ರಮಾಣಿಕ ಎಂಬುದಂತು ಅಪರಿಹಾರ್ಯ. ಜೀವ ಜೀವ ಭೇದ ಜೀವೇಶ್ವರಾದಿ ಭೇದಗಳು ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಎಂಬ ಸಕಲ ಪ್ರಮಾಣಗಳಿಂದಲೂ ಸಿದ್ಧವಾಗಿರುವದರಿಂದ ತತ್ವವಾದವೇ ಗ್ರಾಹ್ಯ ಎಂಬುದು ಉಪಾಧಿಖಂಡನದ ಸಾರಾಂಶ.

# ಮಾಯಾವಾದಖಂಡನ

ಅದ್ವೈತಮತಕ್ಕೆ ಮಾಯಾವಾದ ಎಂದೂ ಹೆಸರು. ಎಂದರೆ ವಿಶ್ವವು ಮಾಯಾ (ಅಜ್ಞಾನ) ಕಲ್ಪಿತ. ಆದ್ದರಿಂದ ಮಿಥ್ಯೆ. ಬ್ರಹ್ಮ ಪಾರಮಾರ್ಥಿಕ ಸತ್ಯ; ಜೀವ ಬ್ರಹ್ಮನಿಂದ ಭಿನ್ನನಲ್ಲ; ಬ್ರಹ್ಮಾತ್ಮೈಕ್ಯವೇ ಸಕಲಶಾಸ್ತ್ರಾರ್ಥ ಎಂಬುದು ಅವರ ವಾದ.

ಶ್ರೀಮದಾಚಾರ್ಯರು ನರಸಿಂಹದೇವರ ಸ್ತುತಿಯೊಂದಿಗೆ ಮಾಯಾವಾದ ಖಂಡನ ಗ್ರಂಥವನ್ನು ಪ್ರಾರಂಭಿಸಿ ಬ್ರಹ್ಮಾತ್ಮೈಕ್ಯವನ್ನು ಪ್ರತಿಪಾದಿಸುವ ಮಾಯಾವಾದವು ಉಪಾದೇಯವಲ್ಲ. ವೇದಾದಿ ಶಾಸ್ತ್ರಗಳೇ ಅದನ್ನು ಪ್ರತಿಪಾದಿಸುತ್ತದೆ ಎಂದರೆ ಅವೂ ಅನುಪಾದೇಯವೇ ಆಗಬೇಕಾಗುವದು ಎಂದು ತೋರಿಸಿಕೊಟ್ಟಿರುವರು. ಅನುಬಂಧ ಚತುಷ್ಟಯ ಯುಕ್ತವಾದ ಶಾಸ್ತ್ರ ಉಪಾದೇಯ; ಹಾಗಲ್ಲದ್ದು ಅನುಪಾದೇಯ. ಅಧಿಕಾರಿ, ವಿಷಯ, ಪ್ರಯೋಜನ ಮತ್ತು ಸಂಬಂಧ ಈ ನಾಲ್ಕನ್ನು ಅನುಬಂಧ ಚತುಷ್ಟಯ ಎನ್ನುವರು. ವಿಷಯವು ಪ್ರಾಮಾಣಿಕವಾಗಿರಬೇಕು; ಆದರೆ ಅದ್ವೈತಿಗಳು ಹೇಳುವ ಬ್ರಹ್ಮಾತ್ಮೈಕ್ಯವು ಶೃತಿ ಪ್ರತ್ಯಕ್ಷಾದಿ ಸಕಲ ಪ್ರಮಾಣಗಳಿಗೂ ವಿರುದ್ಧ. ಅದ್ವೈತಿಗಳು ಬ್ರಹ್ಮನು ಒಂದೇ ಸತ್ಯ ಎನ್ನುವರು. ಬ್ರಹ್ಮಾತ್ಮೈಕ್ಯವು ಸತ್ಯವೆಂದರೆ ಅವರ ಮತಕ್ಕೆ ವಿರುದ್ಧವಾಗಿ ಎರಡು ಸತ್ಯಗಳನ್ನು ಒಪ್ಪಿಕೊಳ್ಳಬೇಕಾದ ಪ್ರಸಂಗ ಒದಗುವದರಿಂದ ಅಪಸಿದ್ಧಾಂತವೆಂಬ ದೋಷವು ಬರುವದು. ಅದು ಬ್ರಹ್ಮನ ಸ್ವರೂಪವೆಂದಲ್ಲಿ ಬ್ರಹ್ಮನು ಸ್ವಪ್ರಕಾಶನಾದ್ದರಿಂದ ಬ್ರಹ್ಮಾತ್ಮೈಕ್ಯವೂ ಸ್ವಪ್ರಕಾಶವಾಗಬೇಕಾಗುವದು. ಸ್ವಪ್ರಕಾಶವಾದುದನ್ನು ಸಾಧಿಸಹೊರಟಾಗ ಶಾಸ್ತ್ರಗಳಿಗೆ ಸಿದ್ಧಸಾಧನತಾ ಎಂಬ ದೋಷ ಬರುವದು. ಬ್ರಹ್ಮನ ಸ್ವರೂಪವಲ್ಲದೆ ಐಕ್ಯವು ಅವನಿಂದ ಬೇರೆಯಾಗಿದೆ ಎಂದರೆ ಬ್ರಹ್ಮನಿಂದ ಭಿನ್ನವಾದ ಸಕಲವೂ ಮಿಥ್ಯವೆಂಬ ಅವರ ಮತದ ಪ್ರಕ್ರಿಯೆಗನುಗುಣವಾಗಿ ಅದೂ ಮಿಥ್ಯೆಯಾಗಬೇಕಾಗುವದು. ಅಂಥ ಮಿಥ್ಯಾ ವಿಷಯವನ್ನು ಪ್ರತಿಪಾದಿಸುವ ಶಾಸ್ತ್ರ ಅಪ್ರಾಮಾಣಿಕವೇ ಆಗುತ್ತದೆ.

ಐಕ್ಯವು ಬ್ರಹ್ಮಸ್ವರೂಪವಾಗಿ ಅಭಿನ್ನವಾಗಿದ್ದರೂ ವಿಶೇಷವೊಂದನ್ನು ಹೇಳಲು ಅವರ ಶಾಸ್ತ್ರ ಹೊರಟಿದೆ ಎನ್ನುವಂತಿಲ್ಲ. ಏಕೆಂದರೆ ಅವರ ಪ್ರಕಾರ ಬ್ರಹ್ಮ ನಿರ್ವಿಶೇಷ. ನಿರ್ವಿಶೇಷ ವಸ್ತುವಿನಲ್ಲಿ ವಿಶೇಷ ಹೇಳುವದು ವ್ಯಾಹತಿಯಲ್ಲವೆ? ಶಾಸ್ತ್ರವು ಬ್ರಹ್ಮಾಭಿನ್ನವಾದ ಆತ್ಮೈಕ್ಯಕ್ಕೆ ಒದಗಿರುವ ಆವರಣವೊಂದನ್ನು ಕಳೆಯಲು ಹೊರಟಿದೆ ಎನ್ನುವದೂ ಉಚಿತವಲ್ಲ. ಬ್ರಹ್ಮ ಸ್ವಪ್ರಕಾಶವೆಂದ ಮೇಲೆ ಅದಕ್ಕೆ

ಆವರಣವನ್ನು ಒಪ್ಪುವದು ಎಂತು? ಹೀಗೆ ಅಜ್ಞಾನವನ್ನು ಸಾಧಿಸಲು ಮಾಯಾವಾದ ಮತದಲ್ಲಿ ಸಾಧ್ಯವಾಗುವದಿಲ್ಲ. ಅಜ್ಞಾನವನ್ನು ಸಾಧಿಸದೆ ಹೋದಾಗ ಅದನ್ನೇ ಅವಲಂಬಿಸಿ ಸಿದ್ಧವಾಗುವ ಅಧಿಕಾರಿ, ವಿಷಯ, ಪ್ರಯೋಜನ ಎಂಬ ಮೂರನ್ನು ಸಾಧಿಸಲು ಸಾಧ್ಯವಾಗುವದಿಲ್ಲ.

ಅಜ್ಞಾನವಿರುವವನು ಅಧಿಕಾರಿ, ಅಜ್ಞಾತವಾದದ್ದು ವಿಷಯ. ಅಜ್ಞಾನ ನಿವೃತ್ತಿಯು ಪ್ರಯೋಜನ ಹೀಗೆ ಮೂರಕ್ಕೂ ಮೂಲವಾದ ಅಜ್ಞಾನವನ್ನೇ ಸಾಧಿಸಲು ಅಸಾಧ್ಯವಾದಾಗ ಅಧಿಕಾರಿ, ವಿಷಯ ಮತ್ತು ಪ್ರಯೋಜನಗಳು ಸಿದ್ಧಿಸದೇ ಹೋಗುವವು. ಅವುಗಳ ಮಧ್ಯೆ ಸಂಬಂಧವಂತು ಸಾಧ್ಯವೇ ಆಗುವುದಿಲ್ಲ.

ಹೀಗೆ ಮಾಯಾವಾದಮತವು ಅಪ್ರಾಮಾಣಿಕ ಮತ್ತು ಪ್ರಮಾಣ ವಿರುದ್ಧ ಎಂಬುದನ್ನು ತೋರಿಸಿ, ಅನಂತರ ಜೀವೇಶ್ವರ ಭೇದ, ಜಗತ್ಸತ್ಯತ್ವ, ಹರಿಸರ್ವೋತ್ತಮತ್ವ, ದೇವತಾತಾರತಮ್ಯ ಮೊದಲಾದವುಗಳನ್ನು ಅಂಗೀಕರಿಸುವ ತಮ್ಮ ತತ್ತ್ವವಾದವು ಅತ್ಯಂತ ಪ್ರಾಮಾಣಿಕ ಮತ್ತು ಸಕಲ ಪ್ರಮಾಣಗಳಿಗೆ ಅವಿರುದ್ಧ ಎಂಬುದನ್ನು ಭಗವದ್ಗೀತೆ, ಕಠೋಪನಿಷತ್ತು ಮತ್ತು ಮಹಾಭಾರತದ ವಾಕ್ಯಗಳನ್ನು ಉದಾಹರಿಸಿ ಪ್ರತಿಪಾದಿಸಿರುವರು.

ಮಾಯಾವಾದಮತದ ವಾಙ್ಮಯರಾಶಿಯನ್ನೆಲ್ಲ ಆಚಾರ್ಯರು ಒಂದೇ ವಾಕ್ಯದಿಂದ ನಿರಾಸ ಮಾಡಿದರು ಎಂಬ ಪ್ರಸ್ತಾಪ ಸುಮಧ್ವವಿಜಯದಲ್ಲಿದೆ. ಆ ಮಾತು 'ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಂ' ಎಂಬ ಇದರಲ್ಲಿಯ ಮಾತು ಎಂಬುದು ಸಂಪ್ರದಾಯ.

## ಪ್ರಪಂಚ ಮಿಥ್ಯಾತ್ವಾನುಮಾನ ಖಂಡನ

ಶ್ರೀಮದಾಚಾರ್ಯರ ದಶಪ್ರಕರಣಗಳಲ್ಲಿ ಮಾಯಾವಾದಖಂಡನ ಉಪಾಧಿಖಂಡನ ಮತ್ತು ಪ್ರಪಂಚಮಿಥ್ಯಾತ್ವಾನುಮಾನಖಂಡನ ಎಂಬ ಮೂರು ಕೃತಿಗಳು ಖಂಡನತ್ರಯ ಎಂದೇ ಪ್ರಸಿದ್ಧವಾಗಿವೆ. ಇವು ಮೂರೂ ಪ್ರಧಾನವಾಗಿ ಅದ್ವೈತಮತದ ವಿಮರ್ಶೆಗೆ ಮೀಸಲಾದ ಕೃತಿಗಳು.

ಅದ್ವೈತಮತವು ಬ್ರಹ್ಮ ಒಂದೇ ಸತ್ಯ ಉಳಿದೆಲ್ಲ ಮಿಥ್ಯೆ ಎನ್ನುವದು. ಜಗನ್ಮಿಥ್ಯಾತ್ವವನ್ನು ಸಾಧಿಸಲು ಅವರು ದೃಶ್ಯತ್ವಾತ್, ಜಡತ್ವಾತ್ ಮತ್ತು

ಪರಿಚ್ಛಿನತ್ವಾತ್ ಎಂಬ ಮೂರು ಹೇತುಗಳನ್ನು ಕೊಡುವರು. ಅವುಗಳಲ್ಲಿ ವಿಮತಂ ಮಿಥ್ಯಾ, ದೃಶ್ಯತ್ವಾತ್ ಎಂಬ ಅನುಮಾನವನ್ನು ಪ್ರಪಂಚಮಿಥ್ಯಾತ್ವಾನುಮಾನ ಖಂಡನದಲ್ಲಿ ವಿಮರ್ಶಿಸಲಾಗಿದೆ.

ದೂರದಲ್ಲಿರುವ ಕಪ್ಪೆಚಿಪ್ಪನ್ನು ನೋಡಿದಾಗ ಅದು ಬೆಳ್ಳಿಯಂತೆ ಕಂಡು, ಪರೀಕ್ಷಿಸಿದಾಗ ಅದು ಬೆಳ್ಳಿಯಲ್ಲ ಕಪ್ಪೆಚಿಪ್ಪು ಎಂದು ಖಚಿತಪಡುತ್ತದೆ. ಇಲ್ಲಿ ಬೆಳ್ಳಿಯೆಂಬುದು ಭ್ರಮೆ; ಕಪ್ಪೆಚಿಪ್ಪು ಎಂಬುದು ಸತ್ಯ. ಇದರಿಂದ ಯಾವುದು ಇರುವಂತೆ ತೋರುತ್ತದೋ ಅದು ವಾಸ್ತವವಾಗಿ ಇರುವದಿಲ್ಲ; ಎಂದರೆ ಜಗತ್ತು ಇರುವಂತೆ ತೋರುವದರಿಂದ ಅದು ಮಿಥ್ಯೆ ಎಂಬುದು ಅದ್ವೈತಿಗಳ ವಾದಸರಣಿ. ಇದನ್ನು ಆಚಾರ್ಯರು ಸಮಗ್ರವಾಗಿ ವಿಮರ್ಶಿಸಿ ಒಂದು ಅನುಮಾನಕ್ಕೆ ಇರಬಹುದಾದ ಅಸಿದ್ಧಿ, ವಿರೋಧ, ಆಶ್ರಯಾಸಿದ್ಧಿ, ಅಪ್ರಸಿದ್ಧವಿಶೇಷಣತ್ವ ಸಿದ್ಧ ಸಾಧನತಾ ಅನೇಕಾಂತಿಕತಾ, ಸಾಧನವೈಕಲ್ಯ, ಸಾಧ್ಯವೈಕಲ್ಯ ಉಪಾಧಿ ಮೊದಲಾದ ಸಕಲದೋಷಗಳೂ ಇದರಲ್ಲಿ ಉಂಟು ಎಂಬುದನ್ನು ಪ್ರಬಲವಾಗಿ ಸಾಧಿಸಿರುವರು. ತೋರುವದು ಮಿಥ್ಯ ಎನ್ನುವದಾದರೆ ಬ್ರಹ್ಮನೂ ತೋರುವದರಿಂದ ಅವನೂ ಮಿಥ್ಯೆಯಾಗಬೇಕಾಗುವದು ಎಂದು ಸಾಧಿಸುತ್ತ ಅದ್ವೈತಿಗಳು ಜಗನ್ಮಿಥ್ಯಾತ್ವವನ್ನು ಸಾಧಿಸಹೊರಟು ಬ್ರಹ್ಮಮಿಥ್ಯಾತ್ವವನ್ನು ಒಪ್ಪಿಕೊಳ್ಳಬೇಕಾದ ವಿಚಿತ್ರಪರಿಸ್ಥಿತಿಗೆ ಸಿಲುಕಿಕೊಳ್ಳಬೇಕಾಗುತ್ತದೆ ಎಂಬುದನ್ನು ತೋರಿಸಿ ಆ ವಾದದ ಪೊಳ್ಳುತನವನ್ನು ನಿರೂಪಿಸಿರುವರು. ಕೊನೆಯಲ್ಲಿ ಪಕ್ಷ, ಸಪಕ್ಷ, ವಿಪಕ್ಷ, ದೃಷ್ಟಾಂತ, ಹೇತು ಮೊದಲಾದ ಪಾರಿಭಾಷಿಕ ಪದಗಳ ಲಕ್ಷಣಗಳನ್ನು ವಿವರಿಸಿರುವರು.

ಖಂಡನತ್ರಯಗಳು ಅದ್ವೈತದ ವಿಮರ್ಶೆಗೆ ಮೀಸಲಾಗಲು ಕಾರಣ ಅದು ಇತರ ಸಕಲ ಮತಗಳನ್ನು ಹಿಂದಕ್ಕೆ ಹಾಕಿ ವಿಜೃಂಬಿಸಿ ತೊಡಗಿದ್ದೇ ಆಗಿದೆ. ಅದಕ್ಕೆ ಉತ್ತರವಾಗಿ ಹೊರಟ ವಿಶಿಷ್ಟಾದ್ವೈತವು ಸಹ ಅದರ ಪ್ರಭಾವದಿಂದ ಮುಕ್ತವಾಗಲು ಸಾಧ್ಯವಾಗಲಿಲ್ಲ ಎನ್ನಲು ವಿಶಿಷ್ಟಾದ್ವೈತ ಎಂಬ ಅದರ ಹೆಸರೇ ಸಾಕ್ಷಿ. ಎಂದರೆ ಅದ್ವೈತ ಮತದ ವಿಮರ್ಶೆ ಉಳಿದೆಲ್ಲ ಮತಗಳ ವಿಮರ್ಶೆಗೂ ದಾರಿದೀಪವಾಗಿದೆ. ಮತ್ತು ತತ್ತ್ವವಾದಕ್ಕೆ ಮಾಯಾವಾದವಾಗಿ ದ್ವೈತಮತಕ್ಕೆ ಅದ್ವೈತ ಮತವಾಗಿ ನೇರವಾಗಿ ಅದು ಪ್ರಬಲ ವಿರೋಧಿಯಾಗಿದೆ ಎಂಬುದನ್ನು ತೋರಿಸುತ್ತದೆ. ಈ ದೃಷ್ಟಿಯಿಂದ ವಿವೇಚಿಸಿದಾಗ ಅದ್ವೈತಮತದ ವಿಮರ್ಶೆಗೆ ಆಚಾರ್ಯ ಶ್ರೀ ಮಧ್ವರು ವಿಶೇಷ ಮಹತ್ವ ಕೊಟ್ಟಿದ್ದರ ಹಿನ್ನೆಲೆ ಸ್ಪಷ್ಟಪಡುತ್ತದೆ.

• • •   • • •   • • •   • • •   • • •   • • •

ಆವರಣವನ್ನು ಒಪ್ಪುವದು ಎಂತು? ಹೀಗೆ ಅಜ್ಞಾನವನ್ನು ಸಾಧಿಸಲು ಮಾಯಾವಾದ ಮತದಲ್ಲಿ ಸಾಧ್ಯವಾಗುವದಿಲ್ಲ. ಅಜ್ಞಾನವನ್ನು ಸಾಧಿಸದೆ ಹೋದಾಗ ಅದನ್ನೇ ಅವಲಂಬಿಸಿ ಸಿದ್ಧವಾಗುವ ಅಧಿಕಾರಿ, ವಿಷಯ, ಪ್ರಯೋಜನ ಎಂಬ ಮೂರನ್ನು ಸಾಧಿಸಲು ಸಾಧ್ಯವಾಗುವದಿಲ್ಲ.

ಅಜ್ಞಾನವಿರುವವನು ಅಧಿಕಾರಿ, ಅಜ್ಞಾತವಾದದ್ದು ವಿಷಯ. ಅಜ್ಞಾನ ನಿವೃತ್ತಿಯು ಪ್ರಯೋಜನ ಹೀಗೆ ಮೂರಕ್ಕೂ ಮೂಲವಾದ ಅಜ್ಞಾನವನ್ನೇ ಸಾಧಿಸಲು ಅಸಾಧ್ಯವಾದಾಗ ಅಧಿಕಾರಿ, ವಿಷಯ ಮತ್ತು ಪ್ರಯೋಜನಗಳು ಸಿದ್ಧಿಸದೇ ಹೋಗುವವು. ಅವುಗಳ ಮಧ್ಯೆ ಸಂಬಂಧವಂತು ಸಾಧ್ಯವೇ ಆಗುವುದಿಲ್ಲ.

ಹೀಗೆ ಮಾಯಾವಾದಮತವು ಅಪ್ರಾಮಾಣಿಕ ಮತ್ತು ಪ್ರಮಾಣ ವಿರುದ್ಧ ಎಂಬುದನ್ನು ತೋರಿಸಿ, ಅನಂತರ ಜೀವೇಶ್ವರ ಭೇದ, ಜಗತ್ಸತ್ಯತ್ವ, ಹರಿಸರ್ವೋತ್ತಮತ್ವ, ದೇವತಾತಾರತಮ್ಯ ಮೊದಲಾದವುಗಳನ್ನು ಅಂಗೀಕರಿಸುವ ತಮ್ಮ ತತ್ತ್ವವಾದವು ಅತ್ಯಂತ ಪ್ರಾಮಾಣಿಕ ಮತ್ತು ಸಕಲ ಪ್ರಮಾಣಗಳಿಗೆ ಅವಿರುದ್ಧ ಎಂಬುದನ್ನು ಭಗವದ್ಗೀತೆ, ಕಠೋಪನಿಷತ್ತು ಮತ್ತು ಮಹಾಭಾರತದ ವಾಕ್ಯಗಳನ್ನು ಉದಾಹರಿಸಿ ಪ್ರತಿಪಾದಿಸಿರುವರು.

ಮಾಯಾವಾದಮತದ ವಾಙ್ಮಯರಾಶಿಯನ್ನೆಲ್ಲ ಆಚಾರ್ಯರು ಒಂದೇ ವಾಕ್ಯದಿಂದ ನಿರಾಸ ಮಾಡಿದರು ಎಂಬ ಪ್ರಸ್ತಾಪ ಸುಮಧ್ವವಿಜಯದಲ್ಲಿದೆ. ಆ ಮಾತು 'ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಂ' ಎಂಬ ಇದರಲ್ಲಿಯ ಮಾತು ಎಂಬುದು ಸಂಪ್ರದಾಯ.

# ಪ್ರಪಂಚ ಮಿಥ್ಯಾತ್ವಾನುಮಾನ ಖಂಡನ

ಶ್ರೀಮದಾಚಾರ್ಯರ ದಶಪ್ರಕರಣಗಳಲ್ಲಿ ಮಾಯಾವಾದಖಂಡನ ಉಪಾಧಿಖಂಡನ ಮತ್ತು ಪ್ರಪಂಚಮಿಥ್ಯಾತ್ವಾನುಮಾನಖಂಡನ ಎಂಬ ಮೂರು ಕೃತಿಗಳು ಖಂಡನತ್ರಯ ಎಂದೇ ಪ್ರಸಿದ್ಧವಾಗಿವೆ. ಇವು ಮೂರೂ ಪ್ರಧಾನವಾಗಿ ಅದ್ವೈತಮತದ ವಿಮರ್ಶೆಗೆ ಮೀಸಲಾದ ಕೃತಿಗಳು.

ಅದ್ವೈತಮತವು ಬ್ರಹ್ಮ ಒಂದೇ ಸತ್ಯ ಉಳಿದೆಲ್ಲ ಮಿಥ್ಯೆ ಎನ್ನುವದು. ಜಗನ್ಮಿಥ್ಯಾತ್ವವನ್ನು ಸಾಧಿಸಲು ಅವರು ದೃಶ್ಯತ್ವಾತ್, ಜಡತ್ವಾತ್ ಮತ್ತು

ಪರಿಚ್ಛಿನ್ನತ್ವಾತ್ ಎಂಬ ಮೂರು ಹೇತುಗಳನ್ನು ಕೊಡುವರು. ಅವುಗಳಲ್ಲಿ ವಿಮತಂ ಮಿಥ್ಯಾ, ದೃಶ್ಯತ್ವಾತ್ ಎಂಬ ಅನುಮಾನವನ್ನು ಪ್ರಪಂಚಮಿಥ್ಯಾತ್ವಾನುಮಾನ ಖಂಡನದಲ್ಲಿ ವಿಮರ್ಶಿಸಲಾಗಿದೆ.

ದೂರದಲ್ಲಿರುವ ಕಪ್ಪೆಚಿಪ್ಪನ್ನು ನೋಡಿದಾಗ ಅದು ಬೆಳ್ಳಿಯಂತೆ ಕಂಡು, ಪರೀಕ್ಷಿಸಿದಾಗ ಅದು ಬೆಳ್ಳಿಯಲ್ಲ ಕಪ್ಪೆಚಿಪ್ಪು ಎಂದು ಖಚಿತಪಡುತ್ತದೆ. ಇಲ್ಲಿ ಬೆಳ್ಳಿಯೆಂಬುದು ಭ್ರಮೆ; ಕಪ್ಪೆಚಿಪ್ಪು ಎಂಬುದು ಸತ್ಯ. ಇದರಿಂದ ಯಾವುದು ಇರುವಂತೆ ತೋರುತ್ತದೋ ಅದು ವಾಸ್ತವವಾಗಿ ಇರುವದಿಲ್ಲ: ಎಂದರೆ ಜಗತ್ತು ಇರುವಂತೆ ತೋರುವದರಿಂದ ಅದು ಮಿಥ್ಯೆ ಎಂಬುದು ಅದ್ವೈತಿಗಳ ವಾದಸರಣಿ. ಇದನ್ನು ಆಚಾರ್ಯರು ಸಮಗ್ರವಾಗಿ ವಿಮರ್ಶಿಸಿ ಒಂದು ಅನುಮಾನಕ್ಕೆ ಇರಬಹುದಾದ ಅಸಿದ್ಧಿ, ವಿರೋಧ, ಆಶ್ರಯಾಸಿದ್ಧಿ, ಅಪ್ರಸಿದ್ಧವಿಶೇಷಣತ್ವ ಸಿದ್ಧ ಸಾಧನತಾ ಅನೇಕಾಂತಿಕತಾ, ಸಾಧನವೈಕಲ್ಯ, ಸಾಧ್ಯವೈಕಲ್ಯ ಉಪಾಧಿ ಮೊದಲಾದ ಸಕಲದೋಷಗಳೂ ಇದರಲ್ಲಿ ಉಂಟು ಎಂಬುದನ್ನು ಪ್ರಬಲವಾಗಿ ಸಾಧಿಸಿರುವರು. ತೋರುವದು ಮಿಥ್ಯ ಎನ್ನುವದಾದರೆ ಬ್ರಹ್ಮನೂ ತೋರುವದರಿಂದ ಅವನೂ ಮಿಥ್ಯೆಯಾಗಬೇಕಾಗುವದು ಎಂದು ಸಾಧಿಸುತ್ತ ಅದ್ವೈತಿಗಳು ಜಗನ್ಮಿಥ್ಯಾತ್ವವನ್ನು ಸಾಧಿಸಹೊರಟು ಬ್ರಹ್ಮಮಿಥ್ಯಾತ್ವವನ್ನು ಒಪ್ಪಿಕೊಳ್ಳಬೇಕಾದ ವಿಚಿತ್ರಪರಿಸ್ಥಿತಿಗೆ ಸಿಲುಕಿಕೊಳ್ಳಬೇಕಾಗುತ್ತದೆ ಎಂಬುದನ್ನು ತೋರಿಸಿ ಆ ವಾದದ ಪೊಳ್ಳುತನವನ್ನು ನಿರೂಪಿಸಿರುವರು. ಕೊನೆಯಲ್ಲಿ ಪಕ್ಷ, ಸಪಕ್ಷ, ವಿಪಕ್ಷ, ದೃಷ್ಟಾಂತ, ಹೇತು ಮೊದಲಾದ ಪಾರಿಭಾಷಿಕ ಪದಗಳ ಲಕ್ಷಣಗಳನ್ನು ವಿವರಿಸಿರುವರು.

ಖಂಡನತ್ರಯಗಳು ಅದ್ವೈತದ ವಿಮರ್ಶೆಗೆ ಮೀಸಲಾಗಲು ಕಾರಣ ಅದು ಇತರ ಸಕಲ ಮತಗಳನ್ನು ಹಿಂದಕ್ಕೆ ಹಾಕಿ ವಿಜೃಂಭಿಸಿ ತೊಡಗಿದ್ದೇ ಆಗಿದೆ. ಅದಕ್ಕೆ ಉತ್ತರವಾಗಿ ಹೊರಟ ವಿಶಿಷ್ಟಾದ್ವೈತವು ಸಹ ಅದರ ಪ್ರಭಾವದಿಂದ ಮುಕ್ತವಾಗಲು ಸಾಧ್ಯವಾಗಲಿಲ್ಲ ಎನ್ನಲು ವಿಶಿಷ್ಟಾದ್ವೈತ ಎಂಬ ಅದರ ಹೆಸರೇ ಸಾಕ್ಷಿ. ಎಂದರೆ ಅದ್ವೈತ ಮತದ ವಿಮರ್ಶೆ ಉಳಿದೆಲ್ಲ ಮತಗಳ ವಿಮರ್ಶೆಗೂ ದಾರಿದೀಪವಾಗಿದೆ. ಮತ್ತು ತತ್ತ್ವವಾದಕ್ಕೆ ಮಾಯಾವಾದವಾಗಿ ದ್ವೈತಮತಕ್ಕೆ ಅದ್ವೈತ ಮತವಾಗಿ ನೇರವಾಗಿ ಅದು ಪ್ರಬಲ ವಿರೋಧಿಯಾಗಿದೆ ಎಂಬುದನ್ನು ತೋರಿಸುತ್ತದೆ. ಈ ದೃಷ್ಟಿಯಿಂದ ವಿವೇಚಿಸಿದಾಗ ಅದ್ವೈತಮತದ ವಿಮರ್ಶೆಗೆ ಆಚಾರ್ಯ ಶ್ರೀ ಮಧ್ವರು ವಿಶೇಷ ಮಹತ್ವ ಕೊಟ್ಟಿದ್ದರ ಹಿನ್ನೆಲೆ ಸ್ಪಷ್ಟಪಡುತ್ತದೆ.

• • • • • • • • • • • • • • • • • •

ಆವರಣವನ್ನು ಒಪ್ಪುವದು ಎಂತು? ಹೀಗೆ ಅಜ್ಞಾನವನ್ನು ಸಾಧಿಸಲು ಮಾಯಾವಾದ ಮತದಲ್ಲಿ ಸಾಧ್ಯವಾಗುವದಿಲ್ಲ. ಅಜ್ಞಾನವನ್ನು ಸಾಧಿಸದೆ ಹೋದಾಗ ಅದನ್ನೇ ಅವಲಂಬಿಸಿ ಸಿದ್ಧವಾಗುವ ಅಧಿಕಾರಿ, ವಿಷಯ, ಪ್ರಯೋಜನ ಎಂಬ ಮೂರನ್ನು ಸಾಧಿಸಲು ಸಾಧ್ಯವಾಗುವದಿಲ್ಲ.

ಅಜ್ಞಾನವಿರುವವನು ಅಧಿಕಾರಿ, ಅಜ್ಞಾತವಾದದ್ದು ವಿಷಯ. ಅಜ್ಞಾನ ನಿವೃತ್ತಿಯು ಪ್ರಯೋಜನ ಹೀಗೆ ಮೂರಕ್ಕೂ ಮೂಲವಾದ ಅಜ್ಞಾನವನ್ನೇ ಸಾಧಿಸಲು ಅಸಾಧ್ಯವಾದಾಗ ಅಧಿಕಾರಿ, ವಿಷಯ ಮತ್ತು ಪ್ರಯೋಜನಗಳು ಸಿದ್ಧಿಸದೇ ಹೋಗುವವು. ಅವುಗಳ ಮಧ್ಯೆ ಸಂಬಂಧವಂತು ಸಾಧ್ಯವೇ ಆಗುವುದಿಲ್ಲ.

ಹೀಗೆ ಮಾಯಾವಾದಮತವು ಅಪ್ರಾಮಾಣಿಕ ಮತ್ತು ಪ್ರಮಾಣ ವಿರುದ್ಧ ಎಂಬುದನ್ನು ತೋರಿಸಿ, ಅನಂತರ ಜೀವೇಶ್ವರ ಭೇದ, ಜಗತ್ಸತ್ಯತ್ವ, ಹರಿಸರ್ವೋತ್ತಮತ್ವ, ದೇವತಾತಾರತಮ್ಯ ಮೊದಲಾದವುಗಳನ್ನು ಅಂಗೀಕರಿಸುವ ತಮ್ಮ ತತ್ತ್ವವಾದವು ಅತ್ಯಂತ ಪ್ರಾಮಾಣಿಕ ಮತ್ತು ಸಕಲ ಪ್ರಮಾಣಗಳಿಗೆ ಅವಿರುದ್ಧ ಎಂಬುದನ್ನು ಭಗವದ್ಗೀತೆ, ಕಠೋಪನಿಷತ್ತು ಮತ್ತು ಮಹಾಭಾರತದ ವಾಕ್ಯಗಳನ್ನು ಉದಾಹರಿಸಿ ಪ್ರತಿಪಾದಿಸಿರುವರು.

ಮಾಯಾವಾದಮತದ ವಾಙ್ಮಯರಾಶಿಯನ್ನೆಲ್ಲ ಆಚಾರ್ಯರು ಒಂದೇ ವಾಕ್ಯದಿಂದ ನಿರಾಸ ಮಾಡಿದರು ಎಂಬ ಪ್ರಸ್ತಾಪ ಸುಮಧ್ವವಿಜಯದಲ್ಲಿದೆ. ಆ ಮಾತು 'ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಂ' ಎಂಬ ಇದರಲ್ಲಿಯ ಮಾತು ಎಂಬುದು ಸಂಪ್ರದಾಯ.

# ಪ್ರಪಂಚ ಮಿಥ್ಯಾತ್ವಾನುಮಾನ ಖಂಡನ

ಶ್ರೀಮದಾಚಾರ್ಯರ ದಶಪ್ರಕರಣಗಳಲ್ಲಿ ಮಾಯಾವಾದಖಂಡನ ಉಪಾಧಿಖಂಡನ ಮತ್ತು ಪ್ರಪಂಚಮಿಥ್ಯಾತ್ವಾನುಮಾನಖಂಡನ ಎಂಬ ಮೂರು ಕೃತಿಗಳು ಖಂಡನತ್ರಯ ಎಂದೇ ಪ್ರಸಿದ್ಧವಾಗಿವೆ. ಇವು ಮೂರೂ ಪ್ರಧಾನವಾಗಿ ಅದ್ವೈತಮತದ ವಿಮರ್ಶೆಗೆ ಮೀಸಲಾದ ಕೃತಿಗಳು.

ಅದ್ವೈತಮತವು ಬ್ರಹ್ಮ ಒಂದೇ ಸತ್ಯ ಉಳಿದೆಲ್ಲ ಮಿಥ್ಯೆ ಎನ್ನುವದು. ಜಗನ್ಮಿಥ್ಯಾತ್ವವನ್ನು ಸಾಧಿಸಲು ಅವರು ದೃಶ್ಯತ್ವಾತ್, ಜಡತ್ವಾತ್ ಮತ್ತು

ಪರಿಚ್ಛಿನತ್ವಾತ್ ಎಂಬ ಮೂರು ಹೇತುಗಳನ್ನು ಕೊಡುವರು. ಅವುಗಳಲ್ಲಿ ವಿಮತಂ ಮಿಥ್ಯಾ, ದೃಶ್ಯತ್ವಾತ್ ಎಂಬ ಅನುಮಾನವನ್ನು ಪ್ರಪಂಚಮಿಥ್ಯಾತ್ವಾನುಮಾನ ಖಂಡನದಲ್ಲಿ ವಿಮರ್ಶಿಸಲಾಗಿದೆ.

ದೂರದಲ್ಲಿರುವ ಕಪ್ಪೆಚಿಪ್ಪನ್ನು ನೋಡಿದಾಗ ಅದು ಬೆಳ್ಳಿಯಂತೆ ಕಂಡು, ಪರೀಕ್ಷಿಸಿದಾಗ ಅದು ಬೆಳ್ಳಿಯಲ್ಲ ಕಪ್ಪೆಚಿಪ್ಪು ಎಂದು ಖಚಿತಪಡುತ್ತದೆ. ಇಲ್ಲಿ ಬೆಳ್ಳಿಯೆಂಬುದು ಭ್ರಮೆ; ಕಪ್ಪೆಚಿಪ್ಪು ಎಂಬುದು ಸತ್ಯ. ಇದರಿಂದ ಯಾವುದು ಇರುವಂತೆ ತೋರುತ್ತದೋ ಅದು ವಾಸ್ತವವಾಗಿ ಇರುವದಿಲ್ಲ; ಎಂದರೆ ಜಗತ್ತು ಇರುವಂತೆ ತೋರುವದರಿಂದ ಅದು ಮಿಥ್ಯೆ ಎಂಬುದು ಅದ್ವೈತಿಗಳ ವಾದಸರಣಿ. ಇದನ್ನು ಆಚಾರ್ಯರು ಸಮಗ್ರವಾಗಿ ವಿಮರ್ಶಿಸಿ ಒಂದು ಅನುಮಾನಕ್ಕೆ ಇರಬಹುದಾದ ಅಸಿದ್ಧಿ, ವಿರೋಧ, ಆಶ್ರಯಾಸಿದ್ಧಿ, ಅಪ್ರಸಿದ್ಧವಿಶೇಷಣತ್ವ ಸಿದ್ಧ ಸಾಧನತಾ ಅನೇಕಾಂತಿಕತಾ, ಸಾಧನವೈಕಲ್ಯ, ಸಾಧ್ಯವೈಕಲ್ಯ ಉಪಾಧಿ ಮೊದಲಾದ ಸಕಲದೋಷಗಳೂ ಇದರಲ್ಲಿ ಉಂಟು ಎಂಬುದನ್ನು ಪ್ರಬಲವಾಗಿ ಸಾಧಿಸಿರುವರು. ತೋರುವದು ಮಿಥ್ಯ ಎನ್ನುವದಾದರೆ ಬ್ರಹ್ಮನೂ ತೋರುವದರಿಂದ ಅವನೂ ಮಿಥ್ಯೆಯಾಗಬೇಕಾಗುವದು ಎಂದು ಸಾಧಿಸುತ್ತ ಅದ್ವೈತಿಗಳು ಜಗನ್ಮಿಥ್ಯಾತ್ವವನ್ನು ಸಾಧಿಸಹೊರಟು ಬ್ರಹ್ಮಮಿಥ್ಯಾತ್ವವನ್ನು ಒಪ್ಪಿಕೊಳ್ಳಬೇಕಾದ ವಿಚಿತ್ರಪರಿಸ್ಥಿತಿಗೆ ಸಿಲುಕಿಕೊಳ್ಳಬೇಕಾಗುತ್ತದೆ ಎಂಬುದನ್ನು ತೋರಿಸಿ ಆ ವಾದದ ಪೊಳ್ಳುತನವನ್ನು ನಿರೂಪಿಸಿರುವರು. ಕೊನೆಯಲ್ಲಿ ಪಕ್ಷ, ಸಪಕ್ಷ, ವಿಪಕ್ಷ, ದೃಷ್ಟಾಂತ, ಹೇತು ಮೊದಲಾದ ಪಾರಿಭಾಷಿಕ ಪದಗಳ ಲಕ್ಷಣಗಳನ್ನು ವಿವರಿಸಿರುವರು.

ಖಂಡನತ್ರಯಗಳು ಅದ್ವೈತದ ವಿಮರ್ಶೆಗೆ ಮೀಸಲಾಗಲು ಕಾರಣ ಅದು ಇತರ ಸಕಲ ಮತಗಳನ್ನು ಹಿಂದಕ್ಕೆ ಹಾಕಿ ವಿಜೃಂಬಿಸಿ ತೊಡಗಿದ್ದೇ ಆಗಿದೆ. ಅದಕ್ಕೆ ಉತ್ತರವಾಗಿ ಹೊರಟ ವಿಶಿಷ್ಟಾದ್ವೈತವು ಸಹ ಅದರ ಪ್ರಭಾವದಿಂದ ಮುಕ್ತವಾಗಲು ಸಾಧ್ಯವಾಗಲಿಲ್ಲ ಎನ್ನಲು ವಿಶಿಷ್ಟಾದ್ವೈತ ಎಂಬ ಅದರ ಹೆಸರೇ ಸಾಕ್ಷಿ. ಎಂದರೆ ಅದ್ವೈತ ಮತದ ವಿಮರ್ಶೆ ಉಳಿದೆಲ್ಲ ಮತಗಳ ವಿಮರ್ಶೆಗೂ ದಾರಿದೀಪವಾಗಿದೆ. ಮತ್ತು ತತ್ತ್ವವಾದಕ್ಕೆ ಮಾಯಾವಾದವಾಗಿ ದ್ವೈತಮತಕ್ಕೆ ಅದ್ವೈತ ಮತವಾಗಿ ನೇರವಾಗಿ ಅದು ಪ್ರಬಲ ವಿರೋಧಿಯಾಗಿದೆ ಎಂಬುದನ್ನು ತೋರಿಸುತ್ತದೆ. ಈ ದೃಷ್ಟಿಯಿಂದ ವಿವೇಚಿಸಿದಾಗ ಅದ್ವೈತಮತದ ವಿಮರ್ಶೆಗೆ ಆಚಾರ್ಯ ಶ್ರೀ ಮಧ್ವರು ವಿಶೇಷ ಮಹತ್ವ ಕೊಟ್ಟಿದ್ದರ ಹಿನ್ನೆಲೆ ಸ್ಪಷ್ಟಪಡುತ್ತದೆ.

• • •   • • •   • • •   • • •   • • •   • • •

ಖಂಡನತ್ರಯಗಳಿಗೆ ಜಯತೀರ್ಥರ ಟೀಕೆಗಳು ಶ್ರೀನಿವಾಸತೀರ್ಥರ ಟಿಪ್ಪಣಿಗಳು ತುಂಬಾ ಪ್ರಸಿದ್ಧ. ಶ್ರೀ ವ್ಯಾಸರಾಜರು ಶ್ರೀ ಜಯತೀರ್ಥರ ಈ ಟೀಕೆಗಳಿಗೆ 'ಮಂದಾರಮಂಜರೀ' ಎಂಬ ಸ್ವತಂತ್ರಗ್ರಂಥದಂತಹ ಟಿಪ್ಪಣಿಗಳನ್ನು ರಚಿಸಿದ್ದು ಅವೆಲ್ಲ ಅವರ ನ್ಯಾಯಾಮೃತಗ್ರಂಥದ ವಿಶೇಷಅಧ್ಯಯನಕ್ಕೆ ಪೂರಕವಾಗಿವೆ.

ಈ ಖಂಡನತ್ರಯ ಮತ್ತು ತತ್ತ್ವನಿರ್ಣಯಗಳನ್ನು ಆಧರಿಸಿ ಶ್ರೀ ಜಯತೀರ್ಥರು ರಚಿಸಿದ 'ವಾದಾವಲಿ' ಎಂಬ ಗ್ರಂಥ ಅದ್ವೈತಮತದ ವಿಮರ್ಶೆಯನ್ನು ವ್ಯಾಪಕವಾಗಿ ಮಾಡುವ ಅಪೂರ್ವಕೃತಿ. ಶ್ರೀ ವ್ಯಾಸರಾಜರ 'ನ್ಯಾಯಾಮೃತ'ವು, ಆಚಾರ್ಯರ ಆಕ್ಷೇಪಗಳಿಗೆ ಅದ್ವೈತಿಗಳು ಕೊಡಬಹುದಾದ ಸಕಲವಾದಗಳ ಸಮಗ್ರ ಪರಿಶೀಲನೆಗೆ ಮೀಸಲಾಗಿರುವ ಉದ್ಗ್ರಂಥ; ಅದನ್ನು ಆಧರಿಸಿಯೇ ವ್ಯಾಪಕವಾದ ಖಂಡನ ಮಂಡನ ಸಾಹಿತ್ಯ ಅನಂತರದ ಕಾಲದಲ್ಲಿ ರಚಿತವಾಗಿದೆ. ಇಂದಿಗೂ ದ್ವೈತಾದ್ವೈತಗಳ ವಾಕ್ಯಾರ್ಥಗೋಷ್ಠಿಗಳು ಈ ಕಾರಣಕ್ಕಾಗಿ ಅತ್ಯಂತರೋಚಕ. ಮೊಟ್ಟ ಮೊದಲಬಾರಿಗೆ ದಾರ್ಶನಿಕ ಪ್ರಪಂಚದಲ್ಲಿ ಅದ್ವೈತ ಮತಕ್ಕೆ ಅತ್ಯಂತ ಪ್ರಬಲವಾದ ಪ್ರತಿಪಕ್ಷವಾಗಿ ರೂಪಗೊಂಡದ್ದು ಆಚಾರ್ಯಶ್ರೀ ಮಧ್ವರ ದ್ವೈತವಾದ ಅಥವಾ ತತ್ತ್ವವಾದ. ಅವರ ವಾದಸರಣಿಯನ್ನು ಸೆರೆಹಿಡಿಯುವ ಪ್ರಕರಣ ಗ್ರಂಥಗಳು ಖಂಡನತ್ರಯ ಮತ್ತು ತತ್ತ್ವನಿರ್ಣಯ ಹಾಗೂ ತತ್ತ್ವೋದ್ಯೋತಗಳು.

# ತತ್ತ್ವೋದ್ಯೋತ

ಸುಮಧ್ವವಿಜಯ ಮತ್ತು ಅದರ ಭಾವಪ್ರಕಾಶಿಕೆಗಳಲ್ಲಿ ತತ್ತ್ವೋದ್ಯೋತ ಗ್ರಂಥದ ರಚನೆಯ ಹಿನ್ನೆಲೆಯು ನಿರೂಪಿತವಾಗಿದೆ. ಶ್ರೀ ಜಯತೀರ್ಥರ ತತ್ತ್ವೋದ್ಯೋತ ಟೀಕೆಯ ಕೊನೆಯಲ್ಲೂ ಇದರ ರಚನೆಗೆ ಸಂಬಂಧಿಸಿದ ವಿವರ ಬಂದಿದೆ.

ಪದ್ಮತೀರ್ಥ ಮತ್ತು ಪುಂಡರೀಕಪುರಿಯೆಂಬ ಇಬ್ಬರು ಮಾಯಾವಾದಿಗಳ ನೇತೃತ್ವದಲ್ಲಿ ಆಚಾರ್ಯರ ಗ್ರಂಥ ಭಂಡಾರವನ್ನು ಅಪಹರಿಸಲು ಯೋಜನೆಯೊಂದು ರೂಪಿತವಾಗುತ್ತದೆ. ಗ್ರಂಥಗಳನ್ನು ಅಪಹರಿಸುವ ಮೂಲಕ ಆಚಾರ್ಯರನ್ನು

ಪರಾಭವಗೊಳಿಸಬಹುದೆಂಬ ಭ್ರಮೆ ಅದಕ್ಕೆ ಕಾರಣ. ಅದರಂತೆ ಗ್ರಂಥಾಪಹರಣ ಕಾರ್ಯವನ್ನು ಅವರು ಮಾಡಿಯೂ ಬಿಡುವರು. ಆ ವಿಚಾರ ತಿಳಿಯುತ್ತಲೇ ಉಡುಪಿಯಿಂದ ಆಚಾರ್ಯರು ಆಗಮಿಸಿ ಏಕವಾಟವೆಂಬಲ್ಲಿ ಪದ್ಮತೀರ್ಥನನ್ನು ಹಿಡಿದು ನಿಲ್ಲಿಸುವರು. ಆತನು "ನಿಮ್ಮ ಶಾಸ್ತ್ರವನ್ನು ಸಾಧಿಸಬಯಸುವಿರಾದಲ್ಲಿ ಪ್ರಾಶ್ನಿಕರನ್ನು ಕರೆಸಿರಿ" ಎಂದನು. ಅದಕ್ಕೆ ಅವರು "ಬೇಕಿದ್ದಲ್ಲಿ ನೀನೇ ಅವರನ್ನು ಕರೆಸು," ಎನ್ನಲು ಅವನು "ನಾನು ಕೃತಕೃತ್ಯ ನನ್ನ ಶಾಸ್ತ್ರ ಎಲ್ಲೆಡೆ ವ್ಯಾಪಿಸಿದೆ" ಎಂದು ನುಡಿದನು. ಅದಕ್ಕೆ ಆಚಾರ್ಯರು "ನಿನ್ನ ಶಾಸ್ತ್ರ ಇಲ್ಲಿ ಮಾತ್ರ ವ್ಯಾಪಿಸಿರಬಹುದು ನಮ್ಮ ಶಾಸ್ತ್ರ ಮೂರು ಲೋಕಗಳಲ್ಲೂ ಹಬ್ಬಿದೆ" ಎಂದರು. ಅದಕ್ಕೆ ಅವನು "ನಿಮ್ಮದು ಶಾಠ್ಯದ ಮಾತು ಎಂಬುದನ್ನು ನನ್ನ ಅಂತರ್ಯಾಮಿ ಬಲ್ಲನು" ಎನ್ನಲು, ತಕ್ಷಣವೇ ಆಚಾರ್ಯರು ನಸುನಗುತ್ತಾ ನುಡಿದರಂತೆ. "ಎಲವೋ ನನ್ನ ಶಾಸ್ತ್ರ ನಿನ್ನಲ್ಲೂ ಹಬ್ಬಿದೆ. ಅಂತರ್ಯಾಮಿ ಒಬ್ಬನಿರುವನೆಂಬುದನ್ನು ನೀನೇ ಒಪ್ಪಿದೆಯಲ್ಲವೇ?" ಎಂದಾಗ ಅವನಿಗೆ ಪರಾಜಿತನಾಗದೆ ಬೇರೆ ದಾರಿಯೇ ಇರಲಿಲ್ಲ. ಮುಂದೆ ಪ್ರಾಶ್ನಿಕರು ಆಗಮಿಸಿ ಶಾಸ್ತ್ರಚರ್ಚೆ ನಡೆಯಿತು. ನಿರುತ್ತರನಾದ ಪದ್ಮತೀರ್ಥ ಮತ್ತು ಪುಂಡರೀಕಪುರಿ ಇಬ್ಬರೂ ತಮ್ಮ ಅನುಯಾಯಿಗಳೊಂದಿಗೆ ಪಲಾಯನ ಮಾಡಿದರು. ಆ ಸಭೆಯಲ್ಲಿ ಆಚಾರ್ಯರು ಮಂಡಿಸಿದ ವಾದಸರಣಿಯೇ ತತ್ತ್ವೋದ್ಯೋತ ಗ್ರಂಥ. ವಾದ ಎಂಬುದು ಇದರ ನಾಮಾಂತರ.

ಅದ್ವೈತಿಗಳು ಜೀವೇಶ್ವರರಲ್ಲಿನ ಭೇದವನ್ನು ವ್ಯಾವಹಾರಿಕ ಎನ್ನುವರು ಅಂತಹ ವ್ಯಾವಹಾರಿಕ ಎಂಬುದಕ್ಕೆ ಅನಿರ್ವಚನೀಯ, ಸದಸದ್ವಿಲಕ್ಷಣ ಎಂದು ಅವರ ಅರ್ಥ. ಸದಸದ್ವಿಲಕ್ಷಣವೆಂದರೆ ಸತ್ತೂ ಅಲ್ಲದೆ ಅಸತ್ತೂ ಅಲ್ಲದೆ ಅವೆರಡರಿಂದ ಭಿನ್ನವೆಂದು ಅವರ ವಿವರಣೆ. ಇಂತಹ ಅನಿರ್ವಚನೀಯವೆಂಬ ಪ್ರಕ್ರಿಯೆಯನ್ನು ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಎಂಬ ಯಾವ ಪ್ರಮಾಣವೂ ಒಪ್ಪುವದಿಲ್ಲ. "ನಾಸದಾಸೀನ್ನೋ ಸದಾಸೀತ್" ಎಂಬ ನಾಸದೀಯ ಸೂಕ್ತದ ಮಂತ್ರದಲ್ಲೂ ಅನಿರ್ವಚನೀಯದ ಪ್ರಸ್ತಾಪವಿಲ್ಲ ಎಂದ ಮೇಲೆ ಭೇದ ಪಾರಮಾರ್ಥಿಕವಾದುದು ಎಂದೇ ಸಿದ್ಧವಾಗುವದು ಎಂದು ನಿರೂಪಿಸಿರುವರು.

ಜಗತ್ತು ಅನಿರ್ವಚನೀಯ ಎಂದು ಸಾಧಿಸಲು ಅದ್ವೈತಿಗಳು ನೀಡುವ ದೃಶ್ಯತ್ವ, ಜಡತ್ವ ಮತ್ತು ಪರಿಚ್ಛಿನ್ನತ್ವ ಎಂಬ ಮೂರು ಹೇತುಗಳಲ್ಲಿ ದೃಶ್ಯತ್ವಹೇತುವನ್ನು ಮಾತ್ರ ಪ್ರಪಂಚಮಿಥ್ಯಾತ್ವಾನುಮಾನಖಂಡನದಲ್ಲಿ ನಿರಾಕರಿಸಿದ್ದರೆ, ಈ ಕೃತಿಯಲ್ಲಿ ಆ ಮೂರೂ ಹೇತುಗಳನ್ನು ಶ್ರೀಮದಾಚಾರ್ಯರು ಇಲ್ಲಿ ವಿವರವಾಗಿ ನಿರಾಕರಿಸಿರು

ವರು. ಜಗತ್ತು ಮಿಥ್ಯೆಯೆಂಬುದು ಪ್ರತ್ಯಕ್ಷಕ್ಕೆ ವಿರುದ್ಧವಾದುದು. ಜಗತ್ಸತ್ಯತ್ವವನ್ನು ಸಾಧಿಸುವ ಪ್ರತ್ಯಕ್ಷವು ಯಾವ ದೋಷವೂ ಇಲ್ಲದ ಪಟುಪ್ರತ್ಯಕ್ಷವಾಗಿದೆ; "ನಾಸತೋ ಅದೃಷ್ಟತ್ವಾತ್" "ನಾಭಾವ ಉಪಲಬ್ಧೇಃ" "ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್"– ಎಂಬುದಾಗಿ ಬ್ರಹ್ಮಸೂತ್ರಗಳಲ್ಲೂ ಜಗತ್ತಿನ ಮಿಥ್ಯಾತ್ವ ನಿರಾಕರಿಸಲ್ಪಟ್ಟಿದೆ.

ಈ ಸೂತ್ರಗಳಲ್ಲಿ ಬೌದ್ಧ ಮತದ ನಿರಾಸವಿದೆ. ಇವು ನಮಗೆ ಸಂಬಂಧಿಸಿದ್ದಲ್ಲ ಎಂದು ಅದ್ವೈತಿಗಳು ಹೇಳುವಂತಿಲ್ಲ ಏಕೆಂದರೆ ಅವರ ಮಾಯಾವಾದಕ್ಕೂ ಬೌದ್ಧರ ಶೂನ್ಯವಾದಕ್ಕೂ ಯಾವುದೇ ಮುಖ್ಯ ವ್ಯತ್ಯಾಸವೂ ಇಲ್ಲ.

ಪ್ರತ್ಯಕ್ಷವನ್ನು ನಿರಾಕರಿಸುವ ಸಾಮರ್ಥ್ಯ ಬೇರೆ ಯಾವುದೇ ಪ್ರಮಾಣಕ್ಕೆ ಇಲ್ಲದುದರಿಂದಲೂ, ಪ್ರತ್ಯಕ್ಷದಂತೆಯೇ ಇತರ ಪ್ರಮಾಣವೂ ಸಹ ಜಗತ್ಸತ್ಯತ್ವವನ್ನೇ ಸಮರ್ಥಿಸುವದರಿಂದಲೂ ಜೀವೇಶ್ವರರ ಭೇದ ಸತ್ಯ ಮತ್ತು ನಿತ್ಯ ಎಂಬುದೇ ಸಕಲ ಶಾಸ್ತ್ರಗಳ ಸಾರ.

ಶ್ರೀಮದಾಚಾರ್ಯರು ಈ ಗ್ರಂಥದಲ್ಲಿ ಮಾಯಾವಾದ ಮತ್ತು ಶೂನ್ಯವಾದಗಳಿಗಿರುವ ಸಾಮ್ಯವನ್ನು ಅವರವರ ಗ್ರಂಥಗಳ ಉಲ್ಲೇಖವನ್ನಿತ್ತೇ ಸಾಧಿಸಿ ತೋರಿಸಿರುವರು. ಆ ಮುಂಚೆಯೇ ಯಾದವಪ್ರಕಾಶ ಮೊದಲಾದವರು ಮಾಯಾವಾದಿಗಳನ್ನು ಪ್ರಚ್ಛನ್ನಬೌದ್ಧರೆಂದು ಕರೆದಿದ್ದರೂ, ಆದರೆ ಅವರಿಬ್ಬರಲ್ಲಿನ ಸಾಮ್ಯವನ್ನು ಅವರವರ ವಾಕ್ಯಗಳಿಂದಲೇ ಸ್ಪಷ್ಟವಾಗಿ ಸಾಧಿಸಿ ತೋರಿಸಿದವರು ಶ್ರೀಮಧ್ವಾಚಾರ್ಯರೇ.

ವಾದದಲ್ಲಿ ಪರಾಭವಗೊಂಡು ಪ್ರತಿವಾದಿಗಳು ಪಲಾಯನ ಮಾಡತೊಡಗಿದಾಗ ಆಚಾರ್ಯರ ಶಿಷ್ಯರು ಹರ್ಷೋದ್ರೇಕದಿಂದ ಆಚಾರ್ಯರನ್ನು ಸ್ತುತಿಸುತ್ತ ಪ್ರತಿವಾದಿಗಳನ್ನು ಅಪಹಾಸ್ಯಮಾಡಿ ಕೆಲವು ಶ್ಲೋಕಗಳನ್ನು ರಚಿಸಿದರು. ಅವರ ಪ್ರಾರ್ಥನೆಯಂತೆ ಶ್ರೀಮದಾಚಾರ್ಯರು ತತ್ತ್ವೋದ್ಯೋತದ ಕೊನೆಯಲ್ಲಿ ಅವುಗಳನ್ನು ಸೇರಿಸಿಕೊಂಡು ಪಠಿಸಲು ಅನುಮತಿಯಿತ್ತರು. ಈ ಕಾರಣಕ್ಕಾಗಿಯೇ ತಾವು ಅವುಗಳಿಗೂ ಟೀಕೆಯನ್ನು ರಚಿಸಿರುವದಾಗಿ ಶ್ರೀ ಜಯತೀರ್ಥರು ಬರೆದಿರುವರು. ಶ್ರೀ ಜಯತೀರ್ಥರ ಮಾತಿಗೆ ಸುಮಧ್ವವಿಜಯದ ಆ ಪ್ರಸಂಗದ ನಿರೂಪಣೆಯು ಸಂವಾದಿಯಾಗಿದೆ.

ಶ್ರೀ ಜಯತೀರ್ಥರು ಇದಕ್ಕೆ ಟೀಕೆ ರಚಿಸಿದ್ದು ಅದಕ್ಕೆ ಶ್ರೀ ವೇದೇಶತೀರ್ಥರು, ಶ್ರೀವಿಜಯೀಂದ್ರತೀರ್ಥರು, ಶ್ರೀರಾಘವೇಂದ್ರತೀರ್ಥರು, ಶ್ರೀ ಯದುಪತ್ಯಾ

ಚಾರ್ಯರು, ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥರು ಟಿಪ್ಪಣಿಗಳನ್ನು ರಚಿಸಿರುವರು. ಶ್ರೀ ಹುಲಿಗಿ ಶ್ರೀನಾಥಾಚಾರ್ಯರು ಬರೆದಿರುವ ದ್ವೈತದ್ಯುಮಣಿಯೆಂಬ ಟಿಪ್ಪಣಿಯು ತುಂಬಾ ವಿಸ್ತಾರವಾಗಿದ್ದು ನ್ಯಾಯಾಮೃತಕ್ಕೆ ಮಂಡನೆಯಾಗಿರುವ ಅದು ಸ್ವತಂತ್ರ ಗ್ರಂಥದಂತೆಯೂ ಮಾನ್ಯವಾಗಿದೆ.

## ವಿಷ್ಣುತತ್ತ್ವವಿನಿರ್ಣಯ

ದಶ ಪ್ರಕರಣಗಳಲ್ಲಿ ವಿಷ್ಣುತತ್ತ್ವನಿರ್ಣಯವು ಅತ್ಯಂತ ವಿಸ್ತಾರವಾಗಿರುವ ಕೃತಿ. ಒಂದು ರೀತಿಯಲ್ಲಿ ಇದು ಶ್ರೀ ಮದಾಚಾರ್ಯರ ಇತರ ಒಂಬತ್ತು ಪ್ರಕರಣಗಳ ಸಾರಸಂಗ್ರಹ. ಮತ್ತೊಂದು ದೃಷ್ಟಿಯಲ್ಲಿ ಅವರ ಸಮಗ್ರಸಿದ್ಧಾಂತದ ಸಂಕ್ಷಿಪ್ತ ಕೈಪಿಡಿ. ಅವರ ಅನುವ್ಯಾಖ್ಯಾನದಲ್ಲಿ ಸಮಗ್ರಸಿದ್ಧಾಂತದ ವಿವೇಚನೆಯು ಶ್ಲೋಕರೂಪದಲ್ಲಿ ಬಂದಿದ್ದರೆ, ಈ ಕೃತಿಯಲ್ಲಿ ಅದೆಲ್ಲ ಸಂಗ್ರಹವಾಗಿ ಗದ್ಯರೂಪದಲ್ಲಿ ಬಂದಿದೆ. ಶ್ರೀ ಜಯತೀರ್ಥರ ಅನುವ್ಯಾಖ್ಯಾನ ಟೀಕೆ 'ಸುಧಾ' ಎನ್ನಿಸಿದ್ದರೆ, ಅವರ ಇದರ ಟೀಕೆ ಅಣುಸುಧಾ ಎಂದು ಮಾನ್ಯವಾಗಿದೆ. ಹೆಸರೇ ಹೇಳುವಂತೆ ಅವರ ಸಿದ್ಧಾಂತದ ಅತ್ಯಂತ ಪ್ರಧಾನ ಪ್ರಮೇಯವಾದ ವಿಷ್ಣುತತ್ತ್ವದ ವಿವರವಾದ ವಿವೇಚನೆಯನ್ನು ಇದು ಒದಗಿಸುತ್ತದೆ.

ವಿಷ್ಣುತತ್ತ್ವನಿರ್ಣಯದಲ್ಲಿ ಒಟ್ಟು ಮೂರು ಪರಿಚ್ಛೇದಗಳಿದ್ದು ಅವುಗಳಲ್ಲಿ ಕ್ರಮವಾಗಿ ಭಗವಂತನ ಸದಾಗಮೈಕವಿಜ್ಞೇಯತ್ವ, ಸಮತೀತಕ್ಷರಾಕ್ಷರತ್ವ ಮತ್ತು ನಿರ್ದೋಷಾಶೇಷಸದ್ಗುಣಪೂರ್ಣತ್ವ ಎಂಬ ಮೂರು ವಿಶೇಷಣಗಳು ಪ್ರತಿಪಾದಿತವಾಗಿವೆ.

ಭಗವಂತನನ್ನು ತಿಳಿಯಲು ಸದಾಗಮಗಳೇ ಪ್ರಮುಖ ಆಧಾರ; ಸಕಲ ಸದಾಗಮಗಳು ಅವನ ಸರ್ವೋತ್ತಮತ್ವವನ್ನೇ ಪ್ರತಿಪಾದಿಸುವವು.

ಋಗ್ವೇದ ಮೊದಲಾದ ನಾಲ್ಕು ವೇದಗಳು, ಮಹಾಭಾರತ, ಮೂಲ ರಾಮಾಯಣ ಮತ್ತು ಪಂಚರಾತ್ರ ಎಂಬ ಮೂರು ಇತಿಹಾಸಗಳು ಅತ್ಯಂತ ಮುಖ್ಯವಾದ ಸದಾಗಮಗಳು. ಭಾಗವತ ಮೊದಲಾದ ಅದಕ್ಕೆ ಅನುಕೂಲವಾಗುವ ಇತರ ಸಕಲ ಆಗಮಗಳು ಸಹ ಸದಾಗಮಗಳೇ ಆಗಿವೆ. ಅವುಗಳಿಂದ ಮಾತ್ರವೇ ಭಕ್ತರು ಭಗವಂತನನ್ನು ತಿಳಿಯಲು ಸಾಧ್ಯ. ಕೇವಲ ಯುಕ್ತಿ ಮತ್ತು ಪ್ರತ್ಯಕ್ಷಗಳಿಂದ ಭಗವಂತನನ್ನು ತಿಳಿಯಲು ಸಾಧ್ಯವಿಲ್ಲ. ವೇದಗಳು ಅಪೌರುಷೇಯವಾದ್ದರಿಂದ

ಅವುಗಳಲ್ಲಿ ಯಾವುದೇ ವಿಧವಾದ ದೋಷಗಳಿಗೂ ಅವಕಾಶವೇ ಇಲ್ಲ. ಅವುಗಳ ಪ್ರಾಮಾಣ್ಯ ಪ್ರಶ್ನಾತೀತವಾದದ್ದು. ಅವುಗಳಿಂದ "ಪಂಚಮವೇದ"ವೆಂಬುದಾಗಿ ಪರಿಗೃಹೀತವಾಗಿರುವದರಿಂದ ಇತಿಹಾಸ ಪುರಾಣಗಳೂ ಪ್ರಮಾಣಗಳೇ. ಇವುಗಳ ಪ್ರಾಮಾಣ್ಯವನ್ನು ಒಡಂಬಡದೆ ಧರ್ಮಾಧರ್ಮಾದಿ ಅತೀಂದ್ರಿಯಪದಾರ್ಥಗಳ ಪರಿಜ್ಞಾನ ಅಶಕ್ಯ.

ಧರ್ಮಾಧರ್ಮಾದಿ ಅತೀಂದ್ರಿಯ ಪದಾರ್ಥಗಳನ್ನು ಒಪ್ಪದವನು ಸಿದ್ಧಾಂತಿ ಎನ್ನಿಸಲಾರನು. ಪೌರುಷೇಯ ವಾಕ್ಯಗಳಿಂದ ಅತೀಂದ್ರಿಯಪದಾರ್ಥಗಳ ವಿವೇಚನೆ ಅಸಾಧ್ಯ. ಅವುಗಳನ್ನು ರಚಿಸಿದ ಪುರುಷನು ಸರ್ವಜ್ಞನೆಂದಾಗಲಿ ಕಪಟಿಯಲ್ಲದವನೆಂದಾಗಲಿ ಹೇಗೆ ನಿರ್ಣಯಿಸುವದು? ವೇದಗಳು ಅಕರ್ತೃಕವೆಂಬುದಾಗಿಯೇ ಪ್ರಸಿದ್ಧವಾಗಿರುವದರಿಂದ ಅವುಗಳ ಅಪೌರುಷೇಯತ್ವವು ಸ್ವತಃ ಸಿದ್ಧ— ಮೊದಲಾಗಿ ಆಗಮ ಪ್ರಾಮಾಣ್ಯವನ್ನು ಸಾಧಿಸಿ ಅಂತಹ ಆಗಮಗಳಿಂದ ಸದಾ ಭಗವಂತನೇ ಪ್ರತಿಪಾದಿತನಾಗಿರುವನು. ಅವುಗಳಿಂದಲೇ ಭಗವತ್ತತ್ತ್ವದ ಪರಿಜ್ಞಾನ ಸಾಧ್ಯ. ಧರ್ಮಾದಿಗಳು ಪರಮಪುರುಷಾರ್ಥವಲ್ಲ. ಮೋಕ್ಷವೇ ಪರಮ ಪುರುಷಾರ್ಥ; ಅದು ಲಭಿಸುವದು ವಿಷ್ಣುವಿನ ಪರಮಪ್ರಸಾದದಿಂದಲೇ. ಪರಮ ಪ್ರಸಾದಕ್ಕೆ ಉತ್ತಮತ್ವಜ್ಞಾನ, ಭೇದಜ್ಞಾನಗಳೇ ಸಾಧನ.

ಜೀವೇಶ್ವರಾಭೇದವು ಯಾವುದೇ ರೀತಿಯಿಂದಲೂ ಸಿದ್ಧಿಸುವದಿಲ್ಲ. ತತ್ತ್ವಮಸಿ, ಅಹಂಬ್ರಹ್ಮಾಸ್ಮಿ, ನೇಹ ನಾನಾಸ್ತಿ ಕಿಂಚನ ಮೊದಲಾದ ಶ್ರುತಿಗಳು ಸಹ ಬೋಧಿಸುವದು ಭೇದವನ್ನೇ ಹೊರತು ಅಭೇದವನ್ನಲ್ಲ. ಪ್ರಪಂಚ ಮಿಥ್ಯಾತ್ಮವನ್ನು ಸಾಧಿಸಲು ಅದ್ವೈತಿಗಳು ಹೇಳುವ ಹೇತುಗಳು ಸರಿಯಾದವುಗಳಲ್ಲ ಮೊದಲಾಗಿ ಅನೇಕ ವಿಷಯಗಳನ್ನು ನಿರೂಪಿಸುತ್ತ ವಿಷ್ಣುಪಾರಮ್ಯವು ಸಮರ್ಥಿಸಲ್ಪಟ್ಟಿದೆ. "ಯುಕ್ತಂ ಚ ವಿಷ್ಣೋಃ, ಸರ್ವೋತ್ತಮತ್ವೇ ಏವ ಮಹಾತಾತ್ಪರ್ಯಂ ಸರ್ವಾಗಮಾನಾಂ" ಎಂಬ ಮಾತು ಇದರಲ್ಲಿ ಪಲ್ಲವಿಯಂತೆ ಬಂದಿದೆ.

ಹೀಗೆ ಪ್ರಥಮ ಪರಿಚ್ಛೇದದಲ್ಲಿ ವೇದಾಪೌರುಷೇಯತ್ವ, ವರ್ಣನಿತ್ಯತ್ವ, ಪ್ರಾಮಾಣ್ಯಸ್ವತಸ್ತ್ವ, ಆಗಮಗಳ ಸಿದ್ಧಾರ್ಥಬೋಧಕತ್ವ, ತತ್ವಮಸಿ ಮೊದಲಾದ ಅಭೇದಪರವೆಂದು ತೋರುವ ಶ್ರುತಿಗಳ ಭೇದಬೋಧಕತ್ವ, ಜೀವೇಶ್ವರೈಕ್ಯದ ಅಸ್ವಾರಸ್ಯ ಮೊದಲಾದ ಅನೇಕ ವಿಷಯಗಳು ಅತ್ಯಂತ ಸ್ಪಷ್ಟವಾಗಿ ನಿರೂಪಿತವಾಗಿವೆ.

ದ್ವಿತೀಯ ಪರಿಚ್ಛೇದವು ಲಕ್ಷ್ಮೀದೇವಿಯು ಅಕ್ಷರಪುರುಷಳು; ಬ್ರಹ್ಮರುದ್ರಾದಿ ಸಮಸ್ತ ಇತರ ಚೇತನರು ಕ್ಷರಪುರುಷರು. ಶ್ರೀಹರಿಯು ಈ ಉಭಯವಿಧ ಪುರುಷರಿಗಿಂತಲೂ ವಿಲಕ್ಷಣನೂ, ಉತ್ತಮನೂ ಆಗಿರುವನು. ಆದ್ದರಿಂದ ಅವನು

ಪುರುಷೋತ್ತಮನು ಎಂಬ ಭಗವದ್ಗೀತೆಯ ಹದಿನೈದನೇ ಅಧ್ಯಾಯದ ಕೊನೆಯ ಭಾಗದ ವಿವರಣೆಯಾಗಿದೆ. ಆ ಅರ್ಥದಲ್ಲಿ ಇದು ಗೀತೆಯ ಆ ಭಾಗಕ್ಕೆ ಭಾಷ್ಯ ತಾತ್ಪರ್ಯವೂ ಆಗಿದೆ.

ತೃತೀಯಪರಿಚ್ಛೇದವು ಶ್ರೀಹರಿಯ ದೋಷದೂರತ್ವ ಮತ್ತು ಗುಣಪೂರ್ಣತ್ವಗಳನ್ನು ಸಮರ್ಥಿಸಲು ಮೀಸಲು. ಭಗವಂತನಿಗೆ ಹುಟ್ಟು, ಸಾವು, ರೋಗ, ರುಜಿನ, ವಿಯೋಗ ಮೊದಲಾಗಿ ಯಾವ ದೋಷಗಳೂ ಇಲ್ಲ. ಅವನು ಅನಂತಕಲ್ಯಾಣಗುಣನಿಧಿ ಎಂಬ ವಿಷಯ ಸಮರ್ಥಿತವಾಗಿದೆ.

ಒಂದರ್ಥದಲ್ಲಿ ಇದು ಬ್ರಹ್ಮಸೂತ್ರಗಳ ಸಮನ್ವಯಾಧ್ಯಾಯ ಮತ್ತು ಅವಿರೋಧ್ಯಾಯಗಳಿಗೆ ಪೂರಕವಾಗಿದ್ದು ಆ ಭಾಗದ ಬ್ರಹ್ಮಸೂತ್ರಗಳಿಗೆ ಭಾಷ್ಯವೇ ಆಗಿದೆ.

ಉತ್ತರಗೋಗ್ರಹಣದಲ್ಲಿ ಅರ್ಜುನನು ಒಂಟಿಯಾಗಿ ಸಕಲ ಶತ್ರುಗಳನ್ನು ಮೆಟ್ಟಿದಂತೆ ತತ್ತ್ವನಿರ್ಣಯವೆಂಬ ಈ ಪ್ರಕರಣ ಸಕಲ ದುರ್ವಾದಿಗಳನ್ನು ಮೆಟ್ಟಲು ನೆರವಾಗುತ್ತದೆ ಎಂಬುದಾಗಿ 'ಸುಮಧ್ವವಿಜಯ' ಇದನ್ನು ಕೊಂಡಾಡಿದೆ.

ಇದಕ್ಕೆ ಶ್ರೀಜಯತೀರ್ಥರು ಟೀಕೆ ರಚಿಸಿದ್ದು ಆ ಟೀಕೆಗೆ ಶ್ರೀ ರಘೂತ್ತಮತೀರ್ಥರು ಶ್ರೀವಿಜಯೀಂದ್ರತೀರ್ಥರು, ಶ್ರೀ ರಾಘವೇಂದ್ರತೀರ್ಥರು, ಶ್ರೀವೇದೇಶತೀರ್ಥರು, ಶ್ರೀ ಬಿದರಹಳ್ಳಿಶ್ರೀನಿವಾಸತೀರ್ಥರು, ಪಾಂಡುರಂಗಿ ಕೇಶವಾಚಾರ್ಯರು ಶ್ರೀವ್ಯಾಸತತ್ತ್ವಜ್ಞ ತೀರ್ಥರು ಮೊದಲಾದ ಅನೇಕ ಮಹನೀಯರು ರಚಿಸಿರುವ ಟಿಪ್ಪಣಿಗಳುಂಟು. ಶ್ರೀ ವೇದೇಶತೀರ್ಥರ ಟಿಪ್ಪಣಿ ಮತ್ತು ಶ್ರೀ ವಿಜಯೀಂದ್ರ ತೀರ್ಥರ ಟಿಪ್ಪಣಿಗಳು ಇನ್ನೂ ಪ್ರಕಾಶಿತವಾಗಿಲ್ಲ. ಉಳಿದ ಟಿಪ್ಪಣಿಗಳು ಪ್ರಕಾಶಿತವಾಗಿವೆ.

## ಕರ್ಮನಿರ್ಣಯ

ಕರ್ಮನಿರ್ಣಯವು ದಶಪ್ರಕರಣಗಳಲ್ಲಿ ವೇದಾರ್ಥನಿರ್ಣಯಕ್ಕೆ ಸಂಬಂಧಿಸಿದ ಪ್ರಕರಣ ಗ್ರಂಥವಾಗಿದೆ. ಖಂಡಾರ್ಥನಿರ್ಣಯವೆಂಬುದಾಗಿಯೂ ಇದು ಪ್ರಸಿದ್ಧವಿದೆ. ಸುಮಧ್ವವಿಜಯದಲ್ಲಿ ಬಂದಿರುವಂತೆ ಶ್ರೀಮದಾಚಾರ್ಯರು ಇದನ್ನು ರಚಿಸಿದ್ದು ಉಜಿರೆಯಲ್ಲಿ.

ತಮ್ಮನ್ನು ಸೋಲಿಸಲು ಹಾತೊರೆಯುತ್ತಿದ್ದ ವಿದ್ವಾಂಸರನ್ನು ಸೋಲಿಸಲೆಂದು ಶ್ರೀಮದಾಚಾರ್ಯರು ಉಜಿರೆಗೆ ಬಂದು ವಾದಕ್ಕೆ ಆಹ್ವಾನವಿತ್ತರು. ಅಲ್ಲಿಯ ವಿದ್ವಾಂಸರು ಆಚಾರ್ಯರು ಎಷ್ಟೇ ಸರ್ವಜ್ಞರಾಗಿದ್ದರೂ ಸನ್ಯಾಸಿಗಳಾಗಿರುವದರಿಂದ ಯಜ್ಞದ ರೀತಿ, ನೀತಿಗಳನ್ನು ತಿಳಿದಿರಲಾರರು ಎಂಬ ಭಾವನೆಯಿಂದ ಕರ್ಮಾರ್ಥ ಪ್ರತಿಪಾದಕವಾದ ಬ್ರಾಹ್ಮಣಖಂಡದ ಅರ್ಥವನ್ನು ಕೇಳಿದರು. ಆಚಾರ್ಯರು ತಕ್ಷಣವೇ ಅದಕ್ಕೆ ಸಮರ್ಪಕವಾದ ಉತ್ತರವನ್ನು ನೀಡಲು ಆ ವಿದ್ವಾಂಸರು ನಿರುತ್ತರರಾಗಿ ಪಲಾಯನ ಮಾಡಿದರು. ಮತ್ತೆ ಬೇರೊಂದು ಯೋಜನೆಯನ್ನು ಹಮ್ಮಿಕೊಂಡು ಅವರೆಲ್ಲ ಐತರೇಯಬ್ರಾಹ್ಮಣ ಮತ್ತು ಆರಣ್ಯಕಗಳಲ್ಲಿ ಬರುವ ಮಹಾವ್ರತಕ್ಕೆ ಸಂಬಂಧಿಸಿದ ಮಹಾನಾಮ್ನೀಮಂತ್ರದ ಅರ್ಥ ಮತ್ತು ಅದರ ವಿನಿಯೋಗದ ಬಗ್ಗೆ ಪ್ರಶ್ನಿಸಿದರು. ಅದಕ್ಕೆಲ್ಲ ಸಮಗ್ರ ಉತ್ತರವನ್ನು ನೀಡಿ ಅವರನ್ನೆಲ್ಲ ಮತ್ತೊಮ್ಮೆ ಪರಾಭವಗೊಳಿಸಿದರು. ಮತ್ತು ತಾವು ಆಗ ಹೇಳಿದ ಅರ್ಥಗಳನ್ನೆಲ್ಲ ನಿರಂತರ ಪ್ರಸಾರಕ್ಕೆಂದು ತಕ್ಷಣವೇ ಲೇಖನ ಮಾಡಿಸಿದರು. ಆ ಗ್ರಂಥವೇ'ಕರ್ಮನಿರ್ಣಯ'. ಇದರಲ್ಲಿ ಆ ಮಂತ್ರಗಳ ಅಧ್ಯಾತ್ಮಿಕ ಅರ್ಥ ನಿರೂಪಣೆ ಮೊಟ್ಟ ಮೊದಲ ಬಾರಿಗೆ ಆವಿಷ್ಕೃತವಾಗಿ ವೇದಾರ್ಥಮೀಮಾಂಸೆಗೆ ಹೊಸ ತಿರುವನ್ನು ತಂದುಕೊಟ್ಟಿತು. ವೈದಿಕಸಾಹಿತ್ಯವನ್ನು ಕರ್ಮಕಾಂಡ ಮತ್ತು ಜ್ಞಾನಕಾಂಡವೆಂದು ಪ್ರತ್ಯೇಕಿಸಿ ನೋಡುವ ಪ್ರವೃತ್ತಿಯನ್ನೇ ಪ್ರಶ್ನಿಸಿದ ಈ ಕೃತಿ ಒಂದು ವಿಶಿಷ್ಟ ಪ್ರಕರಣ ಗ್ರಂಥ. ಒಟ್ಟಾಗಿ ವೇದಾರ್ಥಮೀಮಾಂಸೆಗೆ ದಿಕ್ಸೂಚಿಯಾಗಿ ರಚಿತವಾದ ಈ ಕೃತಿಯ ವಿಸ್ತೃತಭಾಗವೆಂಬುದಾಗಿ ಅವರ ಋಗ್ಭಾಷ್ಯವನ್ನು ನೋಡಬಹುದು; ಎಂದರೆ ಇದರ ಅಧ್ಯಯನ ಋಗ್ಭಾಷ್ಯದ ಅಧ್ಯಯನಕ್ಕೂ ಆ ಮೂಲಕ ಸಮಗ್ರವೈದಿಕಸಾಹಿತ್ಯದ ಪರಿಜ್ಞಾನಕ್ಕೂ ದಾರಿದೀಪವಾಗಿದೆ.

ಇದರಲ್ಲಿ ಬ್ರಹ್ಮ ನಿರ್ಗುಣ, ನಿರ್ವಿಶೇಷ ಎಂಬ ವಾದಗಳ ಅಸ್ವಾರಸ್ಯವನ್ನು ನಿರೂಪಿಸಿರುವರು. ಕರ್ಮಾಚರಣೆಯ ಸ್ವರೂಪವನ್ನು ಸಹ ಕೊನೆಯಲ್ಲಿ ತಿಳಿಸಿಕೊಟ್ಟಿರುವರು:

**ಸ ಗ್ರಾಮಂ ಪರಮಭಿಯಾತ ಉಚ್ಚಭೂತಿಂ**
**ವಿದ್ವಾಂಸಃ ಕ್ವ ಕುಹರಕೂಪದರ್ದುರಾಭಾಃ ।**
**ಇತ್ಯೂಚೇ ಮದಮತಿಮಾನಿನೋಽಖಿಲಜ್ಞಂ**
**ಮನ್ಯಸ್ಯ ಕ್ಷಪಯಿತುಮೇವ ತಜ್ಜನಸ್ಯ ॥**
**ಸರ್ವಜ್ಞೋಽಪ್ಯಯಮಧಿಕಂ ನ ಯಜ್ಞಭಂಗೀಂ**
**ಸಂವಿತ್ತೇ ಯತಿರಿತಿ ಬದ್ಧನಿಶ್ಚಯೋಽಸೌ ।**

ಆಭ್ರಾಂತಂ ಪರಿಷದಿ ಮತ್ಸರಾದಪೃಚ್ಛತ್
ಕರ್ಮಾರ್ಥಶ್ರುತಿಗಹನಾರ್ಥಖಂಡಭಾವಮ್ ॥

ಛಂದೋಭ್ಯಶ್ಚ್ಯುತರಸಸಂಗ್ರಹಪ್ರವೀಣಾನ್
ಷಷ್ಕೇಽಹ್ನಿ ಪ್ರತಿವಿಹಿತಾನ್ ಪ್ರಜಾಧಿಪೇನ ।
ನಾರಾಶಂಸ್ಯಚರಮಚಾರುಮಂತ್ರಭೇದಾ-
ನೂಚೇಽಸೌ ತಮಭಿದಧದ್ದ್ವಿಸಂಶಯಾಂಶಃ ॥

ಪಾಂಡಿತ್ಯಂ ಪರಮಮವೇಕ್ಷ್ಯ ತಸ್ಯ ತಾದೃಕ್
ಸಂಘರ್ಷಕ್ಷುಭಿತಮನಾ ವಿಪಕ್ಷಸಂಘಃ ।
ನಾರ್ಥಃ ಸ್ಯಾದಯಮಿತಿ ವರ್ಣಯನ್ನಥ ತ್ವಂ
ತಂ ಬ್ರೂಹೀತ್ಯುರುಮತಿನೇರಿತೋಽದ್ರವದ್ವ್ರಾಕ್ ॥

ಸೋಽಪೃಚ್ಛತ್ ತಮಥ ಮಹಾಹ್ವಯೋಪಸರ್ಗಾ
ಯತ್ರೋಕ್ತಾ ಮನುಚರಣೋಪಸೃಜ್ಯರೂಪಾಃ ।
ತಸ್ಯಾರ್ಥಂ ವಚನಚಯಸ್ಯ ತಂ ಬ್ರುವಾಣಃ
ಸ್ಥೈರ್ಯಾರ್ಥಂ ಸಪದಿ ಸ ಲೇಖಯಾಂಬಭೂವ

—ಸುಮಧ್ವವಿಜಯ 16/41-45

# ಇತಿಹಾಸಪ್ರಸ್ಥಾನಗ್ರಂಥಗಳು

## ಮಹಾಭಾರತತಾತ್ಪರ್ಯನಿರ್ಣಯಃ

ಮಹಾಭಾರತ ಮತ್ತು ರಾಮಾಯಣಗಳ ವೈಧಿಕ ಸಂಸ್ಕೃತಿಯ ವಿಶ್ವರೂಪವನ್ನು ದರ್ಶನ ಮಾಡಿಸುವ ಮಹೋನ್ನತ ಕೃತಿಗಳು. ರೋಚಕ ಕಥೆಯಿಂದಾಗಿ ಪಾಮರರಿಗೂ ಉದ್ಬೋಧಕ ತತ್ತ್ವಗಳಿಂದಾಗಿ ಪಂಡಿತರಿಗೂ ಸಮನಾಗಿಯೇ ಮೆಚ್ಚಿಗೆಯಾಗುವ ವಿಶಿಷ್ಟ ರಚನಾಸಂವಿಧಾನವನ್ನು ಇವು ಒಳಗೊಂಡಿವೆ. ಮಹಾಭಾರತ ವ್ಯಾಪ್ತಿಯಂತು ಅನುಪಮ. ವಿಶ್ವಸಾಹಿತ್ಯವಲ್ಲೇ ಅದ್ಭುತವೆನ್ನಿಸುವ ಗಾತ್ರ ಮತ್ತು ಆಳ ಚಿಂತನೆಗೆ ಒಳಪಡಿಸುವ ತತ್ತ್ವಗಳಿಂದಾಗಿ ಮಹಾಭಾರತ ತಾತ್ವಿಕ ವಿಶ್ವಕೋಶವಾಗಿ ಮಾನ್ಯವಾಗಿದೆ. ತನ್ನ ಅರ್ಥವಿಸ್ತಾರದಿಂದಾಗಿ ಎಂದಿಗೂ ಒಗಟ್ಟಾಗಿಯೇ ಉಳಿಯುವ ವೈಶಿಷ್ಟ್ಯ ಮಹಾಭಾರತದ್ದು. ಇಂಥಹ ಮಹಾಭಾರತ ರಾಮಾಯಣಗಳ ಬಗ್ಗೆ ಸಮಗ್ರ ಮಾಹಿತಿ ನೀಡಿದ ಏಕಮಾತ್ರ ದಾರ್ಶನಿಕರು ಎಂಬುದು ಆಚಾರ್ಯ ಶ್ರೀಮಧ್ವರ ವೈಶಿಷ್ಟ್ಯ. ಇತರ ಆಚಾರ್ಯರು ಇವುಗಳಿಂದ ಕೆಲವು ಕಡೆ ಉಲ್ಲೇಖಗಳನ್ನು ನೀಡಿದ್ದರೂ ಅವುಗಳ ವಿವರಣೆಗೆ ಹೊರಟಿಲ್ಲ. ತಾತ್ತ್ವಿಕ ವಿವೇಚನೆಯಂತೂ ದೂರದ ಮಾತೇ. ಇಂತಹ ಸನ್ನಿವೇಶದಲ್ಲಿ ಶ್ರೀಮದಾಚಾರ್ಯರ ಕೃತಿ ಜಿಜ್ಞಾಸುವೃಂದಕ್ಕೆ ಮಾಡಿರುವ ಉಪಕಾರ ಅನುಪಮ. ಮಹಾಭಾರತತಾತ್ಪರ್ಯನಿರ್ಣಯವು ಶ್ರೀಮದಾಚಾರ್ಯರ ಕೃತಿಗಳಲ್ಲೆಲ್ಲಾ ಗಾತ್ರದಲ್ಲಿ ಅತ್ಯಂತ ಹಿರಿದಾದ ಕೃತಿ. ಐದುಸಾವಿರ ಶ್ಲೋಕಗಳಿಗಿಂತಲೂ ಹೆಚ್ಚಿನ ವ್ಯಾಪ್ತಿಯ ಅಂತಹ ಶ್ಲೋಕರೂಪದ ಕೃತಿ ಸಮಗ್ರ ಸಂಸ್ಕೃತ ಸಾಹಿತ್ಯದಲ್ಲೇ ವಿರಳ. ಮಹಾಭಾರತ, ರಾಮಾಯಣಗಳ ಸಮಗ್ರ ವಿಶ್ಲೇಷಣೆಯನ್ನು ಒಟ್ಟು ಮೂವತ್ತೆರಡು ಅಧ್ಯಾಯಗಳಲ್ಲಿ ಈ ಕೃತಿ ಒದಗಿಸುತ್ತಿದೆ.

ಮೊದಲ ಅಧ್ಯಾಯ ಸಕಲಶಾಸ್ತ್ರ ಪ್ರಮೇಯಗಳ ಸಂಕಲನವಾದ "ಸರ್ವಶಾಸ್ತ್ರಾರ್ಥನಿರ್ಣಯ". ಎರಡನೆಯದು ಅದಕ್ಕೆ ಸಂವಾದಿಯಾಗಿ ಮಹಾಭಾರತದ ವಾಕ್ಯಗಳನ್ನು ಉದ್ಧರಿಸಿ ಕೊಡುವ "ಸುವಾಕ್ಯೋದ್ಧಾರ". ಮೂರನೆಯದು ಭಗವಂತನ ವರಾಹಾದಿ ಅವತಾರಗಳ ವೈಭವವನ್ನೂ, ಶ್ರೀರಾಮ ಪ್ರಾದುರ್ಭಾವವನ್ನೂ ನಿರೂಪಿಸುವ "ಸರ್ಗಾನುಸರ್ಗಲಯಪ್ರಾದುರ್ಭಾವ ನಿರ್ಣಯ". ಮೂರನೆಯ ಅಧ್ಯಾಯದಲ್ಲಿ ಪ್ರಾರಂಭವಾಗುವ ರಾಮಕಥಾನಿರ್ಣಯ

ನಾಲ್ಕನೆಯದರಿಂದ ಮುಂದುವರೆದು ಒಂಭತ್ತನೆಯ ಅಧ್ಯಾಯದಲ್ಲಿ ಮುಕ್ತಾಯವಾಗುತ್ತದೆ. ಹತ್ತನೆಯದು ಮಹಾಭಾರತದ ಕರ್ತೃವಾದ ವೇದವ್ಯಾಸರ ಅವತಾರದ ಬಗ್ಗೆ ಸಮಗ್ರ ಮಾಹಿತಿಗಳನ್ನು ಒದಗಿಸುವ ಮಹತ್ವದ ಅಧ್ಯಾಯ. ಹನ್ನೊಂದರಿಂದ ಮೂವತ್ತೆರಡರವರೆಗಿನ ಇತರ ಅಧ್ಯಾಯಗಳೆಲ್ಲ ಮಹಾಭಾರತ ನಿರ್ಣಯಕ್ಕೆ ಮೀಸಲು. ಇದಿಷ್ಟೂ ಕೃತಿಯ ಸ್ಥೂಲ ಪರಿಚಯ.

ಲಕ್ಷಶ್ಲೋಕದಷ್ಟು ವಿಶಾಲವ್ಯಾಪ್ತಿಯ ಮೂಲಕಥೆಯನ್ನು ಚೊಕ್ಕವಾಗಿ, ಸಮಗ್ರವಾಗಿ ನಿರೂಪಿಸುವುದು ಇದರ ಮೊದಲ ಸಾಧನೆ. ಈ ಛಂದನ್ನು ಸಾಧಿಸುವುದರಲ್ಲಿ ಸಹ ಜಗತ್ತಿನ ಬೇರಾವ ಗ್ರಂಥವೂ ಇದರಷ್ಟು ಯಶಸ್ವಿಯಾಗಿಲ್ಲ. ಹಾಗೆ ನೋಡಿದರೆ, ಮಹಾಭಾರತದ ಸಮಗ್ರಪರಿಚಯವನ್ನು ನೀಡಲು ಹೊರಟ ಕೃತಿಗಳೇ ತುಂಬಾ ವಿರಳ. ಕ್ಷೇಮೇಂದ್ರನ ಭಾರತ ಮಂಜರಿಯೊಂದೇ ಈ ಹಾದಿಯಲ್ಲಿ ಹೊರಟ ಗಮನಾರ್ಹಕೃತಿ. ತುಂಬಾ ವಿಸ್ತಾರವಾದ ಕೃತಿಯಾದರೂ ಸಹ ಮೂಲಕಥೆಯನ್ನು ಸೆರೆಹಿಡಿಯುವಲ್ಲಿ ಅದು ಅಷ್ಟಾಗಿ ಸಫಲವಾಗಿಲ್ಲ ಎಂಬುದಕ್ಕಿಂತ ವಿಫಲವಾಗಿದೆ ಎಂಬುದೇ ಸೂಕ್ತ. ಅಲ್ಲಿಯ ನಿರೂಪಣೆ ತೀರಾ ಯಾಂತ್ರಿಕ, ಅಸಮಗ್ರ ಮತ್ತು ಎಷ್ಟೋಕಡೆ ಅಷ್ಟೇ ಅಸಮರ್ಪಕ. ಆದರೆ ಶ್ರೀಮದಾಚಾರ್ಯರ ತಾತ್ಪರ್ಯನಿರ್ಣಯ ದಿಗ್ಭ್ರಮೆ ಹುಟ್ಟಿಸುವಷ್ಟು ಅಚ್ಚರಿಯ ಸಮಗ್ರ ಕಥಾನಕ. ಯುದ್ಧ ಪ್ರಸಂಗಗಳ ನಿರೂಪಣೆಯಲ್ಲಂತೂ ಮಹಾಭಾರತದ ಅನಂತರದ ಆ ಬಗೆಯ ಯಶಸ್ವಿ ಕೃತಿ ಇದೊಂದೇ. ನಿರ್ಣಯದ ನಿರೂಪಣೆಯ ಅಚ್ಚುಕಟ್ಟು, ಸಮಗ್ರತೆ, ಸ್ಫುಟತೆ ಯಾವುವೂ ಕ್ಷೇಮೇಂದ್ರನ ಭಾರತಮಂಜರಿಯಲ್ಲಿ ಕಾಣಸಿಕ್ಕುವುದಿಲ್ಲ. ಅವನ ರಾಮಾಯಣಮಂಜರಿಯೂ ಇದಕ್ಕೆ ಹೊರತಲ್ಲ.

ಎರಡನೆಯದಾಗಿ ಈ ಕೃತಿಯ ವಿಶೇಷತೆ ಎಂದರೆ ಮಹಾಭಾರತ ಕಥೆಯ ಇತರ ಆಕರಗಳಾದ ಹರಿವಂಶ, ಭಾಗವತ, ವಿಷ್ಣುಪುರಾಣ ಮೊದಲಾದ ಇತರ ಸಕಲಗ್ರಂಥಗಳನ್ನೂ ಅಳವಡಿಸಿಕೊಂಡಿರುವ ರೀತಿ. ಈ ಬಗೆಯ ಪ್ರಯತ್ನವೂ ಆ ಮುಂಚೆ ನಡೆದಿರಲಿಲ್ಲ ಎಂಬುದು ಗಮನಾರ್ಹ. ಆ ಅರ್ಥದಲ್ಲಿ ಇದು ಭಾರತ ನಿರ್ಣಯವಾಗಿರುವಂತೆ ಹರಿವಂಶ ಮೊದಲಾದವುಗಳ ನಿರ್ಣಯವೂ ಆಗಿದೆ. ಜೊತೆಗೆ ರಾಮಾಣಯದ ಕಥೆಯನ್ನು ಸ್ಫುಟವಾಗಿ ವಿಶ್ಲೇಷಿಸಿರುವ ಇಂತಹ ಕೃತಿಯು ಇದೊಂದೇ. ಹನುಮಂತ, ಭೀಮಸೇನರ ಪಾತ್ರಗಳ ಹಿರಿಮೆಯ ಮೂಲಕ ಶ್ರೀ ವಾಯುಜೀವೋತ್ತಮತ್ತ್ವವನ್ನು ವಿಶೇಷವಾಗಿ ಸಾರಿರುವರು.

ಮಹಾಭಾರತತಾತ್ಪರ್ಯನಿರ್ಣಯದ ಮತ್ತೊಂದು ವೈಶಿಷ್ಟ್ಯ ಶ್ರೀಕೃಷ್ಣನ ಕಥೆ,

ಪಾಂಡವರ ಕಥೆ ಮೊದಲಾದವುಗಳನ್ನು ಸ್ಫುಟವಾಗಿ ಪರಿಹರಿಸುವುದು ಮಹಾಭಾರತತಾತ್ಪರ್ಯನಿರ್ಣಯದ ಮತ್ತೊಂದು ಹಿರಿಮೆ. ರಾಮಾಯಣದ ವಾಲಿವಧೆ, ಸೀತಾಕೃತಿ ಅಪಹರಣ, ಸೀತಾಪರಿತ್ಯಾಗ, ಮಹಾಭಾರತದ ದ್ರೌಪದಿಯ ಪಂಚಪತ್ನಿತ್ವ ಮೊದಲಾದ ಘಟ್ಟಗಳನ್ನು ಉದಾಹರಣೆಯಾಗಿ ನೀಡಬಹುದು. ಮಹಾಭಾರತದ ಆಧ್ಯಾತ್ಮಿಕ ಶ್ರೀಮಂತಿಕೆಯನ್ನು ಮೊಟ್ಟಮೊದಲಬಾರಿಗೆ ಗುರುತಿಸಿ, ಅದು ಮೂಲತಃ ತಾತ್ತ್ವಿಕಕೃತಿ ಎಂಬುದಾಗಿ ನಿರೂಪಿಸಿದವರೂ ಶ್ರೀಮದಾಚಾರ್ಯರೇ. ಅವರು ಎರಡನೆಯ ಅಧ್ಯಾಯದಲ್ಲಿ ಮನ್ವಾದಿ, ಆಸ್ತೀಕಾದಿ, ಉಪರಿಚರಾದಿ ಎಂಬ ಮೂರು ಬಗೆಯ ಅರ್ಥವಿಶೇಷಗಳನ್ನು ನಿರೂಪಿಸಿ ಕುರುಪಾಂಡವರು, ಅವರ ಅನುಯಾಯಿಗಳು ಮೊದಲಾಗಿ ಪ್ರತಿಯೊಬ್ಬರೂ ಹೀಗೆ ಆಧ್ಯಾತ್ಮಿಕ ತತ್ವಗಳ ಪ್ರತೀಕವಾಗಿರುವರು ಎಂಬುದನ್ನು ಸಾಧಾರವಾಗಿ ವಿವರಿಸಿರುವರು. ಭಾರತಾದಿಗಳಲ್ಲಿ ಸಮಾಧಿ, ದರ್ಶನ, ಗುಹ್ಯ ಎಂಬ ಭಾಷಾತ್ರೈವಿಧ್ಯ, ವ್ಯತ್ಯಾಸ, ಪ್ರಾತಿಲೋಮ್ಯ, ಗೋಮೂತ್ರೀ, ಪ್ರಘಾಸ, ಉಕ್ಷ್ಣ, ಸುಧುರ ಮತ್ತು ಸಾಧು ಎಂಬ ಸಪ್ತಭೇದಗಳ ನಿರೂಪಣೆ, ವೈದರ್ಭೀ, ಗೌಡೀ, ಪಾಂಚಾಲಿ ಮೊದಲಾದ ನೂರಾರು ಶೈಲಿಗಳ ಬಳಕೆ ಮೊದಲಾದವುಗಳ ಮೇಲೆ ಬೆಳಕು ಚೆಲ್ಲಿದ ಏಕಮಾತ್ರ ದಾರ್ಶನಿಕರೂ ಅವರೇ. ಹೀಗೆ ಮಹಾಭಾರತದ ಸಮಗ್ರದರ್ಶನ ಮಾಡಿಸುವ ವಿಶ್ವಸಾಹಿತ್ಯದ ಅಮರಕೃತಿ ಎಂಬುದು ಮಹಾಭಾರತತಾತ್ಪರ್ಯ ನಿರ್ಣಯದ ಹಿರಿಮೆ.

ಶ್ರೀಮದಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯವು ಮೂಲಭಾರತದ ಕೆಲವು ಶ್ಲೋಕಗಳಿಗೆ ನೇರವ್ಯಾಖ್ಯಾನವೂ ಆಗಿದೆ. ನಿದರ್ಶನವಾಗಿ ಈ ಕೆಳಗಿನ ಶ್ಲೋಕಗಳನ್ನು ಉದಾಹರಿಸಬಹುದು :

**ನಾರಾಯಣಂ ಸುರಗುರುಂ ಜಗದೇಕನಾಥಂ**
**ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।**
**ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ**
**ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥ (ಮಹಾಭಾರತ)**

**ಜ್ಞಾನಪ್ರದಃ ಸ ಭಗವಾನ್ ಕಮಲಾವಿರಿಂಚ-**
**ಶರ್ವಾದಿಪೂರ್ವಜಗತೋ ನಿಖಿಲಾದ್ವರಿಷ್ಠಃ ।**
**ಭಕ್ತ್ಯೈವ ತುಷ್ಯತಿ ಹರಿಪ್ರವಣತ್ವಮೇವ**
**ಸರ್ವಸ್ಯ ಧರ್ಮ ಇತಿ ಪೂರ್ವವಿಭಾಗಸಂಸ್ಥಃ ॥**

ನಿರ್ದೋಷಕಃ ಸ್ಮೃತಿವಿಹೀನ ಉದಾರಪೂರ್ಣ-
ಸಂವಿದ್ಗುಣಃ ಪ್ರಥಮಕೃತ್ ಸಕಲಾತ್ಮಶಕ್ತಿಃ ।
ಮೋಕ್ಷೈಕಹೇತುರಸುರೂಪಸುರೈಶ್ಚ ಮುಕ್ತೈ-
ರ್ವಂದ್ಯಃ ಸ ಏಕ ಇತಿ ಚೋಕ್ತಮಥೋತ್ತರಾರ್ಧೇ ॥

ನಮ್ಯತ್ವಮುಕ್ತಮುಭಯತ್ರ ಯತಸ್ತತೋಽಸ್ಯ
ಮುಕ್ತೈರಮುಕ್ತಿಗ(ರಮುಕ್ತಕ)ಗಣೈಶ್ಚ ವಿನಮ್ಯತೋಕ್ತಾ ।
ಇತ್ಥಂ ಹಿ ಸರ್ವಗುಣಪೂರ್ತಿರಮುಷ್ಯ ವಿಷ್ಣೋಃ
ಪ್ರಸ್ತಾವಿತಾ ಪ್ರಥಮತಃ ಪ್ರತಿಜಾನತೈವ ॥

(ಮಹಾಭಾರತತಾತ್ಪರ್ಯನಿರ್ಣಯ)

ಸೃಷ್ಟಾ ಬ್ರಹ್ಮಾದಯೋ ದೇವಾ ನಿಹತಾ ಯೇನ ದಾನವಾಃ ।
ತಸ್ಮೈ ದೇವಾದಿ(ಧಿ)ದೇವಾಯ ನಮಸ್ತೇ ಶಾರ್ಙ್ಗಧಾರಿಣೇ ॥ (ಮಹಾಭಾರತ)

ಸೃಷ್ಟತ್ವಂ ದೇವಾನಾಂ ಮುಕ್ತಿಸ್ರಷ್ಟೃತ್ವಮುಚ್ಯತೇ ನಾನ್ಯತ್ ।
ಉತ್ಪತ್ತಿರ್ದೈತ್ಯಾನಾಮಪಿ ಯಸ್ಮಾತ್ ಸಂಮಿತಾ ವಿಶೇಷೋಽಯಮ್ ॥

ಅಥ ಚ ದೈತ್ಯಹತಿಸ್ತಮಸಿ ಸ್ಥಿರಾ ನಿಯತಸಂಸ್ಥಿತಿರೇವ ನ ಚಾನ್ಯಥಾ ।
ತನುವಿಭಾಗಕೃತಿಃ ಸಕಲೇಷ್ವಿಯಂ ನ ಹಿ ವಿಶೇಷಕೃತಾ ಸುರದೈತ್ಯಗಾ ॥

(ಮಹಾಭಾರತತಾತ್ಪರ್ಯನಿರ್ಣಯ-೨/೫೭-೬೦, ೬೨-೬೪)

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇ ॥ (ಮಹಾಭಾರತ)

ಜಯೋ ನಾಮೇತಿಹಾಸೋಽಯಂ ಕೃಷ್ಣದ್ವೈಪಾಯನೇರಿತಃ ।
ವಾಯುರ್ನರೋತ್ತಮೋ ನಾಮ ದೇವೀತಿ ಶ್ರೀರುದೀರಿತಾ ॥

ನಾರಾಯಣೋ ವ್ಯಾಸ ಇತಿ ವಾಕ್ಯವಕ್ತೃಸ್ವರೂಪಕ(ತ)ಃ ।
ಏಕಃ ಸ ಭಗವಾನುಕ್ತಃ ಸಾಧಕೇಶೋ ನರೋತ್ತಮಃ ॥

ಉಪಸಾಧಕೋ ನರಶ್ಚೋಕ್ತೋ ದೇವೀ ಭಾಗ್ಯಾತ್ಮಿಕಾ ನೃಣಾಮ್ ।
ಸರಸ್ವತೀ ವಾಕ್ಯರೂಪಾ ತಸ್ಮಾನ್ನಮ್ಯಾ ಹಿ ತೇಽಖಿಲಾಃ ।
ಕೃಷ್ಣೌ ಸತ್ಯಾ ಭೀಮಪಾರ್ಥೌ ಕೃಷ್ಣೇತ್ಯುಕ್ತಾ ಹಿ ಭಾರತೇ ॥ (೩/೪-೭)

ಮಹಾಭಾರತದ ಅರ್ಥನಿರ್ಣಯಕ್ಕೆ ಮಾತ್ರವಲ್ಲದೇ, ಮೂಲಪಾಠ

ನಿರ್ಣಯಕ್ಕೂ ಸಹ ತಾತ್ಪರ್ಯನಿರ್ಣಯದ ಕೊಡುಗೆ ತುಂಬಾ ದೊಡ್ಡದು. ಆಚಾರ್ಯರ ಈ ಕೆಳಗಿನ ಮಾತುಗಳಲ್ಲಿ ಅವರ ಸಂಶೋಧನೆಯ ಸ್ವರೂಪ, ವ್ಯಾಪ್ತಿಗಳು ಅಡಕವಾಗಿವೆ :

**ಕ್ವಚಿದ್ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿದಂತರಿತಾನಪಿ ।**
**ಕುರ್ಯುಃ ಕ್ವಚಿಚ್ಚ ವ್ಯತ್ಯಾಸಂ ಪ್ರಮಾದಾತ್ ಕ್ವಚಿದನ್ಯಥಾ ॥**

**ಅನುತ್ಪನ್ನಾ ಅಪಿ ಗ್ರಂಥಾ ವ್ಯಾಕುಲಾ ಇತಿ ಸರ್ವಶಃ ।**
**ಉತ್ಪನ್ನಾಃ ಪ್ರಾಯಶಃ ಸರ್ವೇ ಕೋಟ್ಯಂಶೋಽಪಿ ನ ವರ್ತತೇ ॥**

**ಗ್ರಂಥೋಽಪ್ಯೇವಂ ವಿಲುಲಿತಃ ಕಿಮರ್ಥೋ ದೇವದುರ್ಗಮಃ ।**
**ಕಲಾವೇವಂ ವ್ಯಾಕುಲಿತೇ ನಿರ್ಣಯಾಯ ಪ್ರಚೋದಿತಃ ॥**

**ಹರಿಣಾ ನಿರ್ಣಯಾನ್ ವಚ್ಮಿ ವಿಜಾನಂಸ್ತತ್ಪ್ರಸಾದತಃ ।**
**ಶಾಸ್ತ್ರಾಂತರಾಣಿ ಸಂಜಾನನ್ ವೇದಾಂಶ್ಚಾಸ್ಯ ಪ್ರಸಾದತಃ ॥**

**ದೇಶೇ ದೇಶೇ ತಥಾ ಗ್ರಂಥಾನ್ ದೃಷ್ಟ್ವಾ ಚೈವ ಪೃಥಗ್ವಿಧಾನ್ ।**
**ಯಥಾ ಚ ಭಗವಾನ್ ವ್ಯಾಸಃ ಸಾಕ್ಷಾನ್ನಾರಾಯಣಃ ಪ್ರಭುಃ ॥**

**ಜಗಾದ ಭಾರತಾದ್ಯೇಷು ತಥಾ ವಕ್ಷ್ಯೇ ತದೀಕ್ಷಯಾ ।**
**ಸಂಕ್ಷೇಪಾತ್ ಸರ್ವಶಾಸ್ತ್ರಾರ್ಥಂ ಭಾರತಾರ್ಥಾನುಸಾರತಃ ॥ (೨/೨-೮)**

ಮಹಾಭಾರತವು ಒಂದು ಮೂಲ ಕೃತಿಯಾಗಿ ಅದ್ಭುತವೆನ್ನಿಸಿದರೆ ಅದಕ್ಕೆ ಅತ್ಯಂತ ಅನುರೂಪವಾದ ವಿಶ್ಲೇಷಣೆಯಾಗಿ ಮಹಾಭಾರತತಾತ್ಪರ್ಯನಿರ್ಣಯವು ಅದ್ಭುತವೆನ್ನಿಸುತ್ತದೆ.

## ಯಮಕಭಾರತ

ಯಮಕಭಾರತವು ಮಹಾಭಾರತವನ್ನು ಕುರಿತು ಶ್ರೀಮದಾಚಾರ್ಯರು ನೀಡಿರುವ ಮತ್ತೊಂದು ಕೃತಿ. ಇದೂ ಶ್ಲೋಕರೂಪದ ರಚನೆಯೇ. ಆದರೆ ಗಾತ್ರದಲ್ಲಿ ಅದು ಎಷ್ಟು ದೊಡ್ಡದೋ ಇದು ಅಷ್ಟೇ ಚಿಕ್ಕದು; ಎಂದರೆ ಅದರ ವ್ಯಾಪ್ತಿ ಐದು ಸಾವಿರ ಶ್ಲೋಕಗಳನ್ನು ಮೀರಿದ್ದರೆ, ಇದರಲ್ಲಿಯ ಶ್ಲೋಕ ಸಂಖ್ಯೆ ಎಂಭತ್ತೊಂದು ಮಾತ್ರ. ಅಷ್ಟು ವಿಸ್ತೃತಕೃತಿಯನ್ನು ನೀಡಿದ ವ್ಯಕ್ತಿಯೇ ಇಂತಹ ಸಂಕ್ಷಿಪ್ತರೂಪವನ್ನೂ ನೀಡಿರುವರು. ಇದು ಅಂತಹವರಿಗಷ್ಟೇ ಸಾಧ್ಯವಾಗುವ ಕಾರ್ಯವೂ ಹೌದು. ಒಂದರ್ಥದಲ್ಲಿ ಇದು ಅವರ ಮಹಾಭಾರತತಾತ್ಪರ್ಯ

ನಿರ್ಣಯದ ಸಾರವಾದ ಅಣುಮಹಾಭಾರತತಾತ್ಪರ್ಯನಿರ್ಣಯ (ಭಾಷ್ಯಕ್ಕೆ ಅಣುಭಾಷ್ಯದಂತೆ), ಇನ್ನೊಂದು ಅರ್ಥದಲ್ಲಿ ಇಡೀ ಮಹಾಭಾರತದ ಸಾರವೂ ಆಗಿದೆ. ಇದರ ಮತ್ತೊಂದು ಹೆಸರು ಭಾರತತಾತ್ಪರ್ಯ ಎಂದೇ. ಹದಿನೆಂಟು ಪರ್ವಗಳ ಭಾರತವನ್ನು ಎಂಭತ್ತೊಂದು ಶ್ಲೋಕಗಳಲ್ಲಿ ಸಂಗ್ರಹಿಸಿರುವುದರಲ್ಲಿ ಸಂಖ್ಯೆಯ ಔಚಿತ್ಯವೂ ಸೇರಿದೆ. ಎಂದರೆ ೧೮ ಪರ್ವಗಳ ಅದೂ "ಜಯ", ೮೧ ಶ್ಲೋಕಗಳ ಇದೂ "ಜಯ"ವೇ.

ಒಮ್ಮೆ ತುಂಬಿದ ವಿದ್ವತ್ಸಭೆಯಲ್ಲಿ ಇವರಿಂದ ಎಲ್ಲ ಬಗೆಯಲ್ಲೂ ಸೋತ ವಿದ್ವಾಂಸರುಗಳು ಇವರ ಕಾವ್ಯಪ್ರತಿಭೆಯನ್ನು ತಿಳಿಯುವ ಅಭಿಲಾಷೆ ವ್ಯಕ್ತಪಡಿಸಿದಾಗ, ತಕ್ಷಣವೇ ರಚಿತವಾದ ಕೃತಿ ಇದು ಎಂಬುದಾಗಿ ಸುಮಧ್ವವಿಜಯ ಉಲ್ಲೇಖಿಸಿದೆ; ಎಂದರೆ ಇದು ಅವರ ಆಶುಕವಿತೆ. ಅತ್ಯಂತ ಜಟಿಲವಾದ ಯಮಕಾಲಂಕಾರದಲ್ಲಿ ಸ್ಫುರಿಸಿ ಬಂದ ಕಾರಣದಿಂದ ಇದು ಯಮಕಭಾರತ. ಯಮಕದ ಅನೇಕ ಪ್ರಾಕಾರಗಳನ್ನು ತೆರೆದಿಡುತ್ತಲೇ, ಕೃಷ್ಣಕಥೆಯ ಮರ್ಮವನ್ನು ಬಿಚ್ಚಿಡುವ ಈ ಕೃತಿ ಅಪೂರ್ವ ಚಿತ್ರಕಾವ್ಯವೂ ಹೌದು, ಶ್ರೇಷ್ಠ ಶಾಸ್ತ್ರಕೃತಿಯೂ ಹೌದು. ಕೃಷ್ಣ, ಭೀಮ, ದ್ರೌಪದಿ ಮೊದಲಾದವರ ವ್ಯಕ್ತಿತ್ವವನ್ನು ತುಂಬಾ ಸರಸವಾಗಿ ಇದೂ ನಿರೂಪಿಸುತ್ತದೆ. ಇದರಲ್ಲಿಯ-

ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ।
ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ॥

ಎಂಬ ಇಪ್ಪತ್ತೆಂಟು "ಭಾ" ಕಾರಗಳ ಏಕಾಕ್ಷರ ಯಮಕ ಇಡೀ ಸಂಸ್ಕೃತ ಸಾಹಿತ್ಯದಲ್ಲೇ ಅಪೂರ್ವ. ಅದಕ್ಕೆ ಸ್ವತಃ ಅವರೇ ನೀಡಿದ ವಿವರಣೆಯನ್ನು ಅವರ ಸಾಕ್ಷಾಚ್ಛಿಷ್ಯರುಗಳಾದ ನರಹರಿತೀರ್ಥರು ಮತ್ತು ಹೃಷೀಕೇಶತೀರ್ಥರು ದಾಖಲಿಸಿರುವರು. ಅವರ ಮತ್ತೊಂದು ಕೃತಿ 'ಭಾಗವತತಾತ್ಪರ್ಯನಿರ್ಣಯ'ದಲ್ಲೂ ಮಹಾಭಾರತತಾತ್ಪರ್ಯನಿರ್ಣಯಕ್ಕೆ ಬೇಕಾದ ಅನೇಕ ವಿವರಗಳು ತುಂಬಿವೆ.

ಇದಕ್ಕೆ ಶ್ರೀನರಹರಿತೀರ್ಥರು ಶ್ಲೋಕರೂಪ ಮತ್ತು ವಾಕ್ಯರೂಪವಾದ ಎರಡು ಟೀಕೆಗಳನ್ನು ರಚಿಸಿರುವರು. ಯಮಕಭಾರತದ ಮೇಲೆ ಟೀಕೆ ರಚಿಸಿರುವ ಪ್ರಾಚೀನ ಟೀಕಾಕಾರರು ಇವರೊಬ್ಬರೇ ಎನ್ನಬಹುದು. ಇವರ ವ್ಯಾಖ್ಯಾನ ಅನೇಕ ರೀತಿಯಲ್ಲಿ ವಿಶಿಷ್ಟವಾಗಿದ್ದು ಮೂಲದ ಅರ್ಥಗಾಂಭೀರ್ಯವನ್ನು ಅರಿಯಲು ತುಂಬಾ ಉಪಕಾರಕವಾಗಿದೆ. ಶ್ರೀಯಾದವಾರ್ಯರ ಟೀಕೆಯು ಅಧ್ಯಯನ ಪರಂಪರೆಯಲ್ಲಿ ವಿಶೇಷವಾಗಿ ಬಳಕೆಯಲ್ಲಿದೆ. ವಿಜಯಧ್ವಜತೀರ್ಥರು ಇದರ ಮೇಲೆ ಟೀಕೆಯನ್ನು ರಚಿಸಿರುವ ಉಲ್ಲೇಖವುಂಟು.

# ಪುರಾಣಪ್ರಸ್ಥಾನಗ್ರಂಥ
## ಭಾಗವತತಾತ್ಪರ್ಯನಿರ್ಣಯ

ಭಾಗವತ ಪುರಾಣವು ಪುರಾಣರಾಜ ಎಂದು ಮಾನ್ಯವಾಗಿರುವ ಮಹಾಪುರಾಣ. ಇತರ ಹದಿನೇಳು ಪುರಾಣಗಳನ್ನು ಮಹಾಭಾರತಾದಿಗಳನ್ನು ರಚಿಸಿದ ನಂತರ ಶ್ರೀವೇದವ್ಯಾಸರು ಕೊನೆಯದಾಗಿ ಇದನ್ನು ಶ್ರೀನಾರದ ಮಹಾಮುನಿಗಳ ಪ್ರಾರ್ಥನೆಯಂತೆ ರಚಿಸಿದ ಉಲ್ಲೇಖ ಇದರಲ್ಲೇ ಬಂದಿದೆ. ಎಂದರೆ ರಚಿಸಿದವರು ಸಾಕ್ಷಾತ್ ಶ್ರೀಹರಿಯ ಅವತಾರರಾದ ಶ್ರೀವೇದವ್ಯಾಸರು. ರಚಿಸಿದ ಸ್ಥಳ ಸರ್ವಶ್ರೇಷ್ಠವಾದ ಗಂಗಾತೀರದ ಬದರೀ ಕ್ಷೇತ್ರ. ಉಪದೇಶಿಸಿದ್ದು ಹರನ ಅವತಾರರಾದ ಶ್ರೀ ಶುಕಾಚಾರ್ಯರಿಗೆ. ಆದ್ದರಿಂದ ಇದು ಸಹಜವಾಗಿಯೇ ವಿಶಿಷ್ಟವಾದ ಪುರಾಣವಾಗಿ ಮಾನ್ಯವಾಗಿದೆ. ಇಂತಹ ಉತ್ಕೃಷ್ಟ ಕೃತಿಯನ್ನು ಅದ್ವೈತಮತದ ಶಂಕರಾಚಾರ್ಯರಾಗಲೀ, ವಿಶಿಷ್ಟಾದ್ವೈತ ಮತದ ರಾಮಾನುಜಾಚಾರರಾಗಲೀ ವ್ಯಾಖ್ಯಾನಿಸುವುದಿರಲಿ ಉಲ್ಲೇಖಿಸಿಯೂ ಇಲ್ಲ. ಆ ಕೊರತೆಯನ್ನು ನೀಗಿ ಮೊಟ್ಟಮೊದಲ ಬಾರಿಗೆ ಪುರಾಣ ಪ್ರಪಂಚವನ್ನು ಅರ್ಥೈಸಿದ ಹಿರಿಮೆ ಶ್ರೀಮಧ್ವಾಚಾರ್ಯರದು. ಆರಂಭದಲ್ಲೇ ಅವರು ತಿಳಿಸಿರುವಂತೆ ಶ್ರೀಮದ್ಭಾಗವತವು ಬ್ರಹ್ಮಸೂತ್ರಗಳ ಅರ್ಥ, ಮಹಾಭಾರತದ ತಾತ್ಪರ್ಯನಿರ್ಣಯ, ಗಾಯತ್ರೀಮಂತ್ರದ ಭಾಷ್ಯ, ವೇದಾರ್ಥಸಾರ, ಹಾಗೂ ಸಕಲ ಪುರಾಣಗಳ ಸಾರಸರ್ವಸ್ವ. ಅದಕ್ಕೆಂದೇ ಇದಕ್ಕೆ ಎಲ್ಲಿಲ್ಲದ ಮಹತ್ವ.

ಶ್ರೀಮದ್ಭಾಗವತತಾತ್ಪರ್ಯನಿರ್ಣಯವು ಪ್ರತಿಶ್ಲೋಕಕ್ಕೂ ರಚಿತವಾದ ವ್ಯಾಖ್ಯಾನವಲ್ಲ. ಆದರೆ ತಾತ್ತ್ವಿಕವಾಗಿ ಐತಿಹಾಸಿಕವಾಗಿ ಜಟಿಲವೆನ್ನಿಸುವ ಸಾವಿರಕ್ಕೂ ಹೆಚ್ಚಿನ ಶ್ಲೋಕಗಳಿಗೆ ಅನೇಕ ಪ್ರಮಾಣಗಳ ಉದಾಹರಣೆಗಳೊಂದಿಗೆ ಸ್ವರಸವಾದ ಉದ್ಬೋಧಕವಾದ ವಿವರಣೆಗಳನ್ನು ಒದಗಿಸಿರುವುದು ಇದರ ಸಾಧನೆ. ಸಹಜವಾಗಿಯೇ ಏಕಾದಶಸ್ಕಂದಕ್ಕೆ ನೀಡಿರುವ ವಿವರಣೆ ತುಂಬಾ ವಿಸ್ತಾರವಾಗಿದೆ. ಶ್ರುತಿಗೀತಾ, ಕಪಿಲಗೀತಾ ಮೊದಲಾದ ಪ್ರಸಂಗಗಳಿಗೂ ವಿವರವಾದ ವ್ಯಾಖ್ಯಾನವೇ ದೊರೆಯುತ್ತದೆ. ಉದ್ದಕ್ಕೂ ವಿವಿಧ ಪ್ರಾಚೀನ ಗ್ರಂಥಗಳ ಉಲ್ಲೇಖ ನಿಯಮೇನ ಕಂಡು ಬರುತ್ತದೆ. ಒಟ್ಟಾಗಿ ಇದರ ವೈಶಿಷ್ಟ್ಯವನ್ನು ಹೀಗೆ ಸಂಗ್ರಹಿಸಬಹುದು :

**ಭಾಗವತದ ಜಟಿಲ ಶ್ಲೋಕಗಳ ಅರ್ಥ ವಿವರಣೆ :** ಜನ್ಮಾದ್ಯಸ್ಯ ಯತಃ ಎಂಬ ಮೊದಲ ಶ್ಲೋಕದ ವಿವರಣೆಯೇ ಇದಕ್ಕೆ ಉತ್ತಮ ನಿದರ್ಶನ.

**ಭಾರತದೊಂದಿಗೆ ಬರುವ ವಿರೋಧಗಳ ಪರಿಹಾರ :** ಉದಾಹರಣೆಗೆ ಅಶ್ವತ್ಥಾಮರನ್ನು ಪರಾಭವಗೊಳಿಸಿ ಅವರ ತಲೆಯಮೇಲಿದ್ದ ಅಪೂರ್ವ ಮಣಿಯನ್ನು ತೆಗೆದುಕೊಳ್ಳುವ ಪ್ರಸಂಗದಲ್ಲಿನ ಭಾರತಭಾಗವತಗಳಲ್ಲಿನ ವಿರೋಧವನ್ನು ಶ್ರೀಮದಾಚಾರ್ಯರು ಭಾಗವತ ಪುರಾಣದ ನಿರೂಪಣೆ ಅಶ್ವತ್ಥಾಮರ ಸ್ವಪ್ನದರ್ಶನದ

ವಿವರವಾಗಿದ್ದರೆ ಮಹಾಭಾರತದ ನಿರೂಪಣೆ ವಾಸ್ತವಿಕವಾಗಿ ನಡೆದ ಪ್ರಸಂಗ ಎಂದು ತಿಳಿಸಿ ಪರಿಹರಿಸಿರುವರು.

**ಕಠಿಣ ಪದಗಳ ವಿವರಣೆ :** ಪ್ರಥಮಸ್ಕಂದದಲ್ಲಿ ಬರುವ "ಕೌಶಿಕ್ಯಪ ಉಪಸ್ಪೃಶ್ಯ'' ಎಂಬಲ್ಲಿನ ಕೌಶಿಕೀ ಎಂಬ ಪದವನ್ನು ಕೆಲವರು ಕೌಶಿಕೀ ನದಿ ಎಂದೂ ಮತ್ತೆ ಕೆಲವರು ಕೌಶಿಕಗೋತ್ರದವನು ಎಂದೂ ವ್ಯಾಖ್ಯಾನಿಸಿರುವರು. ಆದರೆ ಭಾಗವತದ ಆ ಪ್ರಸಂಗದಲ್ಲಿ ಕೌಶಿಕೀ ನದಿ ಇಲ್ಲವೇ ಇಲ್ಲ. ಶೃಂಗಿಮುನಿ ಆಂಗಿರಸ ಗೋತ್ರದವರೇ ಹೊರತು ಕೌಶಿಕಗೋತ್ರದವರಲ್ಲ. ಹೀಗೆ ಈ ಎರಡು ವಿವರಣೆ ಗಳೂ ಅಸಮಂಜಸ. ಶ್ರೀಮದಾಚಾರ್ಯರು ಕೌಶಿಕೀ ಎಂಬ ಈ ಪದಕ್ಕೆ ಕುಶಪಾಣಿಃ ಎಂಬುದಾಗಿ ವಿವರಣೆ ನೀಡಿ ಹೊಸ ಬೆಳಕು ಚೆಲ್ಲಿರುವರು.

**ಪುರಾಣಗಳಲ್ಲಿನ ಪರಸ್ಪರ ವಿರೋದಗಳ ಪರಿಹಾರ :** ಕೆಲವು ಪುರಾಣಗಳಲ್ಲಿ ಬರುವ ವಿವರಗಳು ಒಂದಕ್ಕೊಂದು ವಿರುದ್ಧವಾಗಿರುವಂತೆ ಕಾಣುವುದುಂಟು. ವಾಮನರೂಪಿ ಭಗವಂತನು ಊರ್ಧ್ವಲೋಕವನ್ನು ಅಳೆಯಲು ಎತ್ತಿದ್ದು ಎಡಪಾದ ಎಂದು ಭಾಗವತಪುರಾಣದ ಉಲ್ಲೇಖ. ಬಲಪಾದ ಎಂದು ಬೇರೆ ಪುರಾಣಗಳ ಹೇಳಿಕೆ. ಆಚಾರ್ಯರು ಶ್ವೇತವರಾಹಕಲ್ಪದಲ್ಲಿ ವಾಮಪಾದವನ್ನೂ ಇತರ ಕಲ್ಪ ಗಳಲ್ಲಿ ಬಲಪಾದವನ್ನೂ ಶ್ರೀಹರಿ ಎತ್ತಿದ. ಎಂದು ತಿಳಿಸಿ ಇಂಥ ವಿರೋಧಗಳನ್ನು ಕಲ್ಪವ್ಯತ್ಯಾಸದ ಮೂಲಕ ಪರಿಹರಿಸಿಕೊಳ್ಳಬೇಕು ಎಂದು ನಿರ್ದೇಶಿಸಿರುವರು.

ಸಮಾಧಿ ದರ್ಶನ ಮತ್ತು ಗುಹ್ಯ ಎಂಬ ಭಾಷಾತ್ರಯಗಳ ಬಗ್ಗೆ ವಿವರಣೆ ನೀಡಿ ಅವುಗಳನ್ನು ನಿದರ್ಶನಪೂರ್ವಕ ವಿವರಿಸಿರುವರು. ಭಕ್ತಿಯಿಂದಲೇ ಮುಕ್ತಿ, ದ್ವೇಷಾದಿಗಳು ಎಂದೂ ಮೋಕ್ಷಸಾಧನವಲ್ಲ ಎಂಬ ಅಂಶವನ್ನು ಅನೇಕ ಆಧಾರಗಳನ್ನಿಟ್ಟು ಸ್ಫುಟಪಡಿಸಿರುವರು. ಇಂತಹ ತಾತ್ವಿಕವಿವೇಚನೆ ಈ ಕೃತಿಯ ಮತ್ತೊಂದು ವೈಶಿಷ್ಟ್ಯ. ಸೃಷ್ಟಿವಿಚಾರ ಮೊದಲಾದ ಪ್ರಸಂಗಗಳಲ್ಲಿ ಅವರು ನೀಡಿರುವ ಸ್ಪಷೀಕರಣವಂತೂ ಅನ್ಯಾದೃಶ.

ಹಿರಣ್ಯಾಕ್ಷ ಮೊದಲ ಜನ್ಮದಲ್ಲಿ ಬ್ರಹ್ಮಪುತ್ರ. ಮತ್ತೊಂದು ಜನ್ಮದಲ್ಲಿ ದಿತಿ ಪುತ್ರ. ಎರಡನೆಯ ಜನ್ಮದಲ್ಲಿ ಮಾತ್ರ ಅವನೊಳಗೆ ವಿಜಯನ ಆವೇಶ ಮೊದಲಾದ ಸೂಕ್ಷ್ಮ ವಿಚಾರಗಳ ನಿರೂಪಣೆ ಇದರ ಹಿರಿಮೆಯ ಇನ್ನೊಂದು ಮುಖ. ನಾಮಮಹೋದಧಿ, ಶಬ್ದನಿರ್ಣಯ ಮೊದಲಾದ ಗ್ರಂಥಗಳಿಂದ ಶಬ್ದಾರ್ಥದ ಬಗ್ಗೆ ಸ್ಪಷ್ಟೀಕರಣವನ್ನೂ ಮಹಾವ್ಯಾಕರಣ ಕೃತಿಯಿಂದ ವ್ಯಾಕರಣ ವಿಚಾರಗಳನ್ನೂ ನಿರೂಪಿಸುವುದು ಇದರ ವೈಶಿಷ್ಯದ ಮತ್ತೊಂದು ಅಂಶ.

ವಿವಿಧ ದೇವತೆಗಳ ಹಾಗೂ ದೈತ್ಯರುಗಳ ಅಂಶಾವತಾರಗಳ ಬಗ್ಗೆ ಖಚಿತ ಮಾಹಿತಿ ಇದರ ಮತ್ತೊಂದು ವೈಶಿಷ್ಟ್ಯ. ಒಟ್ಟಿನಲ್ಲಿ ಭಾಗವತತಾತ್ಪರ್ಯನಿರ್ಣಯ ಪುರಾಣಪ್ರಪಂಚದ ಅರ್ಥನಿರ್ಣಯಕ್ಕೆ ಸಮಗ್ರ ಮಾರ್ಗದರ್ಶನ ಮಾಡುವ ಅಪೂರ್ವ ಕೃತಿಯಾಗಿದ್ದು, ಪುರಾಣಪ್ರಪಂಚದ ಭಾಷ್ಯವೇ ಆಗಿದೆ.

# ಆಚಾರಗ್ರಂಥಗಳು

ಸದ್ವಿಚಾರದಂತೆ ಸದಾಚಾರವೂ ಸಾಧನೆಯ ಅವಶ್ಯ ಅಂಗ. ಸದ್ವಿಚಾರ ಭಗವತ್ಪ್ರೀತಿಗೂ, ಆಮೂಲಕ ಮುಕ್ತಿಗೂ ಸಾಧನವಾದರೆ, ಸದಾಚಾರ ಅಂತಹ ಸದ್ವಿಚಾರವನ್ನು ಸಂಪಾದಿಸಲು ಇರುವ ಅತಿಮುಖ್ಯ ಸಾಧನವಾಗಿದೆ. ಶಂಕರಾಚಾರ್ಯರ ಕೃತಿಗಳಲ್ಲಿ ಸದಾಚಾರದ ಬಗ್ಗೆ ಬೆಳಕು ಚೆಲ್ಲುವ ಕೃತಿಗಳು ಇಲ್ಲ. ರಾಮಾನುಜಾಚಾರ್ಯರ 'ನಿತ್ಯಗ್ರಂಥ' ಭಗವತ್ಪೂಜಾವಿಧಾನಕ್ಕಷ್ಟೇ ಒತ್ತುಕೊಟ್ಟು ಉಳಿದ ಆಚಾರಗಳ ಬಗ್ಗೆ ಮಾಹಿತಿ ನೀಡುವುದಿಲ್ಲ.

ಆಚಾರ್ಯಶ್ರೀಮಧ್ವರು ಆಚಾರದ ಬಗ್ಗೆ ಬೆಳಕು ಚೆಲ್ಲುವ ಒಟ್ಟು ಐದು ಕೃತಿಗಳನ್ನು ನೀಡಿರುವರು : ಅವು ಸದಾಚಾರಸ್ಮೃತಿ, ಕೃಷ್ಣಾಮೃತಮಹಾರ್ಣವ, ಜಯಂತೀನಿರ್ಣಯ, ತಂತ್ರಸಾರಸಂಗ್ರಹ ಮತ್ತು ಯತಿಪ್ರಣವಕಲ್ಪ.

ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸ ಎಂಬ ನಾಲ್ಕು ಆಶ್ರಮದವರೂ, ಬ್ರಾಹ್ಮಣಾದಿ ವರ್ಣದವರೂ ಪ್ರತಿನಿತ್ಯ ಅಳವಡಿಸಿಕೊಳ್ಳಲೇ ಬೇಕಾದ ಸದಾಚಾರದ ಸ್ವರೂಪ ಮತ್ತು ಅದರ ವಿವರಗಳು **'ಸದಾಚಾರಸ್ಮೃತಿ'**ಯಲ್ಲಿ ನಿರೂಪಿತವಾಗಿವೆ. ಆರಂಭದ ಶ್ಲೋಕದಲ್ಲಿ ಕರ್ಮಾಚರಣೆಯ ಸ್ವರೂಪ, ಅವುಗಳ ಸಾರ್ಥಕ್ಯ, ನಿಷ್ಕಾಮತೆಯ ಅವಶ್ಯಕತೆ ಮತ್ತು ಕೃಷ್ಣಾರ್ಪಣಬುದ್ಧಿಯ ಆವಶ್ಯಕತೆ ಗಳನ್ನು ಗೀತಾಶ್ಲೋಕವನ್ನು ಆಧರಿಸಿದ ಮಂಗಲ ಶ್ಲೋಕದಲ್ಲಿ ನಿರೂಪಿಸಿರುವರು:

**ಯಸ್ಮಿನ್ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಯಾತಿ ಪರಂ ಜಯತಿ ಸೋಽಚ್ಯುತಃ ॥**

ಪ್ರತಿದಿನ ಹರಿಸ್ಮೃತಿ ಪೂರ್ವಕವಾಗಿ ಎಚ್ಚರಗೊಳ್ಳುವುದು, ಶೌಚ, ದಂತಧಾವನ, ಆಚಮನ, ಸ್ನಾನ, ಸೂರ್ಯಾರ್ಘ್ಯ, ಗಾಯತ್ರೀಜಪ, ಅಷ್ಟಾಕ್ಷರ ಮಂತ್ರ ಜಪ, ಉಪಸ್ಥಾನ, ಬ್ರಹ್ಮಯಜ್ಞ, ದೇವಪೂಜೆ, ಪಾಠಪ್ರವಚನ, ನೈವೇದ್ಯ, ವೈಶ್ವದೇವ, ಬಲಿಹರಣ, ಪುನಃಪಾಠಪ್ರವಚನ, ಸಾಯಂಸಂಧ್ಯಾವಂದನ ಮತ್ತು ನಿದ್ರಾವಿಧಿ ಇವು ಪ್ರಧಾನವಾಗಿ ಉಲ್ಲೇಖಿಸಲ್ಪಟ್ಟಿರುವ ನಿತ್ಯಕರ್ಮಗಳು. ಸ್ನಾನವಿಧಿಯು ವಿಸ್ತಾರವಾಗಿಯೇ ನಿರೂಪಿತವಾಗಿದೆ. ಗಾಯತ್ರೀಜಪದ ಸಂಖ್ಯೆ, ಜಪಕ್ಕೆ ಸೂಕ್ತಕಾಲ, ಜಪವಿಧಿಗಳು ಉಲ್ಲೇಖಿಸಲ್ಪಟ್ಟಿವೆ. ಪ್ರಧಾನಜ್ಞಾನಸಾಧನವಾದ ಪಾಠಪ್ರವಚನಗಳಿಗೆ ದಿನದ ಸಿಂಹಪಾಲು ವಿನಿಯೋಗವಾಗಬೇಕು ಎಂಬುದು ಇದರಲ್ಲಿ ನಿರೂಪಿತವಾದ ಅತಿಮುಖ್ಯವಾದ ನಿತ್ಯವಿಧಿ.

ನಿತ್ಯವಿಧಿಗಳ ಪಟ್ಟಿಯನ್ನು ಯಾವುದೇ ಆಚಾರಗ್ರಂಥ ನೀಡಬಲ್ಲುದು. ಆದರೆ ಆಚಾರ್ಯರ ಸದಾಚಾರಸ್ಮೃತಿ ಹಾಗಲ್ಲ. 'ಸ್ಮೃತ್ವಾ ವಿಷ್ಣುಂ', 'ಸ್ವದೇಹಸ್ಥಂ ಹರಿಂ

ಸ್ಮರನ್', 'ಧ್ಯಾತ್ವಾ ಸೂರ್ಯಗತಂ ಹರಿಂ', 'ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವೈವ', ಸ್ವಾಧ್ಯಾಯೇನಾರ್ಚಯೇದ್ಧರಿಂ', 'ಧ್ಯಾನಪ್ರವಚನಾಭ್ಯಾಂ ಚ ಯಥಾಯೋಗ್ಯ ಮುಪಾಸನಂ', 'ಸ್ನಾತ್ವಾ ಸಂಪೂಜಯೇದ್ವಿಷ್ಣುಂ', 'ವೈಶ್ವದೇವಂ ಬಲಿಂ ಚೈವ ಕಾರ್ಯಂ ನಿತ್ಯಂ ತದರ್ಪಣಂ', 'ಭುಂಜೀತ ಹೃದ್ಗತಂ ವಿಷ್ಣುಂ ಸ್ಮರಂಸ್ತದ್ಗತ ಮಾನಸಃ', 'ವೇದಶಾಸ್ತ್ರವಿನೋದೇನ ಪ್ರೀಣಯನ್ ಪುರುಷೋತ್ತಮಮ್ । ', 'ಸ್ವಪೇದ್ ಧ್ಯಾಯನ್ ಜನಾರ್ದನಂ', 'ಅಂತರಾಲೇ ತಥೋದ್ಬುದ್ಧಃ ಸ್ಮರೇತ ಬಹುಶೋ ಹರಿಂ', ಎಂಬುದಾಗಿ ಪ್ರತಿಯೊಂದು ಕರ್ಮದ ಹಿನ್ನೆಲೆಯಾಗಿ 'ವಿಷ್ಣುಪ್ರೇರಣಯಾ ವಿಷ್ಣುಪ್ರೀತ್ಯರ್ಥಂ' ಅನುಸಂಧಾನಕ್ರಮವೇ ಕರ್ಮಾಚರಣೆಯ ಜೀವಾಳ ಎಂಬುದನ್ನು ಪ್ರತಿಪಾದಿಸುವುದು ಇದರ ಅಸಾಧಾರಣ ಮಹತ್ತ್ವ. ಕರ್ಮಕ್ಕೇ ಪ್ರಾಧಾನ್ಯ ಕೊಡುವ ಪೂರ್ವಮೀಮಾಂಸಕರು ಒಂದು ಬಾರಿಯೂ ಹೇಳದೆ ಹೋಗಿದ್ದ 'ಭಗವತ್ಪ್ರೀತ್ಯರ್ಥಂ' ಎಂಬ ಅಂಶ ಇಲ್ಲಿ ಒಮ್ಮೆಯೂ ತಪ್ಪಿಲ್ಲ ಎಂಬುದನ್ನು ಗಮನಿಸಬಹುದು.

ಗಾಯತ್ರೀಮಂತ್ರದ ಧ್ಯೇಯದೇವತೆ 'ನಾರಾಯಣ', ನಾರಾಯಣಾಷ್ಟಾಕ್ಷರವು ಗಾಯತ್ರೀಮಂತ್ರದಂತೆಯೇ ಅತ್ಯವಶ್ಯ ಜಪಿಸಲೇ ಬೇಕಾದ ಮೂಲಮಂತ್ರ ಎಂಬುದು ಆಚಾರ್ಯರಿಂದಲೇ ಬೆಳಕಿಗೆ ಬಂದ ಮತ್ತೆರಡು ಮುಖ್ಯಾಂಶಗಳು.

ವಟುಗಳಿಗೆ ವೈಶ್ವದೇವ ಬಲಿಹರಣಗಳು ವಿಹಿತವಲ್ಲ. ಆದರೆ ಅಗ್ನಿಕಾರ್ಯ ಅವರಿಗೆ ವಿಹಿತ, ಸರ್ವವರ್ಣಾಶ್ರಮದವರಿಗೂ ವಿಷ್ಣುವಿನ ಆರಾಧನೆಯೂ ತಾರತಮ್ಯಕ್ರಮದಲ್ಲಿ ರಮಾಬ್ರಹ್ಮಾದಿಗಳ ಆರಾಧನೆಯೂ ಅತ್ಯಂತ ವಿಹಿತ ಎಂಬ ಉಪದೇಶವೂ ಇದರಲ್ಲಿದೆ.

ಕೇವಲ ನಲ್ವತ್ತು ಶ್ಲೋಕಗಳ (ಇದರಲ್ಲಿ ಅನೇಕ ಶ್ಲೋಕಗಳು ಪ್ರಮಾಣವಚನಗಳ ಉದಾಹರಣೆಗಳು) ಚಿಕ್ಕಗಾತ್ರದ ಕೃತಿ ದೈನಂದಿನ ಸದಾಚಾರದ ಬಗ್ಗೆ ವಿಶೇಷ ಬೆಳಕು ಚೆಲ್ಲುವ ಮಹತ್ಕಾರ್ಯವನ್ನು ಸಾಧಿಸಿದೆ.

'ಕೃಷ್ಣಾಮೃತಮಹಾರ್ಣವ'ವು ವಿಭಿನ್ನರೀತಿಯ ರಚನೆ. ಆಚಾರ್ಯರು ಸಂಚಾರಕ್ರಮೇಣ ಕೊಕ್ಕಡ (ವೈದನಾಥೇಶ್ವರಕ್ಷೇತ್ರ) ಎಂಬ ಕ್ಷೇತ್ರಕ್ಕೆ ಆಗಮಿಸಿದ್ದಾಗ ಅಲ್ಲಿ ಯಡಪಾಡಿತ್ತಾಯ ಎಂಬ ಭಕ್ತನ ಪ್ರಾರ್ಥನೆಯಂತೆ ನಿರೂಪಿಸಿದ ಆಚಾರಸಂಹಿತೆಯೇ ಈ 'ಕೃಷ್ಣಾಮೃತಮಹಾರ್ಣವ'.

ಅರ್ಚನೆ, ಸಂಸ್ಕರಣೆ, ಧ್ಯಾನ, ಕೀರ್ತನ, ಕಥನ ಮತ್ತು ಶ್ರವಣ ಎಂಬ ಆರುವಿಧ ಉಪಾಸನೆಯಿಂದ ಭಗವಂತನು ಮುಕ್ತಿಕೊಡುವಂತಹ ವಿಶೇಷಾನುಗ್ರಹ ಮಾಡುವನು ಎಂಬ ಸಂದೇಶದೊಂದಿಗೆ ಕೃತಿ ಪ್ರಾರಂಭವಾಗುವುದು.

ತಾಪತ್ರಯದಿಂದ ಬೆಂದ ಜನಕ್ಕೆ ಅಮೃತಸೇಚನ ಮಾಡಿಸಲೆಂದು ಕೃಷ್ಣಾಮೃತ ಮಹಾರ್ಣವದ ರಚನೆ ಎಂಬುದಾಗಿ ಗ್ರಂಥದ ಉದ್ದೇಶವನ್ನು ತಿಳಿಸಿರುವರು. ದೇವಪೂಜೆಯ ಮಹತ್ತ್ವ, ಪೂಜಿಸಲೇಬೇಕಾದ ಸಾಲಿಗ್ರಾಮ ಮತ್ತು ಚಕ್ರಾಂಕಿತಗಳ ಹಿರಿಮೆ, ನಮಸ್ಕಾರ, ಪ್ರದಕ್ಷಿಣ, ತೀರ್ಥಪ್ರಾಶನ, ಪ್ರಸಾದ ಸ್ವೀಕಾರಗಳ ಮಹತ್ತ್ವ, ಊರ್ಧ್ವಪುಂಡ್ರಧಾರಣೆ, ಗೋಪೀಚಂದನಧಾರಣೆ, ಅಂಗಾರಕಾದಿಗಳ ಧಾರಣ, ಹರಿಸ್ಮರಣೆ, ಧ್ಯಾನಗಳ ಮಹತ್ತ್ವ, ನಾಮೋಚ್ಚಾರಣೆಯ ವಿಶೇಷ, ಹರಿಸರ್ವೋತ್ತಮತ್ವದ ಪ್ರತಿಪಾದನೆ, ಹರಿದಿನದ ಅಸಾಧಾರಣ ಮಹತ್ತ್ವ ಅದರ ವಿಧಿವಿಧಾನಗಳು, ಸರ್ವವರ್ಣಾಶ್ರಮದವರಿಗೂ ಅದು ಕಡ್ಡಾಯ, ಶ್ರವಣ ದ್ವಾದಶೀ, ಅತಿರಿಕ್ತದ್ವಾದಶಿಗಳೆಂದು ಸಹ ಉಪವಾಸವು ವಿಹಿತ, ಸಾಧನದ್ವಾದಶಿಯ ವಿಶೇಷ, ವಿಷ್ಣುಭಕ್ತಿಯ ಮಹಿಮೆ, ಮೊದಲಾಗಿ ಅನೇಕ ಪ್ರಮುಖ ವೈಷ್ಣವ ದೀಕ್ಷೆಯ ವಿವರಗಳು ಇದರಲ್ಲಿ ಸಂಕಲಿತವಾಗಿವೆ.

ಇದರಲ್ಲಿನ ನಾಲ್ಕಾರು ವಾಕ್ಯಗಳನ್ನು ಹೊರತುಪಡಿಸಿ ಇತರ ಎಲ್ಲ ಶ್ಲೋಕಗಳು ವಿಷ್ಣುಪುರಾಣ, ಪದ್ಮಪುರಾಣ ಮೊದಲಾದ ವ್ಯಾಸಕೃತ ಗ್ರಂಥಗಳಲ್ಲಿನ ಶಂಕರಾದಿ ದೇವತೆಗಳ, ನಾರದಾದಿಮುನಿಗಳ ವಚನಗಳು ಎಂಬುದು ಇದರ ವಿಶೇಷ. ಈ ಬಗೆಯ ರಚನೆಯಿಂದ ಸಾಧಾರವಾಗಿಯೇ ವಿಷಯ ಪ್ರತಿಪಾದನೆಯಾಗುವುದರಿಂದ ತತ್ತ್ವದಾರ್ಢ್ಯಕ್ಕೆ ಹೆಚ್ಚು ಅನುಕೂಲವಾಗುವುದು.

ಗ್ರಂಥದ ಉದ್ದೇಶ, ಸಾಧನೆ ಮತ್ತು ಇದರ ಶ್ರವಣದ ಫಲಗಳನ್ನು ಹೇಳುವ ಇಲ್ಲಿನ ಅಪೂರ್ವ ಶ್ಲೋಕಗಳು ಹೀಗಿವೆ :

**ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್ ।**
**ವಕ್ಷ್ಯಾಮಿ ಶಾಂತಯೇ ತಸ್ಯ ಕೃಷ್ಣಾಮೃತಮಹಾರ್ಣವಮ್ ॥**

**ಸಂಸಾರವಿಷಪಾನೇನ ಯೇ ಮೃತಾಃ ಪ್ರಾಣಿನೋ ಭುವಿ ।**
**ಅಮೃತಾಯ ಸ್ಮೃತಸ್ತೇಷಾಂ ಕೃಷ್ಣಾಮೃತಮಹಾರ್ಣವಃ ॥**

**ಶ್ರುತ್ವಾ ಧರ್ಮಂ ವಿಜಾನಾತಿ ಶ್ರುತ್ವಾ ತ್ಯಜತಿ ದುರ್ಮತಿಮ್ ।**
**ಶ್ರುತ್ವಾ ಜ್ಞಾನಮವಾಪ್ನೋತಿ ಶ್ರುತ್ವಾ ಮೋಕ್ಷಂ ಚ ಗಚ್ಛತಿ ॥** ಇತ್ಯಾದಿ

ಮಧ್ವವಿಜಯದಲ್ಲಿ ಇದರ ರಚನೆಗೆ ಸಂಬಂಧಿಸಿದಂತೆ ಬಂದಿರುವ ವಿವರ ಹೀಗಿದೆ:

**ಕ್ಷೇತ್ರಾಗ್ರ್ಯಂ ತ್ರಿಭುವನವೈದ್ಯನಾಥನಾಥಂ**
**ಪ್ರಸ್ಥಾಯ ಪ್ರಚುರತರಾಂತರಃ ಪ್ರಭಾವೀ ।**
**ಶ್ರೀಕೃಷ್ಣಾಮೃತಪರಮಾರ್ಣವಾಭಿಧಾನಂ**
**ಚಕ್ರೇ ಸದ್ವಚನತತಿಂ ಸ್ವಭಕ್ತಭೂತ್ಯೈ ॥ (16/40)**

ಇಂದ್ರಜಿತ್‌ನ ಉರಗಬಂಧಕ್ಕೆ ಸಿಲುಕಿ ಮೈಮರೆತ ಕಪಿವೃಂದವನ್ನು ಬದುಕಿಸಲೆಂದು ಹನುಮದ್ರೂಪದಿಂದ ಸಂಜೀವನ ತಂದ ಶ್ರೀವಾಯುದೇವರು, ಇಂದ್ರಿಯಗಳನ್ನು ಸೆಳೆಯುವ ಭೌತಿಕಸುಖಗಳ ಆಕರ್ಷಣೆಗೆ ಬಲಿಯಾಗಿ ಜೀವನ್ಮೃತರಾದ ಆಸ್ತಿಕಜನತೆಯನ್ನು ಅಮೃತ ಸೇಚನದಿಂದ ಬದುಕಿಸುವ ಅಮರಕೃತಿ 'ಕೃಷ್ಣಾಮೃತಮಹಾರ್ಣವ' ವನ್ನು ಶ್ರೀಮಧ್ವರೂಪದಿಂದ ನೀಡಿರುವರು.

**ಜಯಂತೀನಿರ್ಣಯವು** ಶ್ರೀಕೃಷ್ಣಜಯಂತೀವ್ರತದ ವಿಧಿವಿಧಾನಗಳ ನಿರೂಪಣೆಗೆ ಮೀಸಲಾದ ಪುಟ್ಟಕೃತಿ. ವೈಷ್ಣವರಿಗೆಲ್ಲ ಏಕಾದಶಿಯಂತೆ ಕಡ್ಡಾಯವಾಗಿರುವ ಮತ್ತೊಂದು ಮಹತ್ತ್ವದ ವ್ರತ 'ಕೃಷ್ಣಜಯಂತೀ'. ಕೃಷ್ಣಾಷ್ಟಮಿಯಂದು ಮಧ್ಯರಾತ್ರಿಯ ಸಮಯದಲ್ಲಿ ರೋಹಿಣೀನಕ್ಷತ್ರದ ಯೋಗವೂ ಇದ್ದಲ್ಲಿ ಅದು ಕೃಷ್ಣಜಯಂತೀ ಎನಿಸುವುದು. ಅದು ಸರ್ವವರ್ಣಾಶ್ರಮಗಳಿಗೂ ಅತ್ಯಂತ ವಿಹಿತ. ಉಪವಾಸ ಅಂದಿನ ಪ್ರಮುಖ ಕರ್ತವ್ಯ. ಅಂದಿನ ನಿತ್ಯಾಹ್ನಿಕ ಎಂದಿನಂತೆ; ಅಂದು ತ್ರಿಕಾಲದಲ್ಲೂ ಸ್ನಾನವು ವಿಹಿತ. ರಾತ್ರಿ ಶ್ರೀಕೃಷ್ಣನನ್ನು ವಿಶೇಷವಾಗಿ ಆರಾಧಿಸಿ, ಚಂದ್ರೋದಯಕ್ಕೆ ಅರ್ಘ್ಯ ಸಮರ್ಪಿಸಬೇಕು. ಅನಂತರ ಚಂದ್ರನಿಗೂ ಅರ್ಘ್ಯ ಸಮರ್ಪಿಸಿ ನಮಸ್ಕರಿಸಬೇಕು. ಅನಂತರ ಅವಶ್ಯವಿದ್ದಲ್ಲಿ ನಿದ್ರಿಸಬಹುದು. ಮಾರನೆಯ ದಿನ ವಿಹಿತಕಾಲದಲ್ಲಿ ಪಾರಣ ಮಾಡಿ ವ್ರತಸಮಾಪನ ಮಾಡಬೇಕು.

ಅಂದು ಸ್ನಾನಾದಿಗಳಿಗೆ ವಿಹಿತವಾದ ಮಂತ್ರವಿಶೇಷಗಳನ್ನು ಇಲ್ಲಿ ಉಲ್ಲೇಖಿಸಿರುವುದು ಈ ಕೃತಿಯ ಮತ್ತೊಂದು ವಿಶೇಷ. ಶ್ರೀಕೃಷ್ಣಾರ್ಘ್ಯ ಮಂತ್ರ ಚಂದ್ರಾರ್ಘ್ಯಮಂತ್ರ ಮತ್ತು ಚಂದ್ರೋಪಸ್ಥಾನಮಂತ್ರಗಳನ್ನು ತಿಳಿಸಿರುವರು.

ಕೇವಲ 16 ಶ್ಲೋಕಗಳ ಈ ಪುಟ್ಟಕೃತಿಯನ್ನು ತಮ್ಮ ಕೃಷ್ಣಾಮೃತಮಹಾರ್ಣವ ಮೊದಲಾದ ಇತರ ಗ್ರಂಥಗಳಲ್ಲಿ ಸೇರಿಸದೆ, ಹೀಗೆ ಪ್ರತ್ಯೇಕ ಕೃತಿಯನ್ನಾಗಿ ನೀಡುವ ಮೂಲಕ ಆಚಾರ್ಯರು ಕೃಷ್ಣಜಯಂತಿಯ ಬಗ್ಗೆ ಆಸ್ತಿಕರ ವಿಶೇಷಗಮನವನ್ನು ಸೆಳೆದಿರುವರು. ಹೀಗೆ ಪ್ರತಿಯೊಂದು ರೀತಿಯಲ್ಲೂ ಅವರ ಕಾರ್ಯವೈಖರಿ ಅಪೂರ್ವ.

**ತಂತ್ರಸಾರಸಂಗ್ರಹವು** ಮಂತ್ರಜಪ, ಧ್ಯಾನ, ಪೂಜೆ, ದೇವತಾಪ್ರತಿಷ್ಠೆ, ಜೀರ್ಣೋದ್ಧಾರ, ತತ್ತ್ವನ್ಯಾಸ, ಮಾತೃಕಾನ್ಯಾಸ ವಿವಿಧಮಂತ್ರಗಳು, ಧ್ಯಾನಶ್ಲೋಕಗಳು, ಉಪನ್ಯಾಸ, ಕರನ್ಯಾಸ ಮೊದಲಾದವುಗಳನ್ನು ನಿರೂಪಿಸುವ ಅಮೋಘ ತಂತ್ರಕೃತಿ.

**ಯತಿಪ್ರಣವಕಲ್ಪವು** ಸಂನ್ಯಾಸದೀಕ್ಷೆಯ ವಿಧಿವಿಧಾನಗಳನ್ನು ನಿರೂಪಿಸುವ

ಕೃತಿ. ಸಂನ್ಯಾಸವು ಆಶ್ರಮಗಳಲ್ಲಿ ಶ್ರೇಷ್ಠವೆಂದು ಮಾನ್ಯವಾಗಿದೆ. ಅದರಲ್ಲಿ ಭಗವಂತನ ವಿಭೂತಿರೂಪವಿದೆಯೆಂಬ ಮಾತು ಭಾಗವತದಲ್ಲಿ ಬಂದಿದೆ. ಜ್ಞಾನಕಾರ್ಯದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳುವ ವಿಶೇಷ ಅವಕಾಶ ಈ ಆಶ್ರಮದ ವೈಶಿಷ್ಟ್ಯ. ಸಕಲ ಭೌತಿಕ ವಿಷಯಗಳ ಮೇಲಿನ ಆಸೆ ಆಕಾಂಕ್ಷೆಗಳನ್ನು ತೊರೆದು ಭಗವದಾರಾಧನೆಗೆಂದೇ ಮೀಸಲಾಗಿ ಆ ಮೂಲಕ ಇತರ ಜನಗಳಿಗೆ ಅತ್ಯಂತ ಅಮೂಲ್ಯವಾದ ತಾತ್ತ್ವಿಕಜಾಗೃತಿಯನ್ನು ನೀಡುವಲ್ಲಿ ಈ ಆಶ್ರಮದ ಪಾತ್ರ ತುಂಬಾ ಹಿರಿದು. ರಾಜಮಹಾರಾಜರುಗಳಿಂದಲೂ ವಂದ್ಯವಾದ ಇಂತಹ ಆಶ್ರಮ ತಾತ್ತ್ವಿಕವಾಗಿ ಮಾತ್ರವಲ್ಲದೆ ಸಾಮಾಜಿಕವಾಗಿಯೂ ರಾಜಕೀಯ ವಾಗಿಯೂ ಜಗತ್ತನ್ನು ಎಚ್ಚರಿಸುವ ಶಕ್ತಿಶಾಲಿ ಆಶ್ರಮ. ಆದರೆ ಅದು ದಾರಿತಪ್ಪಿದಲ್ಲಿ, ಇಡೀ ಸಮಾಜಕ್ಕೆ ಆಘಾತವಾಗಿ ಧಾರ್ಮಿಕಶ್ರದ್ಧೆ, ತಾತ್ವಿಕಶ್ರದ್ಧೆಗಳು ನೆಲಕಚ್ಚುವ ಅಪಾಯವಿದೆ.

ಈ ಹಿನ್ನೆಲೆಯಲ್ಲಿ ಈ ಆಶ್ರಮದ ದೀಕ್ಷೆಯ ವಿಧಿ ವಿಧಾನಗಳ ಪರಿಜ್ಞಾನ ಅತ್ಯವಶ್ಯ.

ಸಂನ್ಯಾಸವೆಂದರೆ ಜೀವನದಲ್ಲಿ ಜುಗುಪ್ಸೆಯಲ್ಲ; ಹೆಂಡಿರುಮಕ್ಕಳನ್ನು ಸಾಕಲಾಗದ ಪಲಾಯನವಾದವಲ್ಲ; ಜನಮನ್ನಣೆಯ ಐಹಿಕ ಆಕರ್ಷಣೆಗಾಗಿ ನಾಲ್ಕುದಿನದ ಮಟ್ಟಿಗಷ್ಟೆ ಸ್ವೀಕರಿಸಬಲ್ಲ ತಾತ್ಕಾಲಿಕ ವ್ಯವಸ್ಥೆಯೂ ಅಲ್ಲ. ಕೇವಲ ಪೂಜೆ, ತೀರ್ಥಪ್ರಸಾದ ಮಂತ್ರಾಕ್ಷತೆಗಳ ವಿನಿಯೋಗವಷ್ಟೆ ಇದರ ಮುಖ್ಯ ಕೃತ್ಯವೂ ಅಲ್ಲ. ಇದು ಮೂಲತಃ ಭೌತಿಕ ಸುಖಗಳ ಇತಿಮಿತಿಯನ್ನು ಸರ್ವಾತ್ಮನಾ ಮನಗಂಡು ತಾತ್ತ್ವಿಕಸುಖಕ್ಕಾಗಿ ತನ್ನನ್ನು ಸಂಪೂರ್ಣವಾಗಿ ಶಾಶ್ವತವಾಗಿ ಭಗವಂತನಿಗೆ ಒಪ್ಪಿಸಿಕೊಳ್ಳುವ ಆಶ್ರಮ; ತ್ಯಾಗದ ಪರಾಕಾಷ್ಠೆ.

ವಿರಕ್ತಿಯೊಂದಿಗೆ ದೀಕ್ಷೆಯ ವಿಧಿವಿಧಾನಗಳೂ ಅಷ್ಟೇ ವಿಹಿತ. ಅದಕ್ಕಾಗಿ ಅದರಲ್ಲಿ ಸಿದ್ಧಿಪಡೆದ ಭಾಗವತಗುರುವು ಬೇಕೇ ಬೇಕು. ಮೊದಲಾದ ಅನೇಕ ಸೂಕ್ಷ್ಮವಿಚಾರಗಳನ್ನು ಪ್ರಾರಂಭದಲ್ಲೇ ಸೂಚಿಸಿರುವರು :

**ಸಮಿಚ್ಚರ್ವಾದಿಕಾನ್ ಹುತ್ವಾ ಸಮ್ಯಕ್ ಪುರುಷಸೂಕ್ತತಃ ।**
**ಸರ್ವೇಷಾಮಭಯಂ ದತ್ವಾ ವಿರಕ್ತಃ ಪ್ರವ್ರಜೇದ್ಧರಿಮ್ ॥**

ಪ್ರಣವೋಪದೇಶವನ್ನು ಗುರುಗಳು ನೀಡಬೇಕು. ಅಂತಹ ಪ್ರಣವಮಂತ್ರವನ್ನೂ ಧ್ಯೇಯಮೂರ್ತಿಯಾದ ನಾರಾಯಣನನ್ನೂ, ಅವನ ಅಕ್ಷರನಿಯಾಮಕ ರೂಪಗಳೊಂದಿಗೆ ಪ್ರತಿನಿತ್ಯವೂ ಜಪಿಸಬೇಕು ಎಂದು ತಿಳಿಸಿ ಧ್ಯೇಯರೂಪದ ವಿವರಗಳನ್ನು ಸಮಗ್ರ ನೀಡಿರುವರು.

ಪ್ರಣವ ಮಂತ್ರವನ್ನು ಪ್ರತಿನಿತ್ಯ ಕಡಿಮೆ ಎಂದರೂ ಎರಡುಸಾವಿರ ಬಾರಿ ಜಪಿಸಲೇಬೇಕು. ಮೂರುಸಾವಿರ ಜಪ ಮಧ್ಯಮ. ಅದಕ್ಕಿಂತ ಹೆಚ್ಚಿನದು ಉತ್ತಮ.

ದೀಕ್ಷೆಯ ನಂತರ ಗುರುವು ಶಪಥವನ್ನು ಬೋಧಿಸಬೇಕು :

"ಭಗವಂತನನ್ನು, ಅವನ ಭಕ್ತರನ್ನು ಎಂದೂ ತೊರೆಯೆನು, ಇತರ ದೇವತೆಗಳನ್ನು ಅವನಿಗೆ ಸಮರೆಂದಾಗಲಿ, ಅಭಿನ್ನರೆಂದಾಗಲಿ ತಿಳಿಯೆನು; ಹಾಗೆ ತಿಳಿಯುವ ಜನಗಳೊಂದಿಗೆ ಎಂದಿಗೂ ಬೆರೆಯೆನು. ದೈವನಿಂದಕರೊಂದಿಗೆ ಎಂದೂ ಸೇರೆನು."

ಪ್ರತಿನಿತ್ಯ ಭಗವತ್ಪೂಜಾದಿಗಳಲ್ಲಿ ನಿರತನಾಗಿ, ವೇದಾದಿಸಚ್ಛಾಸ್ತ್ರಗಳ ಅವಲೋಕನದಲ್ಲೇ ಮಗ್ನನಾಗಬೇಕು. ಅವುಗಳನ್ನು ತಾನು ಬಲ್ಲವರಿಂದ ಶ್ರವಣಮಾಡಬೇಕು. ಅರ್ಹರಿಗೆ ಉಪದೇಶಿಸಬೇಕು. ಎಲ್ಲರಿಗೂ ಸೂಕ್ತ ಆಧಾರಗಳೊಂದಿಗೆ ವಿಷ್ಣುಸರ್ವೋತ್ತಮತ್ವವನ್ನೇ ಸದಾ ಪ್ರತಿಪಾದಿಸಬೇಕು.

ಪ್ರಧಾನವಾಗಿ ಒಂಭತ್ತು ಜನರಿಗೆ ಮತ್ತು ಇತರ ಅಸಂಖ್ಯ ಜನರಿಗೆ ಪ್ರಣವದೀಕ್ಷೆಯನ್ನು ನೀಡಿದವರ ಕೃತಿ ಎಂಬ ದೃಷ್ಟಿಯಿಂದ ಇದರ ಮಹತ್ತ್ವ ಅಪೂರ್ವ. ಈ ಪರಂಪರೆಯಲ್ಲಿ ನೂರಾರು ಯತಿಗಳು ಆಗಿರುವರು. ಶ್ರೀ ಜಯತೀರ್ಥರು, ಶ್ರೀವ್ಯಾಸತೀರ್ಥರು, ಶ್ರೀವಾದಿರಾಜರು, ಶ್ರೀ ರಘೂತ್ತಮರು, ಶ್ರೀ ರಾಘವೇಂದ್ರರಂತಹ ಮಹನೀಯರು ಆಗಿರುವರು ಎಂಬುದನ್ನು ಗಮನಿಸಿದಾಗ ಈ ಯತಿಪ್ರಣವಕಲ್ಪದ ಮಹತ್ತ್ವ ಅರಿವಾಗುವುದು.

# ಸದಾಚಾರ ಸ್ಮೃತಿ

ಸದಾಚಾರಸ್ಮೃತಿಯು ಪ್ರಧಾನವಾಗಿ ನಿಷ್ಕಾಮಕರ್ಮದ ಮಹತ್ತ್ವ ಮತ್ತು ದೈನಂದಿನ ಸದಾಚಾರದ ವಿಧಿಯನ್ನು ನಿರೂಪಿಸುವ ಅಪೂರ್ವಕೃತಿ.

ಪ್ರತಿನಿತ್ಯ ಹರಿಸ್ಮರಣ ಮೂಲಕ ಸಕಾಲಕ್ಕೆ ಎಚ್ಚರಗೊಳ್ಳಬೇಕು. ಅನಂತರ ಶೌಚಪೂರೈಸಿ ದಂತಧಾವನವನ್ನು ಮಾಡಿಕೊಳ್ಳಬೇಕು. ಆಚಮನ ಮಾಡಿ ವಿಧ್ಯುಕ್ತ ರೀತಿಯಲ್ಲಿ ಸ್ನಾನ ಮಾಡಬೇಕು. "ಉದ್ಧೃತಾಽಸಿ ವರಾಹೇಣ" ಎಂಬ ಮಂತ್ರದಿಂದ ಮೈಗೆ ಮೃತ್ತಿಕೆಯನ್ನು ಲೇಪಿಸಿಕೊಂಡು ವಾಸುದೇವದ್ವಾದಶಾಕ್ಷರ ನಾರಾಯಣಾಷ್ಟಾಕ್ಷರ ಮತ್ತು ಕೃಷ್ಣಷಡಕ್ಷರ ಮಂತ್ರಗಳಿಂದ ಮೂರುಬಾರಿ

ಮುಳುಗುಹಾಕಬೇಕು. ಅನಂತರ "ಆಪೋ ಹಿ ಷ್ಠಾ" ಮೊದಲಾದ ಮಂತ್ರಗಳಿಂದ ಜಲವನ್ನು ಪ್ರೋಕ್ಷಿಸಿಕೊಂಡು ಮತ್ತೊಮ್ಮೆ ಮೃತ್ತಿಕೆಯನ್ನು ಲೇಪಿಸಿಕೊಂಡು ಪುನಃ ಮೂರು ಬಾರಿ ಮುಳುಗುಹಾಕಬೇಕು. ಅನಂತರ ನೀರಿನಲ್ಲಿ ಮುಳುಗಿಕೊಂಡಿದ್ದೆ ಜಗಜ್ಜನಕನಾದ ನಾರಾಯಣನನ್ನು ಸ್ಮರಿಸುತ್ತಾ ಅಘಮರ್ಷಣ ಸೂಕ್ತವನ್ನು ಮೂರು ಬಾರಿ ಜಪಿಸಬೇಕು. ಆಮೇಲೆ ಪ್ರಣವವನ್ನು ಜಪಿಸುತ್ತಾ ನೀರಿನಿಂದ ಮೇಲೇಳಬೇಕು. ಪುರುಷಸೂಕ್ತದ ಮಂತ್ರಗಳನ್ನು ಪಠಿಸುತ್ತ ದೇಹದಲ್ಲಿ ನೆಲೆಸಿರುವ ಶ್ರೀಹರಿಯನ್ನು ಸ್ಮರಿಸುತ್ತಾ ನೀರನ್ನು ಪ್ರೋಕ್ಷಿಸಿಕೊಳ್ಳಬೇಕು. ಅನಂತರ ಒಣ ಬಟ್ಟೆಯನ್ನುಟ್ಟು ಆಚಮನ ಮಾಡಿ ಸೂರ್ಯಾಂತರ್ಗತ ಭಗವಂತನನ್ನು ಚಿಂತಿಸುತ್ತಾ ಗಾಯತ್ರೀ ಮಂತ್ರದಿಂದ ಅಭಿಮಂತ್ರಿತವಾದ ಜಲದಿಂದ ಸೂರ್ಯನಿಗೆ ಅರ್ಘ್ಯ ಸಮರ್ಪಿಸಬೇಕು. ಆಮೇಲೆ ಆತ್ಮಪ್ರದಕ್ಷಿಣೆ ಮಾಡಿಕೊಂಡು ದೇವತೆಗಳು ಮೊದಲಾದವರಿಗೆ ತರ್ಪಣ ನೀಡಬೇಕು. ಆಮೇಲೆ ಸ್ನಾನಕಾಲಕ್ಕೆ ಉಟ್ಟಿದ್ದ ವಸ್ತ್ರವನ್ನು ಹಿಂಡಿ ಒಣಹಾಕಬೇಕು. ಸೂರ್ಯಮಂಡಲ ಮಧ್ಯವರ್ತಿಯಾದ ವಿಷ್ಣುವನ್ನು ಧ್ಯಾನಿಸುತ್ತಾ ಗಾಯತ್ರೀಮಂತ್ರವನ್ನು ಜಪಿಸಬೇಕು. ಸಾವಿರ ಜಪ ಉತ್ತಮ, ನೂರುಸಲ ಮಧ್ಯಮ, ಹತ್ತು ಸಲ ಜಪಿಸುವುದು ಅಧಮ. ಜಪವನ್ನು ಸೂರ್ಯ ಉದಯಿಸುವವರೆಗೂ ನಿಂತೇ ಮಾಡಬೇಕು. ಅನಂತರ ಬೇಕಿದ್ದರೆ ಕುಳಿತೂ ಜಪಿಸಬಹುದು. ಸಾಯಂಕಾಲದ ಜಪವನ್ನು ಮಾತ್ರ ಕುಳಿತೇ ಮಾಡಬೇಕು. ಜಪಕಾಲದಲ್ಲಿ ಮೌನದಿಂದಿರಬೇಕು.

ಗಾಯತ್ರೀ ಮಂತ್ರದ ಮೂರರಷ್ಟು ನಾರಾಯಣಾಷ್ಟಾಕ್ಷರಮಂತ್ರವನ್ನು ಜಪಿಸಬೇಕು. ದೇವತೆಗಳನ್ನು ವಿಪ್ರರನ್ನು, ಗುರುಗಳನ್ನು ವಂದಿಸಿ ಬ್ರಹ್ಮಯಜ್ಞವನ್ನು ಪೂರೈಸಿ ಪಾಠಪ್ರವಚನಕ್ಕೆ ತೊಡಗಬೇಕು. ವರ್ಣಾಶ್ರಮಕ್ಕೆ ವಿಹಿತವಾದ ವೃತ್ತಿಯಿಂದ ಪೂಜಾಸಾಧನಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಮತ್ತೊಮ್ಮೆ ಸ್ನಾನ ಮಾಡಿ ವೇದ ಮತ್ತು ತಂತ್ರಶಾಸ್ತ್ರಗಳಿಗೆ ಅನುಸಾರವಾಗಿ ದೇವದೇವನಾದ ವಿಷ್ಣುವನ್ನು ಪೂಜಿಸಬೇಕು. ವೈಶ್ವದೇವ ಮತ್ತು ಬಲಿಹರಣಗಳನ್ನು ತಪ್ಪದೇ ಮಾಡಬೇಕು. ಭಗವಂತನಿಗೆ ಸಮರ್ಪಿಸಿದ ನೈವೇದ್ಯವನ್ನು ಭೃತ್ಯರು ಮತ್ತು ಅತಿಥಿಗಳೊಂದಿಗೆ ಕೂಡಿಕೊಂಡು ಭಗವಂತನನ್ನು ಚಿಂತಿಸುತ್ತಾ ಭುಂಜಿಸಬೇಕು. ಭೋಜನ ಪೂರೈಸಿದ ಮೇಲೆ ಅಷ್ಟಾಕ್ಷರಮಂತ್ರದಿಂದ ಉದರವನ್ನು ಅಭಿಮಂತ್ರಿಸಿಕೊಳ್ಳಬೇಕು. ಹಗಲಿನ ಉಳಿದ ಭಾಗವನ್ನು ವೇದಶಾಸ್ತ್ರಗಳ ಚಿಂತನೆಯಲ್ಲಿ ಕಳೆಯಬೇಕು. ಅನಂತರ ಸಾಯಂಸಂಧ್ಯಾವಂದನೆಯನ್ನು ಪೂರೈಸಿ ರಾತ್ರಿ ಒಂದು ಯಾಮ ಕಳೆದ ಮೇಲೆಯೇ ಮಲಗಬೇಕು. ಮಧ್ಯ ಮಧ್ಯ

ಎಚ್ಚರಮಾಡಿಕೊಂಡು ಅನೇಕ ತೆರನಾಗಿ ಶ್ರೀಹರಿಯನ್ನು ಸ್ಮರಿಸುತ್ತಿರಬೇಕು.

ಇವುಗಳಲ್ಲಿ ವೈಶ್ವದೇವ ಬಲಿಹರಣ ಇವುಗಳನ್ನು ಹೊರತು ಉಳಿದ ನಿತ್ಯಕರ್ಮಗಳು ಬ್ರಹ್ಮಚಾರಿಗಳಿಗೂ, ಸಂನ್ಯಾಸಿಗಳಿಗೂ ವಿಹಿತ. ಅಗ್ನಿಕಾರ್ಯ ವಟುಗಳ ಪಾಲಿನ ವಿಶಿಷ್ಟಕರ್ಮ.

ಸಂನ್ಯಾಸಿಗಳಿಗೆ ಹೋಮಾದಿಗಳ ಪ್ರಸಕ್ತಿಯೇ ಇಲ್ಲ. ಅವರಿಗೆ ವಿಹಿತವಾದದ್ದು ಜಪ, ತರ್ಪಣ, ಪೂಜಾ, ಪಾಠಪ್ರವಚನಗಳು ಮಾತ್ರ.

ಒಟ್ಟಾಗಿ ಸದಾಚಾರ ಸಕಲವರ್ಣಾಶ್ರಮಗಳಿಗೂ ವಿಹಿತ. ರಮಾಬ್ರಹ್ಮಾದಿ ಸಕಲದೇವತೆಗಳನ್ನೂ ಶ್ರೀಹರಿಯ ಪರಿವಾರವೆಂಬ ಭಾವದಿಂದ ತಾರತಮ್ಯ ಕ್ರಮದಲ್ಲಿ ಸಕಲರೂ ಆರಾಧಿಸಲೇಬೇಕು.

ಇದು ಸದಾಚಾರಸ್ಮೃತಿಯಲ್ಲಿನ ವಿಷಯಗಳ ಸಂಗ್ರಹ. ವಿಷ್ಣುಸರ್ವೋತ್ತಮತ್ವ, ದೇವತಾತಾರತಮ್ಯ, ಸದಾ ವಿಷ್ಣುಸ್ಮರಣೆಯ ಆವಶ್ಯಕತೆ, ಭಕ್ತಿಯ ಹಿರಿಮೆ ಮತ್ತು ಕೃಷ್ಣಾರ್ಪಣಭಾವದ ಮಹತ್ತ್ವಗಳನ್ನು ಸಮರ್ಥಿಸಲು ಗೀತೆ, ಮಹಾಭಾರತ ಮೊದಲಾದವುಗಳಿಂದ ಪ್ರಮಾಣವಚನಗಳನ್ನು ನೀಡಿರುವರು.

ಸದಾಚಾರಸ್ಮೃತಿಗೆ ವೈಶ್ವನಾಥಿನಾರಾಯಣಾಚಾರ್ಯರು, ತರಂಗಿಣೀ ರಾಮಾಚಾರ್ಯರು, ಸ್ಮೃತಿಮುಕ್ತಾವಲೀ ಕೃಷ್ಣಾಚಾರ್ಯರು, ಬಿದರಹಳ್ಳಿ ಶ್ರೀನಿವಾಸ ತೀರ್ಥರು, ಆಯೀ ನರಹರಿ ಆಚಾರ್ಯರು, ಮೊದಲಾದ ಅನೇಕರು ವ್ಯಾಖ್ಯಾನ ರಚಿಸಿರುವರು. ವಿಶ್ವನಾಥಸೂರಿಗಳು ಇದರ ಮೇಲೆ ರಚಿಸಿರುವ ಅಪೂರ್ವ ವ್ಯಾಖ್ಯಾನವೊಂದು ಉಪಲಬ್ಧವಿದೆ. ಅದು ಮೊದಲ ಹದಿನಾಲ್ಕು ಶ್ಲೋಕಗಳಿಗೆ ಮಾತ್ರ ದೊರೆತಿದ್ದು, ಅಷ್ಟಕ್ಕೇ ಅದರ ವ್ಯಾಪ್ತಿ 146 ಪತ್ರಗಳಷ್ಟು ವಿಸ್ತಾರವಾಗಿದೆ.

# ಕೃಷ್ಣಾಮೃತ ಮಹಾರ್ಣವ

ಕೃಷ್ಣಾಮೃತಮಹಾರ್ಣವವು ಆಚಾರಕ್ಕೆ ಸಂಬಂಧಿಸಿದ ಮತ್ತೊಂದು ಕೃತಿ. ಇದನ್ನು ವೈದ್ಯನಾಥೇಶ್ವರವೆಂಬುದಾಗಿ ಪ್ರಸಿದ್ಧವಾಗಿರುವ ಕೊಕ್ಕಡ ಎಂಬ ಊರಿನಲ್ಲಿ ಯಡಪಾಡಿತ್ತಾಯ ಎಂಬ ಭಕ್ತನ ಪ್ರಾರ್ಥನೆಯಂತೆ ಶ್ರೀಮದಾಚಾರ್ಯರು ರಚಿಸಿದರೆಂಬ ಮಾತು ಸುಮಧ್ವವಿಜಯ ಮತ್ತು ಅದರ ವ್ಯಾಖ್ಯಾನಗಳಲ್ಲಿ ಬಂದಿದೆ:

**ಕ್ಷೇತ್ರಾಗ್ರ್ಯಂ ತ್ರಿಭುವನವೈಧನಾಥನಾಥಂ**
**ಪ್ರಸ್ಥಾಯ ಪ್ರಚುರತರಾಂತರಃ ಪ್ರಭಾವೀ ।**
**ಶ್ರೀಕೃಷ್ಣಾಮೃತಪರಮಾರ್ಣವಾಭಿಧಾನಂ**
**ಚಕ್ರೇ ಸದ್ವಚನತತಿಂ ಸ್ವಭಕ್ತಭೂತ್ಯೈ ॥** -16/40

ಅರ್ಜುನನೊಬ್ಬನಿಗೆ ಶ್ರೀಕೃಷ್ಣ ಉಪದೇಶಿಸಿದ ಗೀತೆ ಸಕಲಸುಜನರ ಉದ್ಧಾರದ ಮಂಗಲಗೀತೆಯಾದಂತೆ, ಶ್ರೀ ಕೃಷ್ಣಭಕ್ತರಾದ ಶ್ರೀಮದಾಚಾರ್ಯರು ಯಡಪಾಡಿತ್ತಾಯ ಎಂಬ ಒಬ್ಬ ಭಕ್ತನಿಗೆ ಉಪದೇಶಿಸಿದ ಕೃಷ್ಣಾಮೃತಮಹಾರ್ಣವವು ಸಕಲ ಸದ್ಭಕ್ತರಿಗೆ ನೀಡಿದ ಅಧ್ಯಾತ್ಮಾಮೃತತರಂಗಿಣಿಯಾಗಿದೆ.

**ತಾಪತ್ರಯೇಣ ಸಂತಪ್ತಂ ಯದೇತದಖಿಲಂ ಜಗತ್ ।**
**ವಕ್ಷ್ಯಾಮಿ ಶಾಂತಯೇ ತಸ್ಯ ಕೃಷ್ಣಾಮೃತಮಹಾರ್ಣವಮ್ ॥**
**ಸಂಸಾರವಿಷಪಾನೇನ ಯೇ ಮೃತಾಃ ಪ್ರಾಣಿನೋ ಭುವಿ ।**
**ಅಮೃತಾಯ ಸ್ಮೃತಸ್ತೇಷಾಂ ಕೃಷ್ಣಾಮೃತಮಹಾರ್ಣವಃ ॥**

ಎಂಬ ಇದರ ಮಾತುಗಳಲ್ಲಿ ಇದರ ಮಹತ್ತ್ವ ಪ್ರತಿಪಾದಿತವಾಗಿದೆ.

ಅರ್ಚನೆ, ಸ್ಮರಣೆ, ಧ್ಯಾನ, ಕೀರ್ತನ, ಕಥನ ಮತ್ತು ಶ್ರವಣಗಳಿಗೆ ಭಗವಂತ ಒಲಿದು ಮುಕ್ತಿ ನೀಡುವನು ಎಂಬ ಸಂದೇಶದೊಂದಿಗೆ ಪ್ರಾರಂಭವಾಗುವ ಈ ಕೃತಿಯಲ್ಲಿ ಮುಂದೆ ಈ ಆರುಸಾಧನಗಳ ಮಹತ್ತ್ವ ಮತ್ತು ವಿಧಿವಿಧಾನಗಳು ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿತವಾಗಿವೆ.

ಪ್ರಧಾನವಾಗಿ ಇಲ್ಲಿಯ ಶ್ಲೋಕಗಳು ವಿಷ್ಣುಪುರಾಣ ಮೊದಲಾದ ಆಕರಗ್ರಂಥಗಳ ಶ್ಲೋಕಗಳ ಸಂಕಲನ; ಸುಮಧ್ವವಿಜಯ ಹೇಳಿರುವಂತೆ 'ಸದ್ವಚನತತಿ', ನಾಲ್ಕಾರು ಶ್ಲೋಕಗಳನ್ನು ಬಿಟ್ಟರೆ, ಇಲ್ಲಿಯ ಉಳಿದ ಶ್ಲೋಕಗಳೆಲ್ಲ ಪ್ರಧಾನವಾಗಿ ಪ್ರಮಾಣವಚನಗಳೇ ಆಗಿವೆ. ಪ್ರಮಾಣವಚನಗಳನ್ನು ಉದಾಹರಿಸುವಾಗ 'ಶಂಕರಃ', 'ಯಮಃ', 'ಪುಲಸ್ತ್ಯಃ', 'ಪುಲಹಃ' ಮೊದಲಾಗಿ ಆ ವಚನ ನುಡಿದ ಮಹನೀಯರ ಹೆಸರುಗಳನ್ನೂ ಉಲ್ಲೇಖಿಸಿರುವರು. ಇದರಿಂದಾಗಿ ವಿಭಿನ್ನಕೃತಿಗಳ ಹೃದಯ ಎಂಬುದರ ಜೊತೆಗೆ, ವಿಭಿನ್ನಜ್ಞಾನಿಗಳ ಒಟ್ಟು ತೀರ್ಮಾನ (ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ) ಎಂಬ ಮತ್ತೊಂದು ರೀತಿಯ ಆಧಾರದಿಂದಲೂ ಹರಿಸರ್ವೋತ್ತಮತ್ವಾದಿ ಪ್ರಮೇಯಗಳು ನಿರೂಪಿತವಾದಂತಾಗುತ್ತದೆ.

ದೇವಪೂಜೆ ಜೀವನದ ಪ್ರಧಾನ ಫಲಶ್ರುತಿ, ವಿಷ್ಣುವು ಸಕಲದೇವೋತ್ತಮ

ನಾದ್ದರಿಂದ ಅವನ ಆರಾಧನೆ ಸಕಲದೇವತೆಗಳ ಒಲುಮೆಗೂ ಸಾಧನ. ಕಣ್ಣು ಕಿವಿ ಮೊದಲಾದ ಇಂದ್ರಿಯಗಳ ಸಾರ್ಥಕ್ಯ ದೇವಪೂಜೆ ನಡೆಸಿದಾಗಲೇ, ಹರಿಯ ಆರಾಧನೆಗೆ ವಿಶೇಷ ದ್ರವ್ಯಗಳೇನೂ ಬೇಕಿಲ್ಲ; ಬೇರೇನೂ ಇಲ್ಲವಾದಾಗ ಕೇವಲ ಜಲದಿಂದಲೂ ಭಗವಂತನು ಪ್ರೀತನಾಗುವನು; ಸಾಲಿಗ್ರಾಮ, ಚಕ್ರಾಂಕಿತಗಳನ್ನು ಅವಶ್ಯ ಪೂಜಿಸಲೇ ಬೇಕು. ಇವುಗಳು ಇರುವ ಸ್ಥಳವು ಮಾತ್ರವಲ್ಲದೆ ಸುತ್ತಲಿನ ಯೋಜನಗಟ್ಟಲೆ ಪ್ರದೇಶವೂ ಕ್ಷೇತ್ರವೆನ್ನಿಸುವುದು. ಪ್ರತಿಯೊಬ್ಬನೂ ತಾನೇ ದೇವಪೂಜೆ ಮಾಡಿ ಸಿದ್ಧಪಡಿಸುವ ತೀರ್ಥ ಗಂಗಾದಿಸಕಲತೀರ್ಥಗಳಿಗಿಂತ ಮಿಗಿಲು; ಪ್ರದಕ್ಷಿಣೆ, ನಮಸ್ಕಾರಗಳು ಪೂಜೆಯ ಅಂಗಗಳು. ಪ್ರದಕ್ಷಿಣೆಯ ಹೆಜ್ಜೆ ಹೆಜ್ಜೆಗೂ ಜನ್ಮಾಂತರಗಳ ಪಾಪಗಳೂ ನಶಿಸುತ್ತವೆ. ಒಂದೊಂದು ನಮಸ್ಕಾರವೂ ಅತಿ ಕಡಿಮೆ ಎಂದರೂ ಹತ್ತು ಅಶ್ವಮೇಧಯಾಗಗಳ ಪುಣ್ಯ ನೀಡುತ್ತದೆ. ಪ್ರತಿದಿನ ಸಾಲಿಗ್ರಾಮ ಸ್ಪರ್ಶಿಸಿ ಪೂಜಿಸುವವನ ಕೈಹಿಡಿದು ಉದ್ಧರಿಸಲು ಇಂದ್ರಾದಿದೇವತೆಗಳು ಕಾಯುತ್ತಿರುತ್ತಾರೆ. ದೇವಪೂಜೆಯನ್ನು ವಿಧ್ಯುಕ್ತಕ್ರಮದಲ್ಲಿ ಶ್ರದ್ಧೆಯಿಂದ ಮಾಡಿದರೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳಲ್ಲಿ ಯಾವುದೂ ದುರ್ಲಭವಲ್ಲ.

ಭಗವಂತನ ಒಂದೊಂದು ನಾಮದ ಉಚ್ಚಾರಣೆಯೂ ಅತ್ಯಂತ ತಾರಕ; ಸಕಲ ಪಾಪನಾಶಕ. ಪೂಜೆಯ ಅನಂತರ ಭಗವಂತನಿಗೆ ಸಮರ್ಪಿಸಿದ ಧೂಪ, ದೀಪ, ಮಂಗಳಾರತಿ, ನೈವೇದ್ಯ ಮೊದಲಾಗಿ ಸಕಲವನ್ನೂ ಶ್ರದ್ಧೆಯಿಂದ ಸ್ವೀಕರಿಸಬೇಕು. ವಿಷ್ಣು ನೈವೇದ್ಯಶೇಷದ ಕಣಕಣವೂ ಚಾಂದ್ರಾಯಣವ್ರತಕ್ಕಿಂತ ಹೆಚ್ಚಿನ ಪುಣ್ಯವನ್ನು ನೀಡುವುದು. ಇತರ ದೇವತೆಗಳ ನೈವೇದ್ಯ ಎಂದೂ ಹೀಗೆ ಗ್ರಾಹ್ಯವಲ್ಲ. ವಿಷ್ಣುಪೂಜೆ, ವಿಷ್ಣುಸ್ಮರಣೆಗಳಂತೆ, ವಿಷ್ಣುಧ್ಯಾನವೂ ಅತ್ಯಂತ ಪಾವನ. ವಿಷ್ಣುವನ್ನು ಬಿಟ್ಟು ಇತರ ದೇವತೆಗಳನ್ನು ಸರ್ವೋತ್ತಮರೆಂದು ಆರಾಧಿಸುವವನು ಗಂಗೆಯ ತೀರದಲ್ಲಿ, ಜಲಕ್ಕಾಗಿ ಬಾವಿ ತೋಡುವ ಮೂರ್ಖನೇ ಸರಿ. ಗೋಪೀಚಂದನಧಾರಣೆ ಅತ್ಯಂತ ಪಾವನ; ಅದನ್ನು ಧರಿಸದೆ ಮಾಡುವ ಜಪ, ಧ್ಯಾನ, ತಪಸ್ಸು, ಪಾಠ, ಪ್ರವಚನ, ಬ್ರಹ್ಮಯಜ್ಞ, ಪಿತೃಕಾರ್ಯ ಮೊದಲಾದ ಎಲ್ಲಾ ಸತ್ಕಾರ್ಯಗಳೂ ನಿಷ್ಫಲ. ಗೋಪೀಚಂದನ ಧರಿಸಿದವನು ನೋಡುವ ವಸ್ತುಗಳೂ ಪಾವನ. ಗೋಪೀಚಂದನಧಾರಣೆಯಂತೆ ಗೋಪೀಚಂದನದ ದಾನವೂ ಅತ್ಯಂತ ವಿಹಿತ. ಊರ್ಧ್ವಪುಂಡ್ರಧಾರಣೆ ವಿಹಿತ; ತಿರ್ಯಕ್ಪುಂಡ್ರ ಸರ್ವಥಾ ನಿಷಿದ್ಧ.

ಏಕಾದಶ್ಯುಪವಾಸವು ಪ್ರತಿಯೊಬ್ಬ ಸ್ತ್ರೀಪುರುಷರಿಗೂ, ಸಕಲ ವರ್ಣಾಶ್ರಮದವರಿಗೂ, ಅಷ್ಟೇಕೆ ಒಟ್ಟಾಗಿ ಸಕಲ ಮಾನವರಿಗೂ ವಿಹಿತವಾಗಿರುವ

ಕಡ್ಡಾಯ ವ್ರತ. ಇದರ ಆಚರಣೆಯಿಂದ ದೇಹದೊಳಗಿನ ಸಕಲದೋಷಗಳು ನಾಶವಾಗುವವು; ಏಕಾದಶೇಂದ್ರಿಯಗಳಿಂದ ಮಾಡಿದ ಸಕಲಪಾಪಗಳೂ ಏಕಾದಶ್ಯುಪವಾಸದಿಂದ ಪರಿಹಾರವಾಗುವವು; ಇದಕ್ಕಿಂತ ಮಿಗಿಲಾದ ಮತ್ತೊಂದು ವ್ರತವೇ ಇಲ್ಲ. ಗಂಗಾದಿ ಸಕಲತೀರ್ಥಗಳೂ, ಕುರುಕ್ಷೇತ್ರಾದಿ ಸಕಲ ಕ್ಷೇತ್ರಗಳು, ಅಶ್ವಮೇಧಾದಿ ಸಕಲಯಾಗಗಳೂ ಏಕಾದಶ್ಯುಪವಾಸದ ಹದಿನಾರನೆಯ ಒಂದಂಶಕ್ಕೂ ಸಾಟಿಯೆನ್ನಿಸವು. ಇದನ್ನು ಆಚರಿಸುವವರಿಗೆ ಯಮಲೋಕದ ಭಯವಿಲ್ಲ; ಶನಿ ಮೊದಲಾದ ಗ್ರಹಗಳ ದೋಷವೂ ಬಾಧಿಸುವುದಿಲ್ಲ. ಏಕಾದಶಿಯಂದು ಆಹಾರ ಸ್ವೀಕರಿಸುವುದು ಸಕಲ ಮಹಾಪಾಪಗಳಿಗೂ ಸಮನಾಗುವ ಮಹಾಪಾತಕ; ಎಲ್ಲ ಪಾಪಗಳೂ ಅಂದು ತಿನ್ನುವ ಆಹಾರದಲ್ಲಿ ನೆಲೆಸಿರುವುವು. ಆದ್ದರಿಂದ ಅಂದು ಸಂಪೂರ್ಣ ಉಪವಾಸವನ್ನೇ ಆಚರಿಸಬೇಕು. ಏಕಾದಶಿಯನ್ನು ತಾನು ಆಚರಿಸುವಂತೆ, ಇತರರಿಗೂ ಆಚರಿಸುವಂತೆ ತಿಳಿಸಿಕೊಡಬೇಕು; ಅದರಿಂದ ಹನ್ನೆರಡು ಏಕಾದಶೀವ್ರತದ ಪುಣ್ಯವು ಹೆಚ್ಚಾಗಿ ಲಭಿಸುವುದು.

ಹರಿದಿನದ ಉಪವಾಸದಂತೆ ದ್ವಾದಶೀಪಾರಣೆಯೂ ವಿಹಿತ. ಸಾಧನೆ ಇದ್ದಾಗ ಅಷ್ಟರಲ್ಲಿಯೇ ಪಾರಣೆ ವಿಹಿತ; ಹರಿವಾಸರವಿದ್ದಾಗ ಅದು ಕಳೆದ ಮೇಲೆಯೇ ಪಾರಣೆ. ಸಾಧನೀದ್ವಾದಶಿಯನ್ನು ಆಚರಿಸದಿದ್ದಲ್ಲಿ ಹನ್ನೆರಡು ಏಕಾದಶಿಗಳ ಪುಣ್ಯ ನಾಶವಾಗುವುದು. ಏಕಾದಶೀಉಪವಾಸದಂತೆ, ಶ್ರಾವಣದ್ವಾದಶೀ, ಅತಿರಕ್ತ ದ್ವಾದಶಿಗಳಂದು ಸಹ ಉಪವಾಸವನ್ನು ಮಾಡಲೇಬೇಕು. ಶ್ರವಣದ್ವಾದಶೀ ಆಚರಿಸದಿದ್ದರೆ ಐದುವರ್ಷಗಳ ಸಕಲಪುಣ್ಯಗಳು ನಿಷ್ಫಲ. ಅತಿರಿಕ್ತದ್ವಾದಶೀ ಆಚರಿಸದಿದ್ದಲ್ಲಿ ಹನ್ನೆರಡು ಏಕಾದಶ್ಯುಪವಾಸಗಳ ಪುಣ್ಯನಾಶ. ಏಕಾದಶೀ ಉಪವಾಸ ಮಾಡದಿದ್ದ ತಂದೆ, ತಾಯಿ, ಅಣ್ಣ-ತಮ್ಮಂದಿರು, ಅಕ್ಕ-ತಂಗಿಯರು, ಮಕ್ಕಳು ಮೊದಲಾಗಿ ಎಲ್ಲರೂ ನಿಂದ್ಯರೇ ಸರಿ.

ಏಕಾದಶಿಯು ದಶಮೀವಿದ್ಧವಾಗಿದ್ದಾಗ, ಎಂದರೆ ಏಕಾದಶಿಯಂದು ಅರುಣೋದಯಕಾಲದಲ್ಲಿ ದಶಮೀತಿಥಿಯ ಸಂಪರ್ಕವಿದ್ದಾಗ, ಉಪವಾಸ ಮಾಡುವುದು ವಿಹಿತವಲ್ಲ. ಅದರಿಂದ ಪುತ್ರರು, ಐಶ್ವರ್ಯಾದಿಗಳು ನಾಶವಾಗುವವು. ದಶಮೀವಿದ್ಧವಾದಾಗ ಏಕಾದಶಿಯಂದು ಉಪವಾಸ ಆಚರಿಸದೆ, ದ್ವಾದಶಿಯಂದು ಉಪವಾಸ ಆಚರಿಸಿ, ತ್ರಯೋದಶಿಯಂದು ಪಾರಣಮಾಡಬೇಕು. ವೇಧದ ವಿಚಾರದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯ ಉಂಟಾದಾಗ, ಆ ಬಾರಿ ಅಂತಹ ಏಕಾದಶಿಯಂದು ಉಪವಾಸ ಮಾಡದೇ ದ್ವಾದಶಿಯಂದು ಉಪವಾಸ ಮಾಡುವುದೇ ವಿಹಿತ.

ಏಕಾದಶಿಯು ಮೂಲವ್ರತ; ಇದನ್ನು ಆಚರಿಸದೆ ಬೇರಾವ ವಿಹಿತವ್ರತ ಮಾಡಿದರೂ ನಿಷ್ಫಲ. ನಿಷಿದ್ಧವ್ರತಗಳನ್ನಂತೂ ಆಚರಿಸಲೇಕೂಡದು. (ಅನಂತವ್ರತ, ವರಮಹಾಲಕ್ಷ್ಮೀವ್ರತ) ಮೊದಲಾದ ವಿಹಿತವ್ರತಗಳು ಫಲಕಾರಿಯಾಗುವುದು ಸಹ ಏಕಾದಶಿಯನ್ನು ತಪ್ಪದೆ ಆಚರಿಸಿದಾಗ ಮಾತ್ರ. ಭಗವದಾರಾಧನೆಗೆ ಪುರುಷರಂತೆ, ಸ್ತ್ರೀಯರೂ ಯಥೋಚಿತವಾಗಿ ಅರ್ಹರೇ ಆಗಿರುವರು.

ಹೀಗೆ ಕೃಷ್ಣಾಮೃತಮಹಾರ್ಣವವು ಸದಾಚಾರದ ಸಮಗ್ರಸ್ವರೂಪವನ್ನೇ ತೆರೆದಿಡುವ ಅಪೂರ್ವಕೃತಿ. ಏಕಾದಶ್ಯುಪವಾಸದ ವಿಧಿವಿಧಾನಗಳ ನಿರೂಪಣೆಗೆ ಐವತ್ತಕ್ಕಿಂತ ಹೆಚ್ಚು ಶ್ಲೋಕಗಳು ಮೀಸಲಾಗಿವೆ. ಶ್ರೀಮದಾಚಾರ್ಯರೇ ತಿಳಿಸಿರುವಂತೆ ಇದು ಅಮೃತಮಹಾರ್ಣವ; ಇಂದ್ರಜಿತ್‌ನ ಬಾಣಗಳಿಂದ ಮೃತರಾಗಿದ್ದ ಕಪಿಗಳನ್ನು ಮರಳಿ ಬದುಕಿಸಲು ಹನೂಮದ್ರೂಪದಿಂದ ಸಂಜೀವನ ತಂದಿತ್ತ ಶ್ರೀವಾಯುದೇವರು ಇಂದ್ರಿಯಗಳ ಸೆಳೆತಕ್ಕೆ ಸಿಲುಕಿ ಮೃತಪ್ರಾಯರಾದ ಜನರನ್ನು ಮರಳಿ ಬದುಕಿಸಲು ಶ್ರೀಮಧ್ವರೂಪದಿಂದ ಹೀಗೆ ಕೃಷ್ಣಾಮೃತಮಹಾರ್ಣವವನ್ನು ಒದಗಿಸಿರುವರು ಎಂದು ತಿಳಿಯಬೇಕು.

ಪ್ರಧಾನವಾಗಿ ಅನುಷ್ಟುಪ್ ಶ್ಲೋಕಗಳನ್ನು ಹೊಂದಿರುವ ಈ ಕೃತಿ, ಭಾಷೆಯಲ್ಲಿ ಅತ್ಯಂತ ಸುಲಭ. ಶೈಲಿಯಲ್ಲೂ ಅತ್ಯಂತ ಸರಳ. ನಿರೂಪಣೆ ಮಾತ್ರ ಅತ್ಯಂತ ಪರಿಣಾಮಕಾರಿ. ಶ್ರವಣದ ಮಹತ್ತ್ವವನ್ನು ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸುವ ಈ ಶ್ಲೋಕದ ಸೊಬಗನ್ನು ನೋಡಿ :

**ಶ್ರುತ್ವಾ ಧರ್ಮಂ ವಿಜಾನಾತಿ ಶ್ರುತ್ವಾ ತ್ಯಜತಿ ದುರ್ಮತಿಮ್ ।**
**ಶ್ರುತ್ವಾ ಜ್ಞಾನಮವಾಪ್ನೋತಿ ಶ್ರುತ್ವಾ ಮೋಕ್ಷಂ ಚ ಗಚ್ಛತಿ ॥**

ಶ್ರವಣದ ಮಹತ್ತ್ವವನ್ನು ಸೊಗಸಾಗಿ ನಿರೂಪಿಸುವ ಈ ಶ್ಲೋಕ 'ಆವೃತ್ತಿರಸಕೃದುಪದೇಶಾತ್' ಎಂಬ ಸೂತ್ರಕ್ಕೆ ಭಾಷ್ಯವೇ ಆಗಿದ್ದು ಬ್ರಹ್ಮಸೂತ್ರಭಾಷ್ಯಕ್ಕೆ ಪೂರಕವೇ ಆಗಿದೆ.

ಕೃಷ್ಣಾಮೃತಮಹಾರ್ಣವಕ್ಕೆ ಸ್ಮೃತಿಮುಕ್ತಾವಲೀಕೃಷ್ಣಾಚಾರ್ಯರು, ತಾಮ್ರಪರ್ಣೀ ಶ್ರೀನಿವಾಸಾಚಾರ್ಯರು, ಉಮರ್ಜೀಪ್ರಹ್ಲಾದಕೃಷ್ಣಾಚಾರ್ಯರು ಮೊದಲಾದ ಅನೇಕ ಮಹನೀಯರು ವ್ಯಾಖ್ಯಾನವನ್ನು ರಚಿಸಿರುವರು.

# ತಂತ್ರಸಾರಸಂಗ್ರಹ

ತಂತ್ರಸಾರಸಂಗ್ರಹವು 'ತಂತ್ರಸಾರ'ವೆಂಬ ಮಹಾವಿಷ್ಣುಕೃತ ತಂತ್ರಸಾರ ಎಂಬ ಮೂಲಗ್ರಂಥದ ಸಂಗ್ರಹ. ಮೂಲ ತಂತ್ರಸಾರವು ತಂತ್ರಗ್ರಂಥಗಳಲ್ಲೆಲ್ಲಾ ಅತ್ಯಂತ ಪ್ರಧಾನ. ಆದರಿಂದಲೇ ಅನೇಕ ಶ್ಲೋಕಗಳನ್ನು ಶ್ರೀ ಮದಾಚಾರ್ಯರು ತಮ್ಮ ಭಾಗವತತಾತ್ಪರ್ಯ ಮೊದಲಾದ ಗ್ರಂಥಗಳಲ್ಲಿ ಉದಾಹರಿಸಿರುವರು. ತಂತ್ರಸಾರಸಂಗ್ರಹದಲ್ಲಿ ಅದರ ಸಾರಸರ್ವಸ್ವವನ್ನು ಸುಮಾರು 420 ಶ್ಲೋಕಗಳ ವ್ಯಾಪ್ತಿಯಲ್ಲಿ ಒದಗಿಸಿರುವರು. ಯಾವುದನ್ನು ಆಚರಿಸದಿದ್ದಲ್ಲಿ ಕರ್ಮಲೋಪವೆಂಬ ಪ್ರತ್ಯವಾಯ ಒದಗುವುದೋ ಅಂತಹ ಮೂಲತಂತ್ರದ ಸರ್ವಸ್ವವನ್ನೂ ಅದರಲ್ಲಿ ಒದಗಿಸಿರುವುದಾಗಿಯೂ, ಇದರ ಪಠನ ಪಾಠನಾದಿ ಸಕಲವೂ ಸಕಲಾಭೀಷ್ಟದಾಯಕ ಎಂಬುದಾಗಿಯೂ ತಿಳಿಸಿರುವರು :

**ಗ್ರಂಥೋಽಯಂ ಪಾಠಮಾತ್ರೇಣ ಸಕಲಾಭೀಷ್ಟಸಿದ್ಧಿದಃ ।**
**ಕಿಮು ಜ್ಞಾನಾದನುಷ್ಠಾನಾದುಭಯಸ್ಮಾತ್ ಪುನಃ ಕಿಮು ॥**

**ತಂತ್ರಮಾರ್ಗಾಸ್ತು ಹರಿಣಾ ಹ್ಯಸಂಖ್ಯಾಃ ಕೀರ್ತಿತಾ ಅಪಿ ।**
**ತೇಷ್ವಯಂ ಸುಗಮೋ ಮಾರ್ಗಃ ಸುಫಲಶ್ಚಾನುತಿಷ್ಠತಾಮ್ ॥**

**ಯಾವತೋ ಹ್ಯನನುಷ್ಠಾನೇ ಕರ್ಮಪೂರ್ತಿರ್ನ ವಿದ್ಯತೇ ।**
**ತಾವತ್ಸಮಸ್ತಂ ಕಥಿತಂ ಹ್ಯಸ್ಮಿಂಸ್ತಂತ್ರೇ ಯಥಾವಿಧಿ ॥**

**ಪ್ರೀಯತೇಽನೇನ ಮಾರ್ಗೇಣ ಪೂಜಿತೋ ಮುಕ್ತಿದೋ ಭವೇತ್ ।**
**ಕಾಮದಶ್ಚ ಸ್ವಭಕ್ತಾನಾಂ ಭಗವಾನ್ ಪುರುಷೋತ್ತಮಃ ॥**

ಸೃಷ್ಟಿಯ ಪ್ರಾರಂಭದಲ್ಲಿ ಮಹಾವಿಷ್ಣುವು, ಬ್ರಹ್ಮದೇವರಿಗೆ ನೀಡಿದ ಉಪದೇಶದ ಸಾರ''ತಂತ್ರಸಾರ', ಅದರ ಸಂಗ್ರಹ ತಮ್ಮ 'ತಂತ್ರಸಾರಸಂಗ್ರಹ' ಎಂಬ ಮಾತನ್ನು ಅವರೇ ಸ್ಪಷ್ಟಪಡಿಸಿರುವರು.

ತಂತ್ರಸಾರಸಂಗ್ರಹದಲ್ಲಿ ನಾಲ್ಕು ಅಧ್ಯಾಯಗಳಿದ್ದು ಅದರಲ್ಲಿನ ಒಟ್ಟು ಶ್ಲೋಕಗಳ ಸಂಖ್ಯೆ 420 ಮಾತ್ರ. ಅದರ ಮೊದಲ ಅಧ್ಯಾಯದಲ್ಲಿ ಪ್ರಣವಲಕ್ಷಣ, ಅದರ ಅಷ್ಟಾಕ್ಷರಗಳಿಂದ ಪ್ರತಿಪಾದ್ಯವಾದ ಭಗವನ್ಮೂರ್ತಿಗಳ ವಿವರ, ಮಾತೃಕಾಮೂರ್ತಿಗಳು, ಅಷ್ಟಮಹಾಮಂತ್ರಗಳು, ಅವುಗಳ ಮಹತ್ತ್ವ, ದೇವಪೂಜಾವಿಧಾನ, ವಿಶೇಷವಾಗಿ ಪೀಠಪೂಜೆ ಮತ್ತು ಆವರಣ ಪೂಜೆಯ ವಿಧಾನಗಳು, ದೇವಪೂಜೆಯ ಮಹತ್ತ್ವ ಇವು ನಿರೂಪಿತವಾಗಿವೆ.

ಮಾತೃಕಾನ್ಯಾಸಕ್ರಮ, ಪ್ರಾಣಾಯಾಮ, ಪಾಪಪುರುಷವಿಸರ್ಜನಕ್ರಮ,

ಕಲಶದೇವತೆಗಳು, ಕಲಶಪೂಜಾವಿಧಾನ, ಹೋಮದ ವಿಧಿವಿಧಾನಗಳು, ಹೋಮದ್ರವ್ಯಗಳು ಮೊದಲಾದವುಗಳು ಎರಡನೆಯ ಅಧ್ಯಾಯದಲ್ಲಿ ಬಂದಿವೆ.

ತೃತೀಯಾಧ್ಯಾಯವು ಪ್ರಧಾನವಾಗಿ ದೇವತಾಪ್ರತಿಷ್ಠೆಯ ವಿಧಿವಿಧಾನಗಳಿಗೆ ಮೀಸಲಾಗಿದ್ದು ಪ್ರತಿಮಾಲಕ್ಷಣ, ಪ್ರತಿಮಾನಿರ್ಮಾಣವಿಧಿ, ಶಿಲಾಪರೀಕ್ಷಾವಿಧಿ, ಶಿಲಾಪ್ರಭೇದಗಳು, ಭೂಶೋಧನವಿಧಿ, ದೇವಾಲಯನಿರ್ಮಾಣಯೋಗ್ಯಸ್ಥಳ ವಿಚಾರ, ಗರ್ಭಗೃಹಾದಿಗಳ ಪ್ರಮಾಣ, ವಾಸ್ತುಪೂಜಾವಿಧಿ, ಮಂಟಪರಚನೆಯ ವಿಧಾನ, ಅಂಕುರಾರ್ಪಣವಿಧಿ, ಬಲಿದಾನವಿಧಿ, ಅಧಿವಾಸನ ವಿಧಿ, ಚಕ್ರಾಬ್ಜಭದ್ರಕ ಮಂಡಲಗಳ ಲಕ್ಷಣ, ಕಲಶಾಭಿಷೇಕಕ್ರಮ, ಅಭಿಷೇಕ ಮಂತ್ರಗಳು, ಅಭಿಷೇಕವಿಧಿ, ಅನ್ನಸಂತರ್ಪಣೆ ಹಾಗೂ ಅತಿಥಿಪೂಜೆಯ ವಿಧಾನ, ಜೀರ್ಣೋದ್ಧಾರವಿಧಿ, ಸಂಪ್ರೋಕ್ಷಣವಿಧಿ, ದುರ್ಗಾದಿ ಇತರದೇವತಾಪ್ರತಿಷ್ಠಾವಿಧಿ, ತತ್ತ್ವಾಭಿಮಾನಿ ದೇವತಾವಿವರ, ತತ್ತ್ವನ್ಯಾಸದ ಕ್ರಮ ಮೊದಲಾದ ಸಮಗ್ರವಿಷಯಗಳ ಬಗ್ಗೆ ಸಮಗ್ರವಿವರಗಳನ್ನು ನೀಡುತ್ತದೆ.

ನಾಲ್ಕನೆಯ ಅಧ್ಯಾಯವು ವಿವಿಧ ಮಂತ್ರಗಳ ನಿರೂಪಣೆಗೆ ಮೀಸಲು. ಮಂತ್ರಾಧ್ಯಾಯವೆಂದೆ ಇದು ಪ್ರಸಿದ್ಧ. ಅನೇಕ ಬಗೆಯ ವರಾಹಮಂತ್ರಗಳು, ಶ್ರೀಕರಾಷ್ಟಾಕ್ಷರಮಂತ್ರ, ನರಸಿಂಹಮಂತ್ರಗಳು, ಹಂಸಮಂತ್ರಗಳು, ದಧಿವಾಮನ ಮಂತ್ರ, ವಾಮನಮಂತ್ರ, ತ್ರಿವಿಕ್ರಮಗಾಯತ್ರೀಮಂತ್ರ, ರಾಮಮಂತ್ರ, ಪರಶುರಾಮ ಮಂತ್ರ, ಕೃಷ್ಣಮಂತ್ರಗಳು, ವೇದವ್ಯಾಸಮಂತ್ರ, ಹಯಗ್ರೀವಮಂತ್ರ, ಕಪಿಲಮಂತ್ರ, ದತ್ತಾತ್ರೇಯಮಂತ್ರ, ವೈದಿಕವಿಷ್ಣುಮಂತ್ರಗಳು, ಲಕ್ಷ್ಮೀಮಂತ್ರಗಳು, ಬ್ರಹ್ಮವಾಯುಗಳ, ಸರಸ್ವತೀಭಾರತಿಯರ ಮಂತ್ರಗಳು, ಶಿವ ಪಾರ್ವತಿಯರ ಮಂತ್ರಗಳು, ಶೇಷಮಂತ್ರ ಗರುಡಮಂತ್ರಗಳು, ದಿಕ್ಪಾಲಕರ ಮಂತ್ರಗಳು, ಸೂರ್ಯಮಂತ್ರ, ಗಣೇಶ ಮಂತ್ರ ಮತ್ತು ಧನ್ವಂತರಿಮಂತ್ರ, ಇಷ್ಟು ಮಂತ್ರಗಳು ಇದರಲ್ಲಿ ನಿರೂಪಿತವಾಗಿವೆ. ಪ್ರತಿಮಂತ್ರಕ್ಕೂ ಧ್ಯೇಯಮೂರ್ತಿಯ ವಿವರ, ಅಂಗನ್ಯಾಸ ಕರನ್ಯಾಸಗಳ ವಿಧಿ ವಿಧಾನಗಳು, ಧ್ಯಾನಮಂತ್ರಗಳು ನಿಖರವಾಗಿ ತಿಳಿಸಲ್ಪಟ್ಟಿವೆ. ಮಂತ್ರಜಪದೊಂದಿಗೆ ತರ್ಪಣ ಹಾಗೂ ಹೋಮಗಳ ವಿಧಿ, ಹೋಮದ್ರವ್ಯಗಳು, ಧ್ಯೇಯಮೂರ್ತಿಯ ಬಾಹುಸಂಖ್ಯಾ, ಆಯುಧಾದಿವಿವರ, ಧ್ಯಾನವಿಶೇಷ, ಮಂತ್ರಗಳ ಫಲಶ್ರುತಿ; ಯಂತ್ರೋದ್ಧಾರಕ್ರಮ, ಗುರುಲಕ್ಷಣ, ಪ್ರಾಣಾಯಾಮಾದಿ ಯೋಗಾಂಗಗಳು, ಸುಷುಮ್ನಾದಿನಾಡೀ ವಿಚಾರ ಇದರಲ್ಲಿ ಬಂದಿವೆ.

ಹೀಗೆ ತಂತ್ರಸಾರಸಂಗ್ರಹವು ತಂತ್ರಶಾಸ್ತ್ರದ ಒಂದು ವಿಶ್ವಕೋಶವೇ ಆಗಿದೆ.

ಇದಕ್ಕೆ ಶ್ರೀವ್ಯಾಸತೀರ್ಥರು ಶ್ರೀವಾದಿರಾಜರು, ಶ್ರೀವೇದವೇದ್ಯರು, ಛಲಾರಿ ಶೇಷಾಚಾರ್ಯರು, ಶೇಷಚಂದ್ರಿಕಾಚಾರ್ಯರು ಮೊದಲಾದ ಅನೇಕ ಮಹನೀಯರು ಟೀಕೆಗಳನ್ನು ರಚಿಸಿರುವರು. ಇಂತಹ ಒಟ್ಟು ಟೀಕೆಗಳ ಸಂಖ್ಯೆ 24ನ್ನು ಮೀರುತ್ತದದೆ. (ಇವುಗಳ ಬಗ್ಗೆ ವಿವರಗಳನ್ನು ಶ್ರೀಮನ್ಮಾಧ್ವರಾದ್ಧಾಂತ ಸಂವರ್ಧಕಸಭಾ ಉಡುಪಿಯಿಂದ ಪ್ರಕಾಶಿತವಾಗಿರುವ ಛಲಾರೀ ಟೀಕಾಸಮೇತ ತಂತ್ರಸಾರಸಂಗ್ರಹದ ನನ್ನ ಪೀಠಿಕೆಯಲ್ಲಿ ನೋಡಬಹುದು.)

# ಯತಿಪ್ರಣವಕಲ್ಪ

ಸದಾಚಾರಸ್ಮೃತಿಯಲ್ಲಿ ಗೃಹಸ್ಥ ಮೊದಲಾದವರ ನಿತ್ಯಕರ್ಮಗಳ ಸ್ವರೂಪದ ಬಗ್ಗೆ ಬೆಳಕು ಚೆಲ್ಲಿದ ಶ್ರೀಮದಾಚಾರ್ಯರು, 'ಯತಿಪ್ರಣವಕಲ್ಪ'ದಲ್ಲಿ ಪ್ರಧಾನವಾಗಿ ಸಂನ್ಯಾಸ ಸ್ವೀಕಾರದ ವಿಧಿ ವಿಧಾನಗಳನ್ನು, ಭಗವದ್ಧ್ಯಾನಪದ್ಧತಿ ಹಾಗೂ ಸಂನ್ಯಾಸಿಗಳು ಕೈಗೊಳ್ಳಬೇಕಾದ ಮೂಲಭೂತದೀಕ್ಷೆಯ ಸ್ವರೂಪವನ್ನು ವಿವೇಚಿಸಿರುವರು.

ಸಂಸಾರದಲ್ಲಿ ವಿರಕ್ತಿಹೊಂದಿದ ಸಾಧಕನು, ಪುರುಷಸೂಕ್ತದಿಂದ ವಿಧ್ಯುಕ್ತರೀತಿಯಲ್ಲಿ ಹೋಮಿಸಿ, ತನ್ನನ್ನು ಅವಲಂಬಿಸಿದ ಸಕಲರಿಗೂ ಉಚಿತ ಆಶ್ರಯವನ್ನು ಕಲ್ಪಿಸುವ ಮೂಲಕ ಅಭಯವನ್ನಿತ್ತು, ಹರಿಯನ್ನು ಸ್ಮರಿಸುತ್ತಾ ಸಂನ್ಯಾಸವನ್ನು ಸ್ವೀಕರಿಸಬೇಕು. ಸನ್ಯಾಸದೀಕ್ಷೆಯನ್ನು ವಿಹಿತಗುರುಗಳಿಂದಲೇ ಪಡೆಯಬೇಕು. ಅಂತಹ ಗುರುವು ಮೂಲತಃ ಭಗವದ್ಭಕ್ತನೂ, ಸದಾಚಾರಿಯೂ ಆಗಿರಲೇಬೇಕು. ಅಂತಹವನ ಬಳಿಗೆ ತೆರಳಿ; 'ನನಗೆ ಬ್ರಹ್ಮತತ್ತ್ವವನ್ನು ಉಪದೇಶಿಸಬೇಕು' ಎಂದು ಪ್ರಾರ್ಥಿಸಿಕೊಳ್ಳಬೇಕು. ಗುರುವು ಅವನ ಪ್ರಾರ್ಥನೆಯನ್ನು ಮನ್ನಿಸಿ, ಅವನ ಬಲಗಿವಿಯಲ್ಲಿ ಪ್ರಣವಮಂತ್ರವನ್ನು ಮೂರುಬಾರಿ ಉಪದೇಶಿಸಬೇಕು. ಪ್ರಣವಕ್ಕೆ ಅಂತರ್ಯಾಮಿಯು ಋಷಿ, ಗಾಯತ್ರೀ ಛಂದಸ್ಸು ಮತ್ತು ಪರಮಾತ್ಮನೇ ದೇವತೆ. ವಿಶ್ವ, ತೈಜಸ, ಪ್ರಾಜ್ಞ ಮತ್ತು ತುರೀಯ ಎಂಬ ಭಗವದ್ರೂಪಗಳು ಪ್ರಣವದ ಅ, ಉ, ಮ ಮತ್ತು ನಾದ ಎಂಬ ನಾಲ್ಕು ಅಕ್ಷರಗಳಿಗೆ ದೇವತೆಗಳು. ಕೃಷ್ಣ, ರಾಮ, ನೃಸಿಂಹ, ವರಾಹ, ವಿಷ್ಣು, ಪರಂಜ್ಯೋತಿ, ಪರಬ್ರಹ್ಮ ಮತ್ತು ವಾಸುದೇವ ಎಂಬ ಎಂಟು ರೂಪಗಳು ಪ್ರಣವದ ಅಕಾರಾದಿ ಅತಿಶಾಂತದವರೆಗಿನ ಎಂಟು ಅಕ್ಷರಗಳಿಗೆ ದೇವತೆಗಳು.

ಹೃದಯದಲ್ಲಿ ಅಷ್ಟದಳದ ಕಮಲ, ಅದರ ಮಧ್ಯದಲ್ಲಿ ಸೂರ್ಯ, ಚಂದ್ರ ಮತ್ತು ಅಗ್ನಿ ಮಂಡಲಗಳು; ಅವುಗಳ ಮಧ್ಯದಲ್ಲಿ ಮತ್ತೊಂದು ಅಷ್ಟದಳದ ಕಮಲ; ಅದರ ಮಧ್ಯದಲ್ಲಿ ನಾರಾಯಣನನ್ನು ಚಿಂತಿಸಬೇಕು. ಉದಿಸುವ ಸೂರ್ಯನ ಕಾಂತಿ, ಜ್ಞಾನಾನಂದಮಯದೇಹ, ಕೆಂಪಾದ ಅಂಗೈ, ಅಂಗಾಲುಗಳು, ಹೊಳೆಯುವ ಉಗುರುಗಳು, ದುಂಡಾದ ತೊಡೆ, ಮೊಳಕಾಲುಗಳು, ಆನೆಯ ಸೊಂಡಿಲಿನಂತಹ ತೋಳುಗಳು, ಸೊಂಟದಲ್ಲಿ ಚಿನ್ನದ ಒಡ್ಯಾಣದಿಂದ ಬಿಗಿದ ಪೀತಾಂಬರ, ಆಳವಾದ ನಾಭಿ, ಮೂರುನಿರಿಗಳಿಂದ ಕೂಡಿದ ಉದರ, ವಿಶಾಲ ವಕ್ಷಃಸ್ಥಳ, ಕೌಸ್ತುಭದಿಂದ ಕೂಡಿದ ಕಂಠ, ಶಂಖ ಚಕ್ರ ಗದೆ ಪದ್ಮಗಳನ್ನು ಧರಿಸಿದ ನೀಲವೂ ಪುಷ್ಟವೂ ಆದ ತೋಳುಗಳು, ತಾವರೆಯಂತಹ ಕಣ್ಣುಗಳು, ಹೊಳೆಯುವ ಮಕರ ಕುಂಡಲಗಳು, ಸಹಸ್ರಾರು ಚಂದ್ರರಿಗೂ ಮಿಗಿಲಾದ ಕಮಲದಂತಹ ಮುಖ, ಮಂದಹಾಸ —ಇವು ಧ್ಯೇಯಮೂರ್ತಿಯ ಲಕ್ಷಣಗಳು.

ವಿಶ್ವಾದಿ ನಾಲ್ಕು ರೂಪಗಳನ್ನೂ, ಕೃಷ್ಣಾದಿ ಎಂಟು ರೂಪಗಳನ್ನೂ ಸಹ ಇದೇ ತೆರನಾಗಿ ಚಿಂತಿಸಬೇಕು. ಅವುಗಳದು ವರದ ಹಾಗೂ ಅಭಯಹಸ್ತಗಳು.

ಹೀಗೆ ದೀಕ್ಷೆಯಿತ್ತ ನಂತರ ಗುರುವು ಶಿಷ್ಯನಿಗೆ ಪ್ರಮಾಣವಚನ ಬೋಧಿಸಬೇಕು :

"ವಿಷ್ಣು, ವೈಷ್ಣವರನ್ನು ಎಂದೂ ತೊರೆಯುವುದಿಲ್ಲ; ವಿಷ್ಣುವಿಗೆ ಇತರ ದೇವತೆಗಳೊಂದಿಗೆ ಸಾಮ್ಯವನ್ನಾಗಲಿ, ಐಕ್ಯವನ್ನಾಗಲಿ ಎಂದೂ ಚಿಂತಿಸುವುದಿಲ್ಲ. ಸತ್ತರೂ ಸರಿ, ಐಕ್ಯವಾದಿಗಳೊಂದಿಗಾಗಲಿ, ಸಾಮ್ಯವಾದಿಗಳೊಂದಿಗಾಗಲಿ ಬೆರೆಯುವುದಿಲ್ಲ. ವಿಷ್ಣು ವೈಷ್ಣವನಿಂದಕರನ್ನು ಸೇರುವುದಿಲ್ಲ;

ಈ ತೆರನಾಗಿ ಶಪಥ ಮಾಡಿಸಿದ ಮೇಲೆ, ಅವನ ತಲೆಯ ಮೇಲೆ ಹಸ್ತವನ್ನಿರಿಸಿ ಗುರುವು 'ಸುಖಿಯಾಗು' ಎಂದು ಹರಸಬೇಕು. 'ಸಂಸಾರದಿಂದ ಪಾರಾಗು, ಮೋಕ್ಷವನ್ನು ಪಡೆ, ಅಲ್ಲಿಯೂ ಹರಿಭಕ್ತರಾದ ದೇವತೆಗಳಲ್ಲಿ ತಾರತಮ್ಯ ಕ್ರಮದಿಂದ ಭಕ್ತಿ ಮಾಡು; ವಿಷ್ಣುಸರ್ವೋತ್ತಮತ್ವವನ್ನು ಚಿಂತಿಸು; ಮುಕ್ತಿಯಲ್ಲೂ ವಿಷ್ಣುವಿನೊಂದಿಗೆ ಸಾಮ್ಯ, ಐಕ್ಯಗಳನ್ನು ಚಿಂತಿಸದಿರು;" ಎಂಬುದಾಗಿ ಆಶೀರ್ವದಿಸಿ ಅವನಿಗೆ ಶಾಸ್ತ್ರಪಾಠ ಹೇಳಬೇಕು.

ಪ್ರತಿನಿತ್ಯ ದೇವಪೂಜೆ, ಜಪ, ಧ್ಯಾನಗಳನ್ನು ಆಚರಿಸಲೇಬೇಕು. ಮೂರು ಸಾವಿರಕ್ಕಿಂತ ಹೆಚ್ಚಿನ ಜಪ ಉತ್ತಮ; ಮೂರು ಸಾವಿರ ಮಧ್ಯಮ; ಸಾವಿರ ಅಧಮ; ಪರಮಾತ್ಮನು ಬಿಂಬ, ತಾನು ಅವನ ಪ್ರತಿಬಿಂಬ ಎಂಬುದನ್ನು ಚಿಂತಿಸುತ್ತ ಮಾನಸ ಪುಷ್ಪಗಳಿಂದಲೂ, ಪ್ರಣವದಿಂದಲೂ, ಜಿತೇಂದ್ರಿಯನಾಗಿ, ಶ್ರೀಹರಿಯನ್ನು ಆರಾಧಿಸಬೇಕು. ಇದರೊಂದಿಗೆ ಇತರ ವೈಷ್ಣವ ಮಂತ್ರಗಳ ಜಪವೂ ವಿಹಿತ. ಸದಾ ವೇದಾರ್ಥಚಿಂತನೆ, ವೈಷ್ಣವಶಾಸ್ತ್ರಗಳ ಶ್ರವಣ ಮುಖ್ಯ ಕರ್ತವ್ಯ. ವೇದಗಳನ್ನು

ಉಪನಿಷತ್ಸಮೇತವಾಗಿ ಶ್ರವಣಮಾಡಿ ಅವುಗಳ ಅರ್ಥವನ್ನು ಬ್ರಹ್ಮಸೂತ್ರಗಳಿಂದ ನಿರ್ಣಯಿಸಿಕೊಳ್ಳಬೇಕು. ವಿಷ್ಣುಸರ್ವೋತ್ತಮತ್ವವನ್ನೇ ಸದಾ ಪ್ರತಿಪಾದಿಸುತ್ತಿರಬೇಕು.

ಹೀಗೆ ಪ್ರಧಾನವಾಗಿ ಸಂನ್ಯಾಸದೀಕ್ಷೆಯ ಸ್ವರೂಪವನ್ನು ವಿವೇಚಿಸುವ ಈ ಕೃತಿಯು ಪ್ರಣವಸ್ವರೂಪ, ಭಗವದ್ಧ್ಯಾನಪದ್ಧತಿ, ಮೊದಲಾದ ಆದರ್ಶ ಜೀವನಕ್ರಮಗಳನ್ನು ವಿವರವಾಗಿ ನಿರೂಪಿಸುವ ಮೂಲಕ ಸಕಲ ಸಾಧಕರಿಗೂ ಉಪಯುಕ್ತವಾಗಿದೆ.

ಇದಕ್ಕೆ ತಾಮ್ರಪರ್ಣೀ ಆನಂದತೀರ್ಥಾಚಾರ್ಯರು ರಚಿಸಿರುವ ವಿಸ್ತೃತವಾದ ವ್ಯಾಖ್ಯಾನವೊಂದು ನನ್ನ ಸಂಗ್ರಹದಲ್ಲಿ ಉಪಲಬ್ಧವಿದೆ.

## ಜಯಂತೀ ನಿರ್ಣಯ

ಜಯಂತೀನಿರ್ಣಯವು ಶ್ರೀಕೃಷ್ಣಜಯಂತಿ ವ್ರತದ ವಿಧಿವಿಧಾನಗಳನ್ನು ನಿರೂಪಿಸುವ ಕೃತಿ. ಏಕಾದಶೀ ಮತ್ತು ಕೃಷ್ಣಜಯಂತಿ- ಈ ಎರಡೂ ವ್ರತಗಳು ಆಚಾರ್ಯರು ತಿಳಿಸಿದಂತೆ ಸಕಲವರ್ಣ, ಸಕಲ ಆಶ್ರಮದವರಿಗೂ ಕಡ್ಡಾಯವಾಗಿರುವ ವ್ರತಗಳು. ಇವುಗಳನ್ನು ಆಚರಿಸುವುದು ತುಂಬಾ ಪುಣ್ಯಕರವಾಗಿರುವಂತೆ, ಆಚರಿಸದಿರುವದು ಅತ್ಯಂತ ಪಾಪಕರವೂ ಆಗಿದೆ. ಕೃಷ್ಣಾಮೃತಮಹಾರ್ಣವದಲ್ಲಿ ಏಕಾದಶಿಯ ಮಹತ್ವವನ್ನು ವಿವರಿಸಿದ ಶ್ರೀಮದಾಚಾರ್ಯರು ಈ ಕೃತಿಯಲ್ಲಿ ಶ್ರೀಕೃಷ್ಣಜಯಂತೀವ್ರತದ ವಿವರಗಳನ್ನು ಒದಗಿಸಿರುವರು.

ಕೃಷ್ಣಪಕ್ಷದ ಅಷ್ಟಮೀ ಮಧ್ಯರಾತ್ರಿಯಂದು ರೋಹಿಣೀ ನಕ್ಷತ್ರದ ಯೋಗವಿದ್ದಲ್ಲಿ ಅದು ಕೃಷ್ಣಜಯಂತೀ ಎನ್ನಿಸುವದು. (ಸಾಮಾನ್ಯವಾಗಿ ಇದು ಶ್ರಾವಣಮಾಸದಲ್ಲಿ ಬರುವದು.) ಇದು ಶ್ರೀಕೃಷ್ಣ ಅವತರಿಸಿದ ಪವಿತ್ರ ದಿವಸ. ಇದು ಸಕಲ ಪಾಪನಾಶಕವಾದ ವ್ರತ. ಇದಕ್ಕಿಂತ ಮಿಗಿಲಾದ ಬೇರೊಂದು ವ್ರತವೇ ಇಲ್ಲ. ಅಂದು ಸಕಲರೂ ಉಪವಾಸ ಆಚರಿಸಲೇಬೇಕು. ದ್ವಿಜಾತಿಯವರಿಗೆ ಇದು ಇನ್ನೂ ವಿಶೇಷ. ಅಂದು ಆಹಾರ ಸ್ವೀಕರಿಸುವವನು ಕೀವು ರಕ್ತಗಳನ್ನು ತಿಂದಂತೆಯೇ. ಅವನಿಗೆ ಪೂಯೋದ ಎಂಬ ನರಕವು ತಪ್ಪಿದ್ದಲ್ಲ. ಅಂದು ಪ್ರಾತಃ, ಮಧ್ಯಾಹ್ನ ಮತ್ತು ಸಾಯಂಕಾಲ ಮೂರೂ ಕಾಲಗಳಲ್ಲೂ **'ಯೋಗಾಯ ಯೋಗಪತಯೇ ಯೋಗೇಶ್ವರಾಯ ಯೋಗಸಂಭವಾಯ ಶ್ರೀ ಗೋವಿಂದಾಯ ನಮೋ ನಮಃ'** ಎಂಬ

ಮಂತ್ರದಿಂದ ಸ್ನಾನ ಮಾಡಬೇಕು. ಎಂದಿನಂತೆ ನಿತ್ಯಾಹ್ನಿಕವನ್ನು ಪೂರೈಸಬೇಕು. ಅಂದು ರಾತ್ರಿ **ಯಜ್ಞಾಯ ಯಜ್ಞಪತಯೇ ಯಜ್ಞೇಶ್ವರಾಯ ಯಜ್ಞಸಂಭವಾಯ ಶ್ರೀಗೋವಿಂದಾಯ ನಮೋ ನಮಃ** ಎಂಬ ಮಂತ್ರದಿಂದ ಶ್ರೀಕೃಷ್ಣನನ್ನು ವಿಶೇಷರೀತಿಯಲ್ಲಿ ಪೂಜಿಸಬೇಕು. ಜೊತೆಗೆ ತಾರತಮ್ಯದ ಅನುಸಂಧಾನದಿಂದ ಬಲರಾಮ, ವಸುದೇವ, ದೇವಕೀ, ನಂದಗೋಪ, ಯಶೋದೆ ಮತ್ತು ಸುಭದ್ರೆ ಇವರನ್ನು ಪೂಜಿಸಬೇಕು. ಅಂದು ಮಧ್ಯರಾತ್ರಿ ಚಂದ್ರೋದಯದ ಅನಂತರ ಶ್ರೀಕೃಷ್ಣನಿಗೆ ಅರ್ಘ್ಯವನ್ನು ಸಮರ್ಪಿಸಬೇಕು. ಚಂದ್ರನಿಗೂ ಅರ್ಘ್ಯವಿತ್ತು ನಮಸ್ಕರಿಸಬೇಕು. ಅನಂತರ ಬ್ರಹ್ಮಚರ್ಯದಿಂದಿದ್ದು '**ವಿಶ್ವಾಯ ವಿಶ್ವಪತಯೇ ವಿಶ್ವೇಶ್ವರಾಯ ವಿಶ್ವಸಂಭವಾಯ ಶ್ರೀ ಗೋವಿಂದಾಯ ನಮೋ ನಮಃ**'' ಎಂಬ ಮಂತ್ರವನ್ನು ಪಠಿಸುತ್ತ ಮಲಗಬೇಕು. ಮಾರನೆಯ ದಿನ ನಿತ್ಯಾಹ್ನಿಕವನ್ನು ಪೂರೈಸಿ ಯಥಾಶಕ್ತಿ ಧನವನ್ನು ದಾನಮಾಡಿ ''**ಸರ್ವಾಯ ಸರ್ವಪತಯೇ ಸರ್ವೇಶ್ವರಾಯ ಸರ್ವಸಂಭವಾಯ ಶ್ರೀ ಗೋವಿಂದಾಯ ನಮೋ ನಮಃ**'' ಎಂಬ ಮಂತ್ರವನ್ನು ಪಠಿಸಿ ಪಾರಣ ಮಾಡಬೇಕು. ಅನಂತರ ''**ಧರ್ಮಾಯ ಧರ್ಮಪತಯೇ ಧರ್ಮೇಶ್ವರಾಯ ಧರ್ಮಸಂಭವಾಯ ಶ್ರೀ ಗೋವಿಂದಾಯ ನಮೋ ನಮಃ**'' ಎಂಬ ಮಂತ್ರದಿಂದ ವ್ರತ ಸಮಾಪ್ತಿ ಮಾಡಬೇಕು.

ಇಂತಹ ಅಪೂರ್ವವ್ರತದ ವಿಧಿವಿಧಾನಗಳನ್ನು ಹೀಗೆ ನಿರೂಪಿಸಿದ ಆಚಾರ್ಯರು ಶ್ರೀಮಧ್ವಾಚಾರ್ಯರೊಬ್ಬರೇ. ಪ್ರತ್ಯೇಕ ಗ್ರಂಥವನ್ನು ಇದರ ನಿರೂಪಣೆಗಾಗಿ ಮೀಸಲಿಡುವ ಮೂಲಕ ಆಚಾರ್ಯರು ಇದರ ವಿಶೇಷ ಮಹತ್ವನ್ನು ಸೂಚಿಸಿರುವರು. ಇಂತಹ ವೈಶಿಷ್ಟ್ಯಗಳು ಅವರನ್ನು ಲೋಕಮಾನ್ಯರನ್ನಾಗಿಸಿವೆ.

**ಕೃಷ್ಣಾರ್ಘ್ಯ ಮಂತ್ರ :**

**ಜಾತಃ ಕಂಸವಧಾರ್ಥಾಯ ಭೂಭಾರೋತ್ತಾರಣಾಯ ಚ ।**
**ಕೌರವಾಣಾಂ ವಿನಾಶಾಯ ದೈತ್ಯಾನಾಂ ನಿಧನಾಯ ಚ ॥**
**ಪಾಂಡವಾನಾಂ ಹಿತಾರ್ಥಾಯ ಧರ್ಮಸಂಸ್ಥಾಪನಾಯ ಚ ।**
**ಗೃಹಾಣಾರ್ಘ್ಯಂ ಮಯಾ ದತ್ತಂ ದೇವಕ್ಯಾ ಸಹಿತೋ ಹರೇ ॥**

**ಚಂದ್ರಾರ್ಘ್ಯಮಂತ್ರ :**

**ಕ್ಷೀರೋದಾರ್ಣವಸಂಭೂತ ಅತ್ರಿನೇತ್ರಸಮುದ್ಭವ ।**
**ಗೃಹಾಣಾರ್ಘ್ಯಂ ಮಯಾ ದತ್ತಂ ರೋಹಿಣ್ಯಾ ಸಹಿತಃ ಶಶಿನ್ ॥**

**ಚಂದ್ರೋಪಸ್ಥಾನ ಮಂತ್ರ :**

**ಶಶಿನೇ ಚಂದ್ರದೇವಾಯ ಸೋಮದೇವಾಯ ಚೇಂದವೇ ।**
**ಮೃಗಿಣೇ ಸಿತಬಿಂಬಾಯ ಲೋಕದೀಪಾಯ ದೀಪಿನೇ ।**
**ಶೀತದೀಧಿತಿಬಿಂಬಾಯ ತಾರಕಾಪತಯೇ ನಮಃ ।**

# ಸ್ತೋತ್ರಗಳು

## ನಖಸ್ತುತಿ

ಶ್ರೀಮದಾಚಾರ್ಯರ ಕೃತಿಗಳಲ್ಲಿ ಸ್ತೋತ್ರಕೃತಿಗಳು ಎರಡು ದ್ವಾದಶಸ್ತೋತ್ರ ಮತ್ತು ನಖಸ್ತುತಿ.

ನಖಸ್ತುತಿಯು ಎರಡೇ ಶ್ಲೋಕಗಳ ಪುಟ್ಟಕೃತಿ. ನರಸಿಂಹನಖಸ್ತುತಿ, ಅಥವಾ ನಖಸ್ತುತಿ ಎಂಬುದಾಗಿ ಇದು ಪ್ರಸಿದ್ಧ. ನೈವೇದ್ಯಸಮರ್ಪಣೆಯ ಸಮಯದಲ್ಲಿ ಒಮ್ಮೆ ಆಚಾರ್ಯರ ರೂಪತ್ರಯಗಳನ್ನು ದರ್ಶನ ಮಾಡುವ ಭಾಗ್ಯ ತ್ರಿವಿಕ್ರಮ ಪಂಡಿತರದಾಯಿತು. ಆಗ ಅವರ ಮುಖದಿಂದ ಹೊರಹೊಮ್ಮಿದ ರಚನೆ ಮಾಧ್ವರ ನಿತ್ಯಪಠ್ಯ ಅಮರಕೃತಿ 'ವಾಯುಸ್ತುತಿ', ಅದನ್ನು ಅವಲೋಕಿಸಿದ ಆಚಾರ್ಯರು ಅದಕ್ಕೆ ಮಂಗಲರೂಪವಾಗಿ ಈ ನಖಸ್ತುತಿಯನ್ನು ಅನುಗ್ರಹಿಸಿದರಂತೆ; ವಾಯುಸ್ತುತಿಯ ಆದ್ಯಂತದಲ್ಲಿ ಇದನ್ನು ಪಠಿಸುವ ಸಂಪ್ರದಾಯ ಇಂದಿಗೂ ಉಂಟು.

ಇದರ ಮೊದಲ ಶ್ಲೋಕದಲ್ಲಿ ನರಸಿಂಹದೇವರ ನಖಗಳ ಸ್ತುತಿ ಇರುವುದರಿಂದ ನಖಸ್ತುತಿ ಎಂಬ ಹೆಸರು ಇದಕ್ಕೆ ಅನ್ವರ್ಥಕವಾಗಿದೆ. ನರಸಿಂಹದೇವರ ನಖಗಳ ಸ್ತೋತ್ರದ ಈ ಶ್ಲೋಕದಲ್ಲಿ ಪೂರ್ವಾರ್ಧ ಶಾರ್ದೂಲವಿಕ್ರೀಡಿತ ವೃತ್ತದಲ್ಲಿದ್ದು. ಉತ್ತರಾರ್ಧ ಸ್ರಗ್ಧರಾವೃತ್ತದಲ್ಲಿದೆ. ಹೀಗೆ ಒಂದೇ ಶ್ಲೋಕದಲ್ಲಿ ಎರಡು ಬೇರೆ ಬೇರೆ ವೃತ್ತಗಳ ಮಿಶ್ರಣ ಸಂಸ್ಕೃತದಲ್ಲಿ ಅಪೂರ್ವ. ಮೇಲೆ ಸಿಂಹದ ಮುಖ, ಕೆಳಗೆ ಹಿರಣ್ಯಕಶಿಪುವಿನ ಕರಳಮಾಲೆ ಧರಿಸಿದ ಮಾನವಾಕಾರ– ಇದು ನರಸಿಂಹನ ಚಿತ್ರ. ಅದಕ್ಕೆ ಸರಿಹೊಂದುವಂತೆ ಪೂರ್ವಾರ್ಧದಲ್ಲಿ ಶಾರ್ದೂಲವಿಕ್ರೀಡಿತ, ಉತ್ತರಾರ್ಧದಲ್ಲಿ ಸ್ರಗ್ಧರಾ; ಅರ್ಥದಲ್ಲಿ ಇರಲಿ ಛಂದೋಗತಿಯಲ್ಲೂ ನರಸಿಂಹನ ಚಿತ್ರ ಮೂಡಿಸುವ ಅದ್ಭುತರಚನೆ ಇದು.

ಆಚಾರ್ಯರ ಪ್ರತಿಯೊಂದು ರಚನೆಯೂ ಹೀಗೆ ಅದ್ಭುತ, ಅಪೂರ್ವ, ಸಾರ್ಥಕ, ಉದ್ಬೋಧಕ.

ಉತ್ತರಾರ್ಧದಲ್ಲಿ ನಖಗಳ ಪ್ರಸ್ತಾಪವಿಲ್ಲ. ಆದ್ದರಿಂದ ಅದು ನಖಸ್ತುತಿಯ ಭಾಗವಲ್ಲ ಎಂಬ ವಾದ ಕೆಲವರದು. ಪ್ರಾಚೀನ ತಾಡವಾಲೆ ಪ್ರತಿಗಳಲ್ಲೂ ಎರಡು ಶ್ಲೋಕಗಳೂ ಒಟ್ಟಾಗಿಯೇ ಇವೆ. ಆದರೆ ಅನೇಕ ಪ್ರಾಚೀನರು ಇವೆರಡನ್ನೂ ಒಟ್ಟಾಗಿಯೇ ವ್ಯಾಖ್ಯಾನಿಸಿರುವರು; ಒಟ್ಟಾಗಿಯೇ ಪಠಿಸುವ ಸಂಪ್ರದಾಯವೂ

ಉಂಟು; ಎಂದಮೇಲೆ ಇಂತಹ ಗೊಂದಲಕ್ಕೆ ಅವಕಾಶವಿಲ್ಲ. ಭಗವಂತನಂತೆ ಅವನಗೆ ರೂಪ ಅವಯವ ಮೊದಲಾದ ಎಲ್ಲವೂ ಅಷ್ಟೇ ಪರಿಪೂರ್ಣ; ಅವನು ಸ್ವಗತಭೇದವಿವರ್ಜಿತ ಎಂಬ ಮಧ್ವಸಿದ್ಧಾಂತದ ಪ್ರಮೇಯರಹಸ್ಯ ಬಲ್ಲವರಿಗೆ ಇದೇನೂ ಸಮಸ್ಯೆಯಲ್ಲ. ಲಕ್ಷ್ಮೀಕಾಂತ ಎಂಬುದೆ ನಖಗಳಿಗೆ ಸಂಬೋಧನೆ. ಅವೂ ಲಕ್ಷ್ಮೀಕಾಂತ; ನಖಗಳೂ ಪರಿಪೂರ್ಣವೇ ಆಗಿರುವುದರಿಂದ.

ಲಕ್ಷ್ಮೀಕಾಂತ ಎಂಬ ಶ್ಲೋಕದಲ್ಲಿ ಭಗವಂತನಿಗೆ ಸಾಟಿಯಾದ ವಸ್ತುವೇ ಇಲ್ಲದಿರುವಾಗ ಮಿಗಿಲಾದ ವಸ್ತು ಇರುವುದು ಎಂತು? ಸಪ್ತಮರಸವೇ ಇಲ್ಲದಿರುವಾಗ ಅಷ್ಟಮರಸವಿರಲು ಎಂತು ಸಾಧ್ಯ? ಎಂಬ ಅರ್ಥದೊಂದಿಗೆ ಭಗವಂತನಿಗೆ ಸಮವೂ ಇಲ್ಲ ಮಿಗಿಲೂ ಇಲ್ಲ; ಅವನೇ ಅಷ್ಟಮರಸ ಎಂಬುದಾಗಿ ಛಾಂದೋಗ್ಯೋಪನಿಷತ್ತಿನಲ್ಲಿ ಪ್ರತಿಪಾದಿತನಾಗಿರುವುದರಿಂದ ಎಂಬ ಅರ್ಥವೂ ಬರುವುದು. ಲಕ್ಷ್ಮೀಕಾಂತ ಎಂಬಲ್ಲಿ ಲಕ್ಷ್ಮಿಯು ಅಕ್ಷರ ಪುರುಷಳಾಗಿರುವುದರಿಂದ ಅಕ್ಷರ ಪುರುಷೋತ್ತಮತ್ವವೂ; 'ಬ್ರಹ್ಮೇಶಶಕ್ರೋತ್ಕರಾ;' ಎಂಬಲ್ಲಿನ ಬ್ರಹ್ಮ, ರುದ್ರ ಮೊದಲಾದವರು ಕ್ಷರ ಪುರುಷರಾಗಿರುವುದರಿಂದ ಪುರುಷೋತ್ತಮತ್ವವೂ ನಿರೂಪಿತವಾಗಿದ್ದು, ಒಟ್ಟಾಗಿ ಕ್ಷರಾಕ್ಷರಪುರುಷೋತ್ತಮತ್ವ ನಿರೂಪಿತವಾಗಿದೆ. ನರಸಿಂಹ ಎಂದರೆ ಪುರುಷೋತ್ತಮ ಎಂದೇ ಅರ್ಥ. (ನರ-ಪುರುಷ; ಸಿಂಹ-ಉತ್ತಮ) ಎಂದರೆ ಇದೂ ನರಸಿಂಹಸ್ತೋತ್ರ; ಅವನಿಂದ ಅಭಿನ್ನವಾದ ನಖದ ಸ್ತೋತ್ರ ಎರಡೂ ಆಗಿ, ನರಸಿಂಹನಖಸ್ತುತಿಯೇ ಆಗಿದೆ.

# ದ್ವಾದಶಸ್ತೋತ್ರ

ದ್ವಾದಶಸ್ತೋತ್ರವು ಹನ್ನೆರಡು ಸ್ತೋತ್ರ ಅಥವಾ ಅಧ್ಯಾಯಗಳ ಸ್ತೋತ್ರ ಕೃತಿ. ಮೊದಲ ಅಧ್ಯಾಯದಲ್ಲಿ ಶ್ರೀಹರಿಯ ಪಾದಾದಿ ಶಿರಃಪರ್ಯಂತ ವರ್ಣನೆಯೂ, ಎರಡನೆಯ ಅಧ್ಯಾಯದಲ್ಲಿ ಭಗವತ್ಸ್ವರೂಪದ ವಿವೇಚನೆಯೂ ಇವೆ. ಮೂರನೆಯ ಅಧ್ಯಾಯ ಒಂದು ಅಷ್ಟಕ. ಇದರಲ್ಲಿ ಸಾಧಕನಿಗೆ ಹರಿಯ ಪಾರಮ್ಯ, ಸ್ವಾತಂತ್ರ್ಯ, ಸರ್ವೋತ್ತಮತ್ವಗಳನ್ನು ಪರಮತನಿರಾಸಪೂರ್ವಕ ತಿಳಿಸಿ ಕರ್ತವ್ಯಕರ್ಮಾಚರಣೆಯ ಉಪದೇಶವಿದೆ. ನಾಲ್ಕನೆಯ ಅಧ್ಯಾಯ ಮೂರನೆಯ ಅಧ್ಯಾಯದ ಮುಂದುವರೆದ ಭಾಗದಂತಿರುವ ಮತ್ತೊಂದು ಅಷ್ಟಕ. ಐದನೆಯ ಅಧ್ಯಾಯ ಕೇಶವಾದಿ ದ್ವಾದಶ ಮೂರ್ತಿಗಳ ಸ್ತುತಿ. ಆರನೆಯ ಅಧ್ಯಾಯವು ದಶಾವತಾರಸ್ತುತಿ. ಏಳನೆಯ ಅಧ್ಯಾಯವು ಶ್ರೀ ಲಕ್ಷ್ಮೀಪತಿತ್ವೇನ ಭಗವತ್ಸ್ತುತಿ

ಇದ್ದು ಶ್ರೀಸ್ತುತಿ ಎಂದೇ ಕೆಲವು ಪಾಠಗಳಲ್ಲಿ ಪ್ರಸಿದ್ಧ. ಎಂಟನೆಯ ಅಧ್ಯಾಯ ಭಗವಂತನ ಅಗಾಧ ಮಹಿಮೆಯನ್ನು ಬಣ್ಣಿಸುತ್ತ ಅವನನ್ನು ಒಲಿಸುವ ದೃಢ ಸಂಕಲ್ಪದ ಬಗೆಯನ್ನು ಸೂಚಿಸುವುದು. ಒಂಭತ್ತನೆಯ ಅಧ್ಯಾಯವು ಮತ್ತೊಂದು ರೀತಿಯ ದಶಾವತಾರ ಸ್ತೋತ್ರ. ಹತ್ತನೆಯ ಅಧ್ಯಾಯವು ಪುನಃ ಆಪಾದಮೌಲಿ ಪರ್ಯಂತ ಭಗವತ್ಸ್ತುತಿ. ಹನ್ನೊಂದನೆಯ ಅಧ್ಯಾಯ ಒಂದು ರೀತಿಯಲ್ಲಿ ಭಗವಂತನ ಪಾದರೂಪ ಏಕಾವಯವಸ್ತುತಿ; ಮತ್ತೊಂದು ರೀತಿಯಲ್ಲಿ ಭಗವತ್ಸ್ವರೂಪ ವರ್ಣನೆಯಾಗಿರುವ ಅಷ್ಟಕ. ಕೊನೆಯ ಅಧ್ಯಾಯ ಪುನಃ ಒಟ್ಟಾಗಿ ಭಗವತ್ಸ್ತುತಿ.

ದ್ವಾದಶಸ್ತೋತ್ರ ಸಂಸ್ಕೃತಸಾಹಿತ್ಯದಲ್ಲೇ ಒಂದು ಅಪೂರ್ವ ಸ್ತೋತ್ರ ಕೃತಿ. ಮೇಲ್ನೋಟಕ್ಕೇ ಇದರ ವೈವಿಧ್ಯ ಗಮನಸೆಳೆಯುತ್ತದೆ. ಅಧ್ಯಾಯರೂಪದಲ್ಲಿ ಹೀಗೆ ಪ್ರಸಿದ್ಧವಿರುವ ಮತ್ತೊಂದು ಸ್ತೋತ್ರಕೃತಿ ಪಂಚರಾತ್ರಾಂತರ್ಗತವಾದ ಜಿತಂತೇ ಸ್ತೋತ್ರ ಮಾತ್ರ; ಅದು ಬ್ರಹ್ಮಕೃತ; ಇದು ಭಾವಿಬ್ರಹ್ಮಕೃತ.

ಮೊದಲ ಹಾಗೂ ಹತ್ತನೆಯ ಅಧ್ಯಾಯಗಳಲ್ಲಿ ಬರುವ ಭಗವಂತನ ಆಪಾದ ಮೌಲಿಪರ್ಯಂತವರ್ಣನ ಭಾಗವತದಲ್ಲಿ ಬರುವ ಕಪಿಲಗೀತೆಯಲ್ಲಿನ ಭಗವದ್ಧ್ಯಾನ, ಹಾಗೂ ದ್ವಿತೀಯಸ್ಕಂಧದಲ್ಲಿನ ವಿರಾಡ್ರೂಪ ಚಿಂತನೆಗಳ ವಿವರಣೆಯಂತಿದೆ. ಆ ಅರ್ಥದಲ್ಲಿ ಅವೂ ಭಾಗವತತಾತ್ಪರ್ಯವೇ ಆಗಿವೆ. ಪರಮಾತ್ಮನ ಪಾದಾದಿ ಸಕಲ ಅವಯವಗಳೂ ಪರಿಪೂರ್ಣ; ಹಾಗೂ ವಂದ್ಯ ಎಂಬ ಭವ್ಯ ಚಿತ್ರ ಇವುಗಳಲ್ಲಿದೆ.

ಇದರ ದ್ವಾದಶಸ್ತೋತ್ರವು ತನ್ನ ಹೆಸರಿನಿಂದಲೇ ದ್ವಾದಶಸ್ಕಂಧಗಳ ಭಾಗವತವನ್ನು ಉಲ್ಲೇಕಿಸುತ್ತದೆ. ಹನ್ನೆರಡು ಅಧ್ಯಾಯಗಳು ಹನ್ನೆರಡು ಸ್ಕಂಧಗಳ ಭಾಗವತದ ಅನೇಕ ಭಾಗಗಳಿಗೆ ವಿವರಣೆಯಂತಿದ್ದು, ಸ್ತೋತ್ರರೂಪ ಭಾಗವತತಾತ್ಪರ್ಯ ನಿರ್ಣಯವಾಗಿವೆ. ಮೊದಲ ಅಧ್ಯಾಯದ ಕೊನೆಯ ಶ್ಲೋಕ

**'ಸಂತತಂ ಚಿಂತಯೇಽನಂತಮಂತಕಾಲೇ ವಿಶೇಷತಃ ।**
**ನೈವೋದಾಪುರ್ಗೃಣಂತೋಽಂತಂ ಯದ್ಗುಣಾನಾಮಜಾದಯಃ ॥**

ಒಂದೇ ಶ್ಲೋಕದ ಭಾಗವತಸಾರವೆನ್ನಬಹುದು.

'ಕುರುಭುಂಕ್ಷ್ವ ಚ' ಎಂಬ ಮೂರನೆಯ ಅಧ್ಯಾಯ ಭಗವದ್ಗೀತೆಯ ಭಾಷ್ಯ ರೂಪವಾಗಿದ್ದು ಕರ್ಮಯೋಗದ ಸಾರವಾದರೆ, 'ಪುರುಷೋತ್ತಮ' ಎಂಬುದಾಗಿ ನಿರೂಪಿಸುತ್ತಾ, ಹದಿನೈದನೆಯ ಅಧ್ಯಾಯದ ಪುರುಷೋತ್ತಮಯೋಗದ ಸಾರವಾಗಿದೆ. ಕೇಶವಾದಿ ರೂಪಗಳ ಸ್ತೋತ್ರ ಮಾಸಮೂರ್ತಿಯ ಸ್ತುತಿಯಾಗಿದ್ದರೆ

ಆರು ಮತ್ತು ಒಂಭತ್ತನೆಯ ಅಧ್ಯಾಯಗಳು ದಶಾವತಾರಸ್ತುತಿಯಾಗಿದ್ದು ಭಗವಂತನ ಸಕಲ ಅವತಾರಗಳ ಚಿಂತನೆಗೆ ದಾರಿದೀಪದಂತಿದೆ. ಏಳನೆಯ ಅಧ್ಯಾಯ ಬ್ರಹ್ಮಾದಿಗಳ ಹಿರಿಮೆ, ಅವರ ಹಿರಿಮೆಯಲ್ಲಿ ಲಕ್ಷ್ಮೀಅನುಗ್ರಹದ ಪಾತ್ರ, ಮಹಾಲಕ್ಷ್ಮಿಗೂ ಶ್ರೀಹರಿಯ ಅನುಗ್ರಹದ ಅವಶ್ಯಕತೆ ಮೊದಲಾದ ಪ್ರಮೇಯಗಳನ್ನು ಹೃದಯಂಗಮವಾಗಿ ನಿರೂಪಿಸುತ್ತದೆ.

ಭಗವಂತನನ್ನು ಒಲಿಸುವ ಭಕ್ತನ ಕಾತರ, ಅವನ ಹೃದಯದಲ್ಲಿ ತುಂಬಿನಿಂತಿರುವ ಭಗವಂತನ ಭವ್ಯಚಿತ್ರದ ಅನುಸಂಧಾನ, ಅಂತಹ ಚಿಂತನೆಗೆ ಅರ್ಹವಾದ ಭಗವಂತನ ಅಪಾರ ಮಹತ್ತ್ವಗಳ ವಿವರ ಎಂಟನೆಯ ಅಧ್ಯಾಯದಲ್ಲಿ ಬಂದಿದೆ.

ಪ್ರತಿಯೊಂದು ಸ್ತೋತ್ರವೂ ವಿವಿಧ ರಾಗ ತಾಳಗಳಿಗೆ ಹೊಂದಬಲ್ಲ ಅಪೂರ್ವ ಗೇಯತೆಯನ್ನು ಹೊಂದಿರುವುದು ಇದರ ಮತ್ತೊಂದು ವಿಶೇಷ. ಸಂಸ್ಕೃತದಲ್ಲಿ ಜಯದೇವನ 'ಗೀತಗೋವಿಂದ' ವನ್ನು ಬಿಟ್ಟರೆ ಬೇರಾವ ಕೃತಿಗೂ ಇಂತಹ ರಾಗತಾಳಗಳ ವೈವಿಧ್ಯ ಗೇಯತೆಗಳು ಇಲ್ಲ. ಗೀತಗೋವಿಂದವು ಕೃಷ್ಣಸ್ತೋತ್ರ ರೂಪ ಕೃತಿಯೇ ಆದರೂ, ಅದರಲ್ಲಿಯ ಆರಾಧನೆ ಮಧುರಭಕ್ತಿಗಷ್ಟೇ ಸೀಮಿತವಾಗಿದೆ; ಕೆಲವೊಮ್ಮೆ ಭಕ್ತಿಭಾವಕ್ಕಿಂತ ಶೃಂಗಾರಭಾವವೇ ಪ್ರಧಾನವಾಗಿ, ಶ್ರೋತೃಗಳಲ್ಲಿ ಭಕ್ತಿ ಭಾವಕ್ಕೆ ಬದಲಾಗಿ ಶೃಂಗಾರಪ್ರಜ್ಞೆಯೇ ಜಾಗೃತವಾಗುವ ಅಪಾಯವೂ ಇದೆ. ಆದರೆ ದ್ವಾದಶಸ್ತೋತ್ರವು ಪರಿಶುದ್ಧವಾದ ಭಕ್ತಿಕಾವ್ಯ. ಸರಳತೆಯಲ್ಲಿಯೂ ಗೀತಗೋವಿಂದಕ್ಕಿಂತ ಮಿಗಿಲು. ಗೇಯತೆಯ ವೈವಿಧ್ಯವೂ ಅದಕ್ಕಿಂತ ಅಪಾರ. ಗೀತಗೋವಿಂದದಲ್ಲಿ ಭಗವಂತನ ಪ್ರಸ್ತಾಪವಿದ್ದರೂ ಅದು ದಾರ್ಶನಿಕ ಕೃತಿ ಅಲ್ಲ; ಕಾವ್ಯ ಮಾತ್ರ. ದ್ವಾದಶಸ್ತೋತ್ರ ಸ್ತೋತ್ರರೂಪದ ಕಾವ್ಯವಾಗಿದ್ದೂ ಮೂಲತಃ ಅಪೂರ್ವವಾದ ಶಾಸ್ತ್ರ. ಆದ್ದರಿಂದ ಇದು ತಾತ್ತ್ವಿಕವಾಗಿ ಹೃದಯವನ್ನು ತಟ್ಟುವಂತೆ ಅದು ತಟ್ಟಲಾರದು. ಅರ್ಥವೈಪುಲ್ಯಕ್ಕಂತೂ ದ್ವಾದಶಸ್ತೋತ್ರಕ್ಕೆ ಸಾಟಿಯಾದ ಮತ್ತೊಂದು ಸ್ತೋತ್ರಕೃತಿಯೇ ಇಲ್ಲ. ಅದಕ್ಕೆ ಅದೇ ಸಾಟಿ. ವೇದೋಪನಿಷತ್ತುಗಳ ದರ್ಶನದ ಸಾರಸರ್ವಸ್ವ ಇಲ್ಲಿ ಮಡುಗಟ್ಟಿ ನಿಂತಿದೆ[೧].

ಹರಿದಾಸಸಾಹಿತ್ಯ ಯಾವುದೇ ಬೇರಾವ ಭಾಷೆಯಲ್ಲಿಯೂ ಇರದ ಕನ್ನಡದ ಅಪೂರ್ವ ದಾರ್ಶನಿಕ ಭಕ್ತಿಸಾಹಿತ್ಯ. ಆದರೆ ಅದರ ಎಲ್ಲ ಹಿರಿಮೆ ಗರಿಮೆಗಳ ಮುಖ್ಯ ಸ್ಫೂರ್ತಿ ದ್ವಾದಶಸ್ತೋತ್ರ. ಹರಿದಾಸಸಾಹಿತ್ಯದಲ್ಲಿ ತುಂಬಿರುವ ರಾಗ ತಾಳಗಳ

---

೧. ಶ್ರೀವ್ಯಾಸಮಧ್ವಸೇವಾಪ್ರತಿಷ್ಠಾನವು ಸಧ್ಯದಲ್ಲೇ ಪ್ರಕಟಿಸಲಿರುವ ನನ್ನ ವಿಶ್ವಪತಿತೀರ್ಥೀಯ ಟೀಕಾಸಂಪಾದನೆಯಲ್ಲಿ ಈ ಬಗ್ಗೆ ವಿವರಗಳನ್ನು ಕಾಣಬಹುದು.

ವೈವಿಧ್ಯ ದ್ವಾದಶಸ್ತೋತ್ರದ ನೇರ ಸ್ಫೂರ್ತಿ. ದರ್ಶನವಂತೂ ಅದರದ್ದೇ. ಹರಿದಾಸ ಸಾಹಿತ್ಯದಲ್ಲಿ ಭಗವಂತನ ಅವಯವಗಳ ವರ್ಣನೆ, ಉಪದೇಶ, ಕೇಶವನಾಮ, ದಶಾವತಾರ ಸ್ತೋತ್ರ, ಲಕ್ಷ್ಮೀ ಬ್ರಹ್ಮಾದಿ ಇತರ ದೇವತೆಗಳ ಸ್ತುತಿ ಎಲ್ಲವೂ ದ್ವಾದಶಸ್ತೋತ್ರದ ಪ್ರೇರಣೆಯ ಫಲಶ್ರುತಿ. ಎಂದರೆ ಈ ಒಂದು ಕೃತಿ ಒಂದು ಅತ್ಯಂತ ಪ್ರಭಾವಿಯಾದ ಸಾಹಿತ್ಯಪ್ರಾಕಾರಕ್ಕೆ ಜನ್ಮ ನೀಡಿತು. 'ಪ್ರೀಣಯಾಮೋ ವಾಸುದೇವಂ', 'ಶ್ರೀಯರ್ತ್ಯಕಟಾಕ್ಷಬಲವತ್ಯಜಿತಂ ನಮಾಮಿ', 'ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ', 'ಶುಭತಮಕಥಾಶಯ ಪರಮ ಸದೋದಿತ ಜಗದೇಕಕಾರಣ ರಾಮ ರಮಾರಮಣ', 'ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿವಂದಿತಂ' ಇವು ದಾಸಸಾಹಿತ್ಯದಲ್ಲಿ ಪಲ್ಲವಿಗಳಿಗೆ ಸ್ಫೂರ್ತಿಯಾದರೆ 'ಆನಂದತೀರ್ಥಪರಾನಂದವರದ' ಎಂಬುದು ಅಂಕಿತದ ಪರಿಕಲ್ಪನೆಗೆ ನಾಂದಿಯಾಗಿದೆ.

ಇಂತಹ ಸ್ತೋತ್ರರಚನೆಯನ್ನು ಆಚಾರ್ಯರು ಪ್ರಾರಂಭಿಸಿದ್ದು ಉಡುಪಿಯಲ್ಲಿ; ಅದನ್ನು ರಚಿಸಿ ಹಾಡುತ್ತಲೇ ಸಮುದ್ರತೀರದ ಬಳಿಗೆ ಶಿಷ್ಯರೊಂದಿಗೆ ಸಾಗಿದರು. ಆಗಲೇ ಹಡಗೊಂದು ಮುಳುಗುವಂತಾಗುವ ಘಟನೆ ನಡೆದದ್ದು. ಆಚಾರ್ಯರು ಹಡಗನ್ನು ಮುಳುಗದಂತೆ ಪಾಲಿಸಿದರು. ಹಡಗಿನ ಯಜಮಾನ ಆಚಾರ್ಯರಿಗೆ ಗೋಪೀಚಂದನಗಡ್ಡೆಯನ್ನು ಸಮರ್ಪಿಸಿದ. ಅದರಿಂದ ಶ್ರೀಕೃಷ್ಣ ಪ್ರಾದುರ್ಭವಿಸಿದ. ಆ ವೇಳೆಗೆ ದ್ವಾದಶಸ್ತೋತ್ರದ ಐದು ಅಧ್ಯಾಯಗಳು ಪೂರೈಸಿದ್ದವು. ಎಂದರೆ ದ್ವಾದಶಸ್ತೋತ್ರ ಹಾಡಿದ ಮೇಲೆ ಅಲ್ಲ; ಹಾಡುವಾಗಲೇ ಶ್ರೀಕೃಷ್ಣ ಕಣ್ಣಿಗೆ ಕಾಣಿಸಿದ. ದ್ವಾದಶಸ್ತೋತ್ರದ ಮಹಿಮೆ ಇಂತಹುದು. ಅದನ್ನು ಶ್ರದ್ಧೆಯಿಂದ ಹಾಡುವವನಿಗೆ ಭಗವದ್ದರ್ಶನ ಖಚಿತ ಎಂಬ ಸೂಚನೆ ಇಲ್ಲಿದೆ. ಆಚಾರ್ಯರು ಕೃಷ್ಣನನ್ನು ಕಂಡ ಸಂಭ್ರಮದಲ್ಲಿ ಆ ರೂಪವನ್ನೇ ವಿಶೇಷವಾಗಿ ಸ್ತುತಿಸಿ ದಶಾವತಾರಸ್ತುತಿ ರಚಿಸಿದರು. ಹೀಗೆಂದು ಅದರ ಪ್ರಸಿದ್ಧ ವ್ಯಾಖ್ಯಾತೃಗಳಾದ ಶ್ರೀ ವಿಶ್ವಪತಿತೀರ್ಥರು ಬರೆದಿರುವರು:

**"ತತ್ರ ಚೇತ್ಥಂ ಆಭಾಣಕಂ ವರ್ಣಯಂತಿ । ರೂಪ್ಯಪೀಠಪುರಾತ್ ಶ್ರೀಕೃಷ್ಣಾನಯನಾರ್ಥಂ ಪಶ್ಚಿಮಸಮುದ್ರಂ ಪ್ರತಿ ಗಮನಸಮಯೇ 'ವಂದೇ ವಂದ್ಯಂ' ಇತ್ಯಾದಿನಾ ಭಗವಂತಂ ಸ್ತುವನ್ನೇವ ಗತಃ ಶ್ರೀಮದಾನಂದತೀರ್ಥಮುನಿಃ ಸಮುದ್ರತೀರಂ ಗತಃ ಸನ್ ದ್ವಾರಕಾತಃ ಸಮಾಗತಂ ಶ್ರೀಕೃಷ್ಣಂ ದೃಷ್ಟ್ವಾ ಸಮನಂತರಮೇವ ದೇವಕೀನಂದನೇತ್ಯಾದಿನಾ ಆನಂದಸುಪೂರ್ಣೇತ್ಯಂತೇನ ಶ್ರೀಕೃಷ್ಣಂ ಸ್ತುತ್ವಾ ಅನಂತರಂ ಚ ಮತ್ಸ್ಯಕರೂಪೇತ್ಯಾದಿನಾ ದಶಾವತಾರಾತ್ಮಕತಯಾ ಚ ತಮೇವ ಸ್ತುತವಾನಿತಿ ।"**

ಇಂದ್ರದೇವರು ಶ್ರೀಮದಾಚಾರ್ಯರ ಬಳಿ ವೃಷಭರೂಪದಿಂದ ಸೇವಕರಾಗಿದ್ದರು. ಆಚಾರ್ಯರ ಗ್ರಂಥಭಂಡಾರವನ್ನು ಹೊರುತ್ತಿದ್ದರು; ಪಾಠಕಾಲದಲ್ಲಿ ಅವರ ಬಳಿಯೇ ಕುಳಿತು ಶ್ರವಣ ಮಾಡುತ್ತಿದ್ದರು; ತಮ್ಮ ಅಪೂರ್ವಗ್ರಂಥಗಳಿಗೆ ಈ ಎತ್ತು ವ್ಯಾಖ್ಯಾನ ರಚಿಸುವುದು ಎಂದು ಒಮ್ಮೆ ಶ್ರೀಮದಾಚಾರ್ಯರು ನುಡಿದಾಗ, ಕೆಲವು ಮತ್ಸರಿಗಳು ಅದನ್ನು ಹಾವು ಕಡಿದು ಸಾಯುವಂತೆ ಶಪಿಸಿದರಂತೆ. ಹಾಗೆ ಅದು ಸತ್ತೂ ಹೋಯಿತಂತೆ. ಆಗ ಶ್ರೀಮದಾಚಾರ್ಯರು ದ್ವಾದಶಸ್ತೋತ್ರವನ್ನು ಪಠಿಸಿ ಅದರಿಂದ ಅಭಿಮಂತ್ರಿತವಾದ ಜಲವನ್ನು ಆ ಎತ್ತಿಗೆ ಪ್ರೋಕ್ಷಿಸಿ ಅದನ್ನು ಪುನಃ ಬದುಕಿಸಿದರು. ಆ ಎತ್ತೇ ಟೀಕಾಕೃತ್ಪಾದರೆನ್ನಿಸಿದ ಶ್ರೀ ಜಯತೀರ್ಥರು ಎಂಬುದಾಗಿ ಜಯತೀರ್ಥ ವಿಜಯಗಳಲ್ಲಿ ಉಕ್ತವಾಗಿದೆ.

ಈ ಮೂಲಕ ದ್ವಾದಶಸ್ತೋತ್ರದ ವಿಷಹರಸಾಮರ್ಥ್ಯವನ್ನು ಶ್ರೀಮದಾಚಾರ್ಯರು ಭಕ್ತವರ್ಗಕ್ಕೆ ತೋರಿಸಿರುವರು. ಅದರ ಸಂಕೇತವಾಗಿ ನೈವೇದ್ಯಸಮಯದಲ್ಲಿ ದ್ವಾದಶಸ್ತೋತ್ರವನ್ನು ಪಠಿಸುವ ಸಂಪ್ರದಾಯ ಇಂದೂ ಆಸ್ತಿಕರಲ್ಲಿದೆ.

ಇದರ ಮೊದಲ ಅಕ್ಷರ ವ (ವಂದೇ); ಕೊನೆಯ ಅಕ್ಷರ ದ (ಆನಂದತೀರ್ಥಪರಾನಂದವರದ). ವ ಎಂಬುದು ಅಮೃತಬೀಜ. ದ ಎಂದರೆ ಅದನ್ನು ಕೊಡುವುದು ಎಂದರ್ಥ. ಹೀಗೆ (ವಿಶವನ್ನು ಪರಿಹರಿಸಿ)ಅಮೃತವನ್ನು ನೀಡುವ ಅಪೂರ್ವಕೃತಿಯೆಂಬ ಸೂಚನೆ ಈ ಆದ್ಯಂತ ಅಕ್ಷರಗಳ ಜೋಡಣೆಯಲ್ಲೇ ಅಡಗಿದೆ. ಇದನ್ನು ನೈವೇದ್ಯಕಾಲಕ್ಕೆ ತಪ್ಪದೇ ಪಠಿಸುವ ಸಂಪ್ರದಾಯ ವೈಷ್ಣವರಲ್ಲುಂಟು.

# ಇತರ ಗ್ರಂಥಗಳು

'ಸರ್ವಮೂಲ' ವೆಂಬುದಾಗಿ ಪ್ರಸಿದ್ಧವಾಗಿರುವ ಆಚಾರ್ಯರ ಗ್ರಂಥಗಳನ್ನು ಪರಂಪರೆ ನಿಖರವಾಗಿ ಈ ಮೂವತ್ತೇಳು ಎಂಬುದಾಗಿ ಗುರುತಿಸಿದೆ. ವ್ಯಾಸಸಾಹಿತ್ಯ ಹಾಗೂ ದಾಸಸಾಹಿತ್ಯ ಎರಡರಲ್ಲೂ ಈ ಬಗ್ಗೆ ಒಂದೇ ಬಗೆಯ ನಿರೂಪಣೆ ಉಂಟು. ಇವುಗಳ ಜೊತೆಗೆ (1) ಕಂದುಕಸ್ತುತಿ[೧] ಎಂಬ ಒಂದು ಸ್ತೋತ್ರ ಮತ್ತು (2) ಬಿಲ್ವಮಂಗಲಃ ಸಾಧುಃ[೨]' ಎಂಬ ಒಂದು ವಾಕ್ಯಗಳನ್ನು ಆಚಾರ್ಯ ರಚನೆಗಳೆಂಬುದಾಗಿ ಒಮ್ಮತದಿಂದಲೇ ಸಂಪ್ರದಾಯ ಅಂಗೀಕರಿಸಿದೆ. 'ಬಿಲ್ವಮಂಗಲಃ ಸಾಧುಃ' ಎಂಬ ವಾಕ್ಯಕ್ಕೆ ಶ್ರೀ ಸತ್ಯಪರಾಯಣತೀರ್ಥರು ವ್ಯಾಖ್ಯಾನ ಬರೆದಿದ್ದು ಅದು ಮುದ್ರಣವೂ ಆಗಿದೆ. ಇದರಿಂದಾಗಿ ಸರ್ವಮೂಲವೆಂಬುದಾಗಿ ಪ್ರಸಿದ್ಧವಿರುವ ಕೃತಿಗಳೊಂದಿಗೆ ಶ್ರೀಮದಾಚಾರ್ಯರು ಇತರ ಕೃತಿಗಳನ್ನೂ ರಚಿಸಿರುವರೆಂದು ಒಪ್ಪಬೇಕಾಗುತ್ತದೆ. ಅನೇಕ ಪ್ರಾಚೀನ ಕೃತಿಗಳಲ್ಲಿ ಈ ಕೆಳಗಿನ ಶ್ಲೋಕವು ಆಚಾರ್ಯರ ಕೃತಿಯೆಂದೇ ಉಲ್ಲೇಖಿಸಲ್ಪಟ್ಟಿದೆ:

(3) **ಚಂಚಲೋಽಯಂ ಸಮಾನೇಯೋ ಮನೋಮೀನೋ ಹರಿಸ್ಥಲೇ ।**
**ವಿಷಯೋದಕಸಂಚಾರೀ ಸುಯತ್ನಬಡಿಶಾಹೃತಃ ॥**

ಇದಕ್ಕೆ ಹತ್ತಾರು ಪತ್ರಗಳಷ್ಟು ವಿಸ್ತಾರವಾದ ವ್ಯಾಖ್ಯಾನವನ್ನು ಶ್ರೀಸತ್ಯಪಾರಾಯಣತೀರ್ಥರು ರಚಿಸಿದ್ದು ಅದು ನನ್ನ ಸಂಗ್ರಹದಲ್ಲಿ (ಶ್ರೀ

---

**ಕಂದುಕಸ್ತುತಿಃ(ಶ್ರೀಕೃಷ್ಣಪದ್ಯಮ್)**

೧. ಅಂಬರಗಂಗಾಚುಂಬಿತಪಾದಃ ಪದತಲವಿದಲಿತಗುರುತರಶಕಟಃ ।
ಕಾಲಿಯನಾಗಕ್ಷ್ವೇಲನಿಹಂತಾ ಸರಸಿಜನವದಲವಿಕಸಿತನಯನಃ ॥
ಕಾಲಘನಾಲೀಕರ್ಬುರಕಾಯಃ ಶರಶತಶಕಲಿತರಿಪುಶತನಿವಹಃ ।
ಸಂತತಮಸ್ಮಾನ್ ಪಾತು ಮುರಾರಿಃ ಸತತಗಸಮಜವಖಗಪತಿನಿರತಃ ॥

ಶ್ರೀಕೃಷ್ಣಪದ್ಯ ಎಂಬುದಾಗಿಯೂ ಪ್ರಸಿದ್ಧಿಯಿರುವ ಈ ಕಂದುಕಸ್ತುತಿಯು ಶ್ರೀಮದಾಚಾರ್ಯರ ಬಾಲ್ಯದ ರಚನೆ. ಬಾಲ್ಯದಲ್ಲೊಮ್ಮೆ ಚಂಡಾಟವಾಡುವಾಗ ರಚಿಸಿದ ಕೃತಿ ಎಂಬುದು ಇದರ ಹಿನ್ನಲೆ. ಇದರ ಛಂದೋಗತಿಯು ಕಂದುಕದ ಗತಿಗೆ ಅನುಗುಣವಾಗಿ ಇರುವುದರಿಂದ ಇದು ಕಂದುಕಸ್ತುತಿ. ಪ್ರತಿಯೊಂದರಲ್ಲೂ ನಾವೀನ್ಯ, ಪೂರ್ಣತೆಗಳನ್ನು ತೋರುವ ಶ್ರೀಮದಾಚಾರ್ಯರ ಸಹಜ ಪ್ರವೃತ್ತಿಗೆ ಇದೊಂದು ಅಪೂರ್ವ ನಿದರ್ಶನ.

೨. **ಬಿಲ್ವಮಂಗಲಃ ಸಾಧುಃ** ಎಂಬ ವಾಕ್ಯವೂ ಸಹ ಶ್ರೀಮದಾಚಾರ್ಯರ ರಚನೆ ಎಂಬುದಾಗಿ ಸಂಪ್ರದಾಯ ಒಪ್ಪಿದೆ. ಶ್ರೀಸತ್ಯಪರಾಯಣತೀರ್ಥರು ಇದಕ್ಕೆ ಅನೇಕ ಅರ್ಥಗಳನ್ನು ವಿವರಿಸುವ ಟೀಕೆಯೊಂದನ್ನು ರಚಿಸಿದ್ದು ಅದು ಪ್ರಕಟಿತವೂ ಆಗಿದೆ.

ಜಯತೀರ್ಥಸಂಸ್ಕೃತಹಸ್ತಲಿಖಿತ ಗ್ರಂಥಾಲಯ ವ್ಯಾಸನಕೆರೆ) ಉಪಲಬ್ಧವಿದೆ. ಶ್ರೀವಾದಿರಾಜಸ್ವಾಮಿಗಳು ಈ ಶ್ಲೋಕಕ್ಕೆ ವ್ಯಾಖ್ಯಾನ ರಚಿಸಿರುವ ವಿಷಯ ನಾರಾಯಣತೀರ್ಥರು ಬರೆದಿರುವ ಒಂದು ಕೈಬರಹದ ದಾಖಲೆಯಲ್ಲಿ ಕಂಡುಬರುತ್ತದೆ.(ವಿವರಗಳಿಗೆ ತತ್ತ್ವವಾದ ಡಿಸೆಂಬರ್ 1981 ಒಂದು ಅಪೂರ್ವ ದಾಖಲೆ ಎಂಬ ನನ್ನ ಲೇಖನವನ್ನು ನೋಡಿ) ಶ್ರೀ ಸತ್ಯಪಾರಾಯಣತೀರ್ಥರು ಸ್ಪಷ್ಟವಾಗಿ ಬಿಲ್ವಮಂಗಲಃ ಸಾಧುಃ ಎಂಬ ವಾಕ್ಯವನ್ನು ಸರ್ವಮೂಲಾಂತರ್ಭೂತ ಎಂದು ಸಂಪ್ರದಾಯವನ್ನು ಉಲ್ಲೇಖಿಸಿರುವರು. (**'ಬಿಲ್ವ ಮಂಗಲಃ ಸಾಧುಃ' ಇತಿ ಸರ್ವಜ್ಞೋಕ್ತಂ ವಾಕ್ಯಂ ಸರ್ವಮೂಲಾಂತರ್ಭೂತಂ ಇತಿ ಸಂಪ್ರದಾಯವಿದಃ**)

ಈ ಎರಡು ಕೃತಿಗಳು ಸರ್ವಮೂಲಾದ್ಯಂತ ಶ್ಲೋಕಸಂಗ್ರಹರೂಪವಾದ ಅನೇಕ ಪ್ರಾಚೀನ ಹಸ್ತ ಪ್ರತಿಗಳಲ್ಲೂ ಉಲ್ಲೇಖಿಸಲ್ಪಟ್ಟಿದೆ. ಬಿದರಹಳ್ಳಿ ಶ್ರೀನಿವಾಸತೀರ್ಥರು ರಚಿಸಿರುವ ಸರ್ವಮೂಲಾದ್ಯಂತಶ್ಲೋಕಸಂಗ್ರಹದಲ್ಲೂ ಇವು ಉಲ್ಲೇಖಿಸಲ್ಪಟ್ಟಿವೆ.

ಶ್ರೀಹೃಷೀಕೇಶತೀರ್ಥೀಯ ಪಾಠಾನುಸಾರಿ ಎಂಬುದಾಗಿ ಅಖಿಲಭಾರತಮಾಧ್ವ ಮಹಾ ಮಂಡಲವು ಪ್ರಕಟಿಸಿರುವ ಸರ್ವಮೂಲಗ್ರಂಥಗಳಲ್ಲೂ ಇವೆಲ್ಲ ದೊರೆಯುತ್ತವೆ. ಆದರಲ್ಲಿ ಈ ಕೆಳಗಿನ ಶ್ಲೋಕಗಳು ಸಹ ಕಂಡುಬರುವುದು.

(5) **ರಾಮೋಽಖಿಲಾನಂದತನುಃ ಸ ಏವ ಭೀಮೋಽತಿಪಾಪೇಷು ದುರಂತವೀರ್ಯಃ ।**
**ಕಾಮಃ ಏವಾಜಿತಕಾಮಿನೀಷು ಸೋಮಃ ಸ ಏವಾತ್ಮಪದಾಶ್ರಿತೇಷು ॥**

**(ಪ್ರಾದೇಶಮಾತ್ರಂ ತತ್ತ್ವಾರ್ಥೇ ಜಯಾರ್ಥೇಽರತ್ನಿಮಾತ್ರಕಮ್ ।**
**ಖ್ಯಾತಿಪೂಜಾರ್ಥಿನೋ ಹಸ್ತಮಾತ್ರಂ ಪತ್ರಮುದಾಹೃತಮ್ ॥**

**ಅಸಂಬದ್ಧಪ್ರವಚನಮಸಂಬದ್ಧಾಃ ಪ್ರವೃತ್ತಯಃ ।**
**ಪ್ರತಿಜ್ಞಾಯಾಶ್ಚ ಸಂತ್ಯಾಗಃ ಕಥಾಯಾಃ ಪೂರ್ವನಿಗ್ರಹಃ ॥**

**ಶ್ರುತಿರ್ನಾಮಸಮುದ್ದಿಷ್ಟಂ ಲಿಂಗ ತಲ್ಲಕ್ಷಣಂ ಸ್ಮೃತಂ ।**
**ಪದಾನಿ ನಿರಪೇಕ್ಷಾಣಿ ವಾಕ್ಯಂ ಪ್ರಕರಣಂ ತಥಾ ॥**

**ಏಕಸ್ಯ ಪ್ರತಿಪತ್ತ್ಯಂಗವಚನಂ ಸ್ಥಾನಮುಚ್ಯತೇ ।**
**ಅನ್ಯತ್ರ ತತ್ಸಮೋಕ್ತಿಸ್ತು ಸಮಾಖ್ಯಾಸ್ಥಾನಮೇವ ಚ ॥**
**ಅಧ್ಯಾಯಾದಿಪ್ರಬಂಧಸ್ತು ಪ್ರಭೇದಾ ಆಗಮಸ್ಯ ಚ ॥)**

ಆಚಾರ್ಯರು ಅನೇಕ ಕೃತಿಗಳನ್ನು ರಚಿಸಿರುವರೆಂಬ ವಿವರ ಸುಮಧ್ವವಿಜಯದಲ್ಲೂ ಬಂದಿದೆ:

**ನಾನಾಸುಭಾಷಿತಸ್ತೋತ್ರಗಾಥಾದಿಕೃತಿಸತ್ಕೃತೀಃ ।**
**ತ್ವಯಿ ರತ್ನಾಕರೇ ರತ್ನಶ್ರೇಣೀರ್ವಾ ಗಣಯಂತಿ ಕೇ ॥**

'ಪ್ರಮೇಯನವಮಾಲಿಕೆ' ಎಂಬ ಅಣುಮಧ್ವವಿಜಯದಲ್ಲೂ,

''**ಶತಗ್ರಂಥಕರ್ತಾ**' ಎಂಬ ಮಾತಿದ್ದು

ಇದಕ್ಕೆ ಶ್ರೀರಾಘವೇಂದ್ರತೀರ್ಥರು ಮತ್ತು ಶ್ರೀ ರಘೂವರ್ಯತೀರ್ಥರು 'ಬಹುಗ್ರಂಥಕರ್ತಾ' ಎಂದೇ ವ್ಯಾಖ್ಯಾನ ಬರೆದಿರುವರು.

ಇವುಗಳೊಂದಿಗೆ (6) 'ತಿಥಿನಿರ್ಣಯ' ಮತ್ತು (7) 'ನ್ಯಾಸಪದ್ಧತಿ'[೧] ಎಂಬ ಮತ್ತೆರಡು ಕೃತಿಗಳು ಅಖಿಲಭಾರತಮಾಧ್ವಮಹಾಮಂಡಲದ ಪ್ರತಿಯಲ್ಲಿ ಉಂಟು. ನ್ಯಾಸ ಪದ್ಧತಿಯು ಉತ್ತರಾದಿ ಮಠದಿಂದ ಪ್ರಕಾಶಿತವಾದ ಸರ್ವಮೂಲದಲ್ಲೂ ಉಂಟು.

ಅವುಗಳ ಹಸ್ತಪ್ರತಿಗಳು ನನ್ನ ಸಂಗ್ರಹದಲ್ಲೂ ದೊರೆತಿವೆ. ಇದರಲ್ಲಿ 'ತಿಥಿನಿರ್ಣಯ'ಕ್ಕೆ 'ಮಧುಸೂದನಭಿಕ್ಷು' ಎಂಬವರ ವ್ಯಾಖ್ಯಾನವೂ ನನ್ನಲ್ಲಿ ಉಪಲಬ್ಧವಿದೆ. ಸಂನ್ಯಾಸಪದ್ಧತಿಯ ಉಲ್ಲೇಖ ವಿಷ್ಣುತೀರ್ಥರ ಸಂನ್ಯಾಸಪದ್ಧತಿಗೆ ಶ್ರೀಸುರೋತ್ತಮತೀರ್ಥರು ರಚಿಸಿರುವ ವ್ಯಾಖ್ಯಾನದಲ್ಲಿ ಉಂಟು.

ಇದರೊಂದಿಗೆ ಯಮಕಭಾರತದ (8) 'ಭಾ ಭಾ ಭಾ ಭಾ' ಎಂಬ ಶ್ಲೋಕಕ್ಕೆ ವಿವರಣರೂಪವಾಗಿ ಶ್ರೀಮದಾಚಾರ್ಯರು ನೀಡಿದ ಅರ್ಥವಿಶೇಷಗಳನ್ನು ನರಹರಿತೀರ್ಥರು ತಮ್ಮ ಯಮಕಭಾರತ ಟೀಕೆಯಲ್ಲಿ '**ಇತಿ ಸರ್ವವಿದೀರಿತಂ**' ಎಂಬುದಾಗಿ ಉಲ್ಲೇಖಿಸಿರುವರು. ಹೃಷೀಕೇಶತೀರ್ಥರ ಪಾಠದಲ್ಲೂ ಅವು ವಾಕ್ಯರೂಪದಲ್ಲಿ ಲಿಖಿತವಾಗಿವೆ. ಶ್ರೀ ಸತ್ಯಧರ್ಮತೀರ್ಥರು ಅವುಗಳನ್ನೆಲ್ಲ ತಮ್ಮ ಭಾಗವತ ಟಿಪ್ಪಣಿಯಲ್ಲಿ ಉಲ್ಲೇಖಿಸಿ ಹೀಗೆ ಅವುಗಳೆಲ್ಲ ಶ್ರೀಮದಾಚಾರ್ಯರ ಮುಖಕಮಲದಿಂದ ಹೊರಹೊಮ್ಮಿ ಶ್ರೀ ಹೃಷಿಕೇಶತೀರ್ಥರಿಂದ ಲಿಖಿತವಾಗಿರುವವು ಎಂಬುದಾಗಿ ಬರೆದಿರುವರು;

---

೧. ನ್ಯಾಸಪದ್ಧತಿ ಅಥವಾ ಸನ್ಯಾಸಪದ್ಧತಿ ಎಂಬ ಈ ಕೃತಿ ಯತಿಗಳ ದೈನಂದಿನ ಸದಾಚಾರಕ್ರಮದ ನಿರೂಪಣೆಯಾಗಿದೆ.

# ‘ಭಾ’ ಧಾತುವ್ಯಾಖ್ಯಾನ

‘ಭಾ’ ದೀಪ್ತೌ
ಭಾ ಜ್ಞಾನೇ
ಭಾ ಆಧಾರಭಾವೇ
ಭ ಔದಾರ್ಯೇ
ಭ ಸಂಧಾನೇ
ಭ ಉಪಾದಾನೇ
ಭ ನಿಕಟಭಾವೇ
ಭ ಸೇವ್ಯತ್ವೇ
ಭ ಊರೀಕರಣೇ
ಭ ಸಂತತಭಾವೇ
ಭ ನಾನಾಭಾವೇ
ಭ ವೈಲಕ್ಷಣ್ಯೇ
ಭ ಆಧಿಕ್ಯೇ
ಭ ಸ್ವಾತಂತ್ರ್ಯೇ
ಭ ಆನಂದೇ
ಭ ಸಂತತವಚನೇ
ಭ ಪೂಜ್ಯಭಾವೇ
ಭ ವಿಸ್ತಾರೇ
ಭ ವಿನಾಶನೇ
ಭ ಸ್ವಾಮಿಭಾವೇ
ಭ ವಿನಿಶ್ಚಲಭಾವೇ
ಭ ಉಗ್ರಭಾವೇ
ಭ ಉದ್ಗಾನೇ
ಭ ಸಂಮೋಹನೇ
ಭ ಸಂಚಾರೇ
ಭ ವಿದಾರಣೇ
ಭ ಆಲೋಚನೇ
ಭ ಸುಂದರಭಾವೇ

—(ಇತಿ) ಶ್ರೀಮದುಡುಪೀಶ್ರೀಕೃಷ್ಣಪಾದಪದ್ಮಾರಾಧಕಹೃಷೀಕೇಶ ಶ್ರೀಮಚ್ಚರಣೈಃ* ಶ್ರೀಮಧ್ವರಾಜಮುಖಕಮಲಾಚ್ಛ್ರುತ್ವಾ ಲಿಖಿತಮೇತದ್ಧಾತುವ್ಯಾಖ್ಯಾನಮಿತಿ ತತ್ಸಂಪ್ರದಾಯಾಭಿಜ್ಞೋಕ್ತಮುಖಾಚ್ಛ್ರುತ್ವಾ ಕೃತೇಯಂ ಲೇಖೇತಿ ಏತದನ್ಯತಮೋ ಯೋಗ್ಯೋ ಭೋಽಸ್ಯಾಸ್ತೀತಿ ಭವಾನಿತಿ ವಾ ತ್ವಂ ವಿದಿತೋಽಸೀತ್ಯನ್ವಯಃ ॥ —ಭಾಗವತಟಿಪ್ಪಣೀ (x–ಅ.೪, ಶ್ಲೋ. ೧೪, ಪತ್ರ ೨

ನರಹರಿತೀರ್ಥೀಯವ್ಯಾಖ್ಯಾನದಲ್ಲೂ ಭಾ ಧಾತುವಿನ ಅರ್ಥವಿವರಗಳು ಬಂದಿದ್ದು ಕೊನೆಯಲ್ಲಿ ಅವೆಲ್ಲ ಶ್ರೀಮದಾಚಾರ್ಯರೇ ತಿಳಿಸಿದ್ದು ಎಂಬ ಉಲ್ಲೇಖವೂ ಇದೆ :

**ದೀಪ್ತೌ ಜ್ಞಾನೇ ಭ ಆಧಾರೇ ಭ ಭ ಔದಾರ್ಯ ಏವ ಚ ।**
**ಸಂಧಾನೇ ಭ ಉಪಾದಾನೇ ನಿಕಟತ್ವೇ ಚ ಕಥ್ಯತೇ ॥**

---

* ಶ್ರೀಹೃಷೀಕೇಶತೀರ್ಥೀಯ ಲಿಖಿತ ಸರ್ವಮೂಲ ಪ್ರತಿಯಲ್ಲಿ ಶ್ರೀಸತ್ಯಧರ್ಮತೀರ್ಥರಿಂದ ಉದಾಹೃತ ‘ಭಾ’ ಧಾತುವ್ಯಾಖ್ಯಾನ ಇಂದೂ ಉಪಲಬ್ಧವಿದೆ.

ಭ ಸೇವ್ಯತ್ವೇ ಚ ವಿದ್ಯಾದ್ಭಿರೂರೀಕರಣ ಏವ ಚ ।
ಸಂಪೂರ್ಣನತಿಭಾವೇ ಭಾ ನಯನೇ ನಮನೇ ತಥಾ ॥
ವೈಲಕ್ಷಣ್ಯೇ ತಥಾಽಧಿಕ್ಯೇ ಸ್ವಾತಂತ್ರ್ಯೇ ಭ ಉದೀರ್ಯತೇ ।
ಭ ಆನಂದೇ ಭ ಸಂಪೂರ್ತೌ (ರ್ಣ) ತತಪಾದೇಽಪಿ ಕಥ್ಯತೇ ॥
ಪೂಜ್ಯಭಾವೇ ಭ ವಿಸ್ತಾರೇ ಭ ವಿನಾಶನ ಈರ್ಯತೇ ।
ಸ್ವಾಮಿತ್ವೇ ನಿಶ್ಚಲೇ ಭಾವೇ ಭಾವೇ ಉ (ಷೂ) ದ್ಯಾನ ಏವ ಚ ॥
ಸಂಮೋಹನೇ ಚ (ಭ) ಸಂಚಾರೇ ಭಾ ವಿಧಾರಣ ಈರ್ಯತೇ ।
ಆಲೋಚನೇ ಭ ಸೌಂದರ್ಯ ಇತಿ ಸರ್ವವಿದೀರಿತಮ್ ॥

ಯಮಕಭಾರತ ಟೀಕಾ ೩೪೨-೩೪೫

(9) ಶ್ರೀ ನಾರಾಯಣಾಪಂಡಿತಾಚಾರ್ಯಕೃತ "ದಿನತ್ರಯಮೀಮಾಂಸಾ" ಎಂಬ ಕೃತಿಯಲ್ಲಿ "ಪ್ರಕಾರೋಽಯಂ ಶ್ರೀಮದಾಚಾರ್ಯೈಃ ಸೂರ್ಯಸಿದ್ಧಾಂತ ವಚನಾದೌ ವ್ಯಾಖ್ಯಾತಃ" ಎಂಬುದಾಗಿ ಶ್ರೀಮದಾಚಾರ್ಯಕೃತ ವಾಕ್ಯಗಳ ಉಲ್ಲೇಖ ಉಂಟು.

(10) ತಂಜಾವೂರು ಅರಮನೆ ಗ್ರಂಥಾಗಾರದಲ್ಲಿ ಸಾರಭೋಗಪ್ರಕಾರ ಎಂಬ ನೈವೇದ್ಯ ಚಿಂತನೆಯ ಕ್ರಮಕ್ಕೆ ಸಂಬಂಧಿಸಿದ ಅಪೂರ್ವಕೃತಿಯೆಂದು ಶ್ರೀಮದಾನಂದತೀರ್ಥ ಭಗವತ್ಪಾದಕೃತ ಎಂಬುದಾಗಿ ಸಂರಕ್ಷಿತವಾಗಿದೆ. (No. D8083 ಈ ಎರಡು ಕೃತಿಗಳ ಬಗ್ಗೆಯೂ ಸಹ ಸಂಶೋಧನೆ ನಡೆಯಬೇಕಿದೆ.

ಈ ಎಲ್ಲಾ ವಿವರಗಳನ್ನೂ ಪರಿಶೀಲಿಸಿದಾಗ ಶ್ರೀಮದಾಚಾರ್ಯರ ಗ್ರಂಥಗಳ ಸಂಖ್ಯೆ ಅಪಾರ ಎಂಬುದು ಖಚಿತಪಡುತ್ತದೆ. ಭಾರತೀರಮಣರಾದ ಅವರ ಪ್ರತಿಯೊಂದು ಮಾತು ಒಂದೊಂದು ಗ್ರಂಥವೇ ಎಂಬುದು ಉಚಿತವೂ ಆಗಿದೆ. ಅಂತಹ ಅವರ ಅನೇಕ ಮಾತುಗಳನ್ನು ಅವರ ಶಿಷ್ಯರುಗಳು ಬರೆದಿಟ್ಟುಕೊಂಡಿದ್ದು ತೀರ ಸಹಜವೂ ಹೌದು. ಎಲ್ಲ ಮಾತನ್ನೂ ಬರೆದಿಟ್ಟುಕೊಳ್ಳುವುದು ಅಸಾಧ್ಯ. ಅಂತಹವುಗಳಲ್ಲಿ ಎಲ್ಲೋ ಕೆಲವು ಹೀಗೆ ಉಳಿದು ಬಂದಿವೆ ಎಂಬುದಾಗಿ ಭಾವಿಸಬಹುದು.

ಹರಿದಾಸಸಾಹಿತ್ಯದಲ್ಲಿ ಸಹ ಶ್ರೀಮದಾಚಾರ್ಯಕೃತ ಗ್ರಂಥಗಳ ಸಂಖ್ಯೆ ೩೭ ಎಂದು ನಿಖರವಾಗಿ ಉಲ್ಲೇಖಿಸಲ್ಪಟ್ಟಿದೆ :

೧. ಆರಾರುಮೇಲೊಂದು ಅಧಿಕಲೆಕ್ಕದ ಗ್ರಂಥಸಾರವನು ರಚಿಸಿ.....

ಶ್ರೀವ್ಯಾಸರಾಜರು

೨. ಮೂವತ್ತೇಳು ಗ್ರಂಥಗಳ ಸ್ಥಾಪಿಸಿದ ನಮ್ಮ ಅಲವಬೋಧರ ಭಜಿಸಿರಯ್ಯ ಶ್ರೀಪುರಂದರದಾಸರು.

೩. ನಿಶಿಕರನಂತೆ ಶೋಭಿಸುವ ಮೂವತ್ತೇಳು ರಸಪೂರಿತವಾದ ದರ್ಶನಗ್ರಂಥಗಳ ವಿರಚಿಸಿ ಶ್ರೀವಿಜಯದಾಸರು

೪. ಶೃತ್ಯರ್ಥಗ್ರಂಥ ಮೂವತ್ತೇಳು ರಚಿಸಿ ದಯದಿಂದ ನಿನ್ನವರಿಗಿತ್ತು ಪಾಲಿಸಿದೆ ಕರುಣಾಳು ಶ್ರೀಜಗನ್ನಾಥದಾಸರು

೫. ನಡುಗೇಹ ಸುತ ವಿರಚಿಸಿದ ಮೂವತ್ತೇಳು ಗ್ರಂಥವಿದು... ಶ್ರೀಪ್ರಾಣೇಶದಾಸರು

ಈ ಆಧಾರಗಳನ್ನು ಗಮನಿಸಿದಾಗ ಶ್ರೀಮದಾಚಾರ್ಯರ ಗ್ರಂಥಗಳ ಸಂಖ್ಯೆ ಮೂವತ್ತೇಳು ಎಂಬುದು ಒಂದು ಪಕ್ಷವಾದರೆ ಅಸಂಖ್ಯ ಎಂಬುದು ಮತ್ತೊಂದು ಪಕ್ಷವಾಗುತ್ತದೆ. ಈ ತೆರನಾದ ಗೊಂದಲವನ್ನು ಹೀಗೆ ಪರಿಹರಿಸಬಹುದು.

ಶ್ರೀಮದಾಚಾರ್ಯರ ಗ್ರಂಥಗಳ ಸಂಖ್ಯೆ ಸುಮಧ್ವವಿಜಯದಲ್ಲಿ ಸ್ಪಷ್ಟ ಉಲ್ಲೇಖಿಸಲ್ಪಟ್ಟಿರುವಂತೆ ಅಸಂಖ್ಯ. ಆದರೆ ಅಷ್ಟು ಅಪಾರ ಸಂಖ್ಯೆಯ ಅವುಗಳ ಅಧ್ಯಯನ ಅಧ್ಯಾಪನ ಮತ್ತು ಸಂರಕ್ಷಣೆ ಯಾರಿಗೂ ಅಶಕ್ಯ ಎಂಬುದನ್ನು ಗಮನಿಸಿ ಶ್ರೀಮದಾಚಾರ್ಯರೇ ತಮ್ಮ ಈ ಮೂವತ್ತೇಳು ಗ್ರಂಥಗಳಲ್ಲಿ ಪ್ರಾತಿನಿಧಿಕ ವಾಗುವಂತೆ ಈ ಮೂವತ್ತೇಳು 'ಸರ್ವಮೂಲ' ವೆಂಬುದಾಗಿ ಸಂರಕ್ಷಿಸಿಕೊಳ್ಳಲು ಆದೇಶನೀಡಿರಬೇಕು. ಎಂದೇ 'ಸರ್ವಮೂಲ' ವೆಂಬುದಾಗಿ ಮೂವತ್ತೇಳು ಗ್ರಂಥಗಳು ಪರಂಪರೆಯಲ್ಲಿ ಬಂದಿವೆ ಎಂದು ಭಾವಿಸಬಹುದು. ಆದರೆ ಕಾಲಕಾಲಕ್ಕೆ ಹೀಗೆ ಒಂದೆರಡು ವಾಕ್ಯ, ಶ್ಲೋಕ ಹಾಗೂ ಗ್ರಂಥಗಳು ದೊರೆತಾಗ ಅವುಗಳನ್ನು ಸ್ವೀಕರಿಸುವ ವಿಶಾಲಬುದ್ಧಿಯೂ ನಮ್ಮದಾಗಬೇಕು. ಆದರೆ 'ಸರ್ವಮೂಲ' ವೆಂದು ಹೆಸರು ಮಾತ್ರ ಈ ಮೂವತ್ತೇಳಕ್ಕೇ ಮೀಸಲು ಎಂಬ ಪ್ರಧಾನ ಅಂಶವನ್ನೂ ಸದಾ ಗಮನದಲ್ಲಿರಿಸಿಕೊಳ್ಳಬೇಕು. ಆಗ ಇವುಗಳ ಸಂಖ್ಯೆ ಪ್ರಾಮಾಣ್ಯ ಮೊದಲಾದವುಗಳ ಬಗ್ಗೆ ಯಾವ ಗೊಂದಲವೂ ಉಂಟಾಗಲಾರದು.

# ಉಪಸಂಹಾರ

ಇದಿಷ್ಟೂ ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳ ಬಗ್ಗೆ ಒಂದು ಸಂಕ್ಷಿಪ್ತವಾದ ಪರಿಚಯಮಾತ್ರ.

ಸರ್ವಮೂಲ ಎಂಬ ಹೆಸರು ಸಹ ಪ್ರಾಚೀನವೇ ಆಗಿದೆ. ನೂರಾರು ವರ್ಷಗಳ ಹಿಂದಿನ ಅನೇಕ ಸಂಗ್ರಹಗಳಲ್ಲಿ ಸರ್ವಮೂಲಾದ್ಯಂತ ಶ್ಲೋಕಸಂಗ್ರಹ ಎಂಬ ಹೆಸರಿನ ಹತ್ತಾರು ಹಸ್ತಪ್ರತಿಗಳು ದೊರೆಯುತ್ತವೆ. ನನ್ನ ಸಂಗ್ರಹದಲ್ಲೂ (ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ, ವ್ಯಾಸನಕೆರೆ) ಅಂತಹ ಅನೇಕ ಕೃತಿಗಳು ಉಪಲಬ್ಧವಿವೆ. ಅಡವಿ ಕೃಷ್ಣಾಚಾರ್ಯರ ನ್ಯಾಯಸುಧಾ ಟಿಪ್ಪಣಿಯಲ್ಲಿ ಸಪ್ತತ್ರಿಂಶತಿ ಮೂಲಗ್ರಂಥ ವಿವೃತಿಂ ಎಂಬ ಉಲ್ಲೇಖವುಂಟು.

ವೇದಗಳು, ಉಪನಿಷತ್ತುಗಳು, ರಾಮಾಯಣ, ಮಹಾಭಾರತ, ಭಗವದ್ಗೀತೆ, ಬ್ರಹ್ಮಸೂತ್ರಗಳು, ಭಾಗವತಾದಿ ಪುರಾಣಗಳು ಮೊದಲಾಗಿ ಸರ್ವ ಮೂಲಗ್ರಂಥ ಗಳನ್ನು ಕುರಿತು ಅಧಿಕೃತವಾದ ವಿವರಗಳನ್ನು ಕೊಡುವ ಗ್ರಂಥಗಳು ಎಂಬ ಕಾರಣದಿಂದಲೂ "ಸರ್ವಮೂಲ" ಎಂಬ ಹೆಸರು ಇವಕ್ಕೆ ಅತ್ಯಂತ ಉಚಿತವಾಗಿದೆ. ಈ ರೀತಿ ಸಕಲ ಮೂಲಗ್ರಂಥಗಳಿಗೂ ವ್ಯಾಖ್ಯಾನರಚಿಸಿದ ಮತ್ತೊಬ್ಬ ಮತಾ ಚಾರ್ಯರು ಇಲ್ಲವೇ ಇಲ್ಲ. ಸರ್ವ ಎಂಬುದು ವಿಷ್ಣುಸಹಸ್ರನಾಮದಲ್ಲಿ ಬಂದಿರು ವಂತೆ ಭಗವಂತನ ಹೆಸರುಗಳಲ್ಲಿ ಒಂದು. ಭಗವಂತನ ಪ್ರತಿಪಾದನೆಯೇ ಎಲ್ಲಾ ಶಾಸ್ತ್ರಗಳ ಮೂಲ ಹೃದಯ ಎಂಬ ಅರ್ಥದಲ್ಲೂ ಸರ್ವಮೂಲ ಎಂಬ ಹೆಸರು ಸಾರ್ಥಕ. ಮುಂದಿನ ಶ್ರೀಪದ್ಮನಾಭತೀರ್ಥರು, ಶ್ರೀ ಜಯತೀರ್ಥರು, ಶ್ರೀವ್ಯಾಸ ತೀರ್ಥರು, ಶ್ರೀವಾದಿರಾಜತೀರ್ಥರು, ಶ್ರೀ ರಘೂತ್ತಮತೀರ್ಥರು, ಶ್ರೀರಾಘ ವೇಂದ್ರತೀರ್ಥರು ಮೊದಲಾದ ಸಕಲ ಜ್ಞಾನಿವರೇಣ್ಯರುಗಳ ಕೃತಿಗಳಿಗೆಲ್ಲ ಮೂಲ ಭೂತ ಗ್ರಂಥಗಳು ಎಂಬ ಕಾರಣಕ್ಕೂ ಸರ್ವಮೂಲ ಎಂಬ ಹೆಸರು ಇವಕ್ಕೆ ಉಚಿತ.

ಇವುಗಳ ಅಧ್ಯಯನದಿಂದ ಭಾರತಾದಿ ಸರ್ವ ಮೂಲಗ್ರಂಥಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯ. ಇಂತಹ ಕೃತಿಶ್ರೇಣಿಯನ್ನು ಕೊಟ್ಟ ಮಹಾಚಾರ್ಯರು ಎಂಬ ಅದ್ವಿತೀಯ ಹಿರಿಮೆ ಶ್ರೀಮದಾಚಾರ್ಯರು. ಅವರ ಗ್ರಂಥಗಳ ಅಧ್ಯಯನ ನಿಜವಾದ ಅರ್ಥದಲ್ಲಿ ಬ್ರಹ್ಮಾಪರೋಕ್ಷಕ್ಕೆ ಸಾಧನ ಎಂಬುದಕ್ಕೆ ಆ ಮತದಲ್ಲಿ ಆಗಿರುವ ನೂರಾರು ಮಹಾನುಭಾವರು ಉತ್ತಮ ನಿದರ್ಶನವಾಗಿರುವರು.

ಸಮರ್ಪಿತಂ ಮಯಾಭವೇತ್ ಸುಮಧ್ವಮುಕ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಪರಿಶಿಷ್ಟ-೧

# ಶ್ರೀ ಸರ್ವಮೂಲ –ಗ್ರಂಥಗಳ ಆದ್ಯಂತ ಶ್ಲೋಕಗಳು

## ೧. ಬ್ರಹ್ಮಸೂತ್ರಭಾಷ್ಯಮ್

ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಮ್ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥

ಜ್ಞಾನಾನಂದಾದಿಭಿಃ ಸರ್ವೈರ್ಗುಣೈಃ ಪೂರ್ಣಾಯ ವಿಷ್ಣವೇ ।
ನಮೋಽಸ್ತು ಗುರವೇ ನಿತ್ಯಂ ಸರ್ವಥಾಽತಿಪ್ರಿಯಾಯ ಮೇ ॥

ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ
ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।
ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪು-
ರ್ಮಧ್ವೋ ಯತ್ತು ತೃತೀಯಕಂ ಕೃತಮಿದಂ ಭಾಷ್ಯಂ ಹರೌ ತೇನ ಹಿ ॥

ನಿತ್ಯಾನಂದೋ ಹರಿಃ ಪೂರ್ಣೋ ನಿತ್ಯದಾ ಪ್ರೀಯತಾಂ ಮಮ ।
ನಮಸ್ತಸ್ಮೈ ನಮಸ್ತಸ್ಮೈ ನಮಸ್ತಸ್ಮೈ ಚ ವಿಷ್ಣವೇ ॥

## ೨. ಅಣುಭಾಷ್ಯಮ್

ನಾರಾಯಣಂ ಗುಣೈಸ್ಸರ್ವೈರುದೀರ್ಣಂ ದೋಷವರ್ಜಿತಮ್ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥

ನಮೋ ನಮೋಽಶೇಷದೋಷದೂರಪೂರ್ಣಗುಣಾತ್ಮನೇ ।
ವಿರಿಂಚಿಶರ್ವಪೂರ್ವೇಡ್ಯವಂದ್ಯಾಯ ಶ್ರೀವರಾಯ ತೇ ॥

## ೩. ಅನುವ್ಯಾಖ್ಯಾನಮ್

ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ನಿರ್ದೋಷಮಾಪ್ಯತಮಮಪ್ಯಖಿಲೈಃ ಸುವಾಕ್ಯೈಃ ।
ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ
ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥

ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ ಜಗದ್ಗುರೂಣಾಂ ಗುರುಮಂಜಸೈವ ।
ವಿಶೇಷತೋ ಮೇ ಪರಮಾಖ್ಯವಿದ್ಯಾವ್ಯಾಖ್ಯಾಂ ಕರೋಮ್ಯನ್ವಪಿ ಚಾಹಮೇವ ॥

ನಮೋ ನಮೋಽಶೇಷವಿಶೇಷಪೂರ್ಣಗುಣೈಕಧಾಮ್ನೇ ಪುರುಷೋತ್ತಮಾಯ ।
ಭಕ್ತಾನುಕಂಪಾದತಿಶುದ್ಧಸಂವಿದ್ಧಾತ್ರೇಽನುಪಾಧಿಪ್ರಿಯಸದ್ಗುಣಾತ್ಮನೇ ॥

ಯಸ್ಯ ತ್ರೀಣ್ಯುದಿತಾನಿ......ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ||
ನಿಶ್ಶೇಷದೋಷರಹಿತ ಕಲ್ಯಾಣಾಖಿಲಸದ್ಗುಣ |
ಭೂತಿಸ್ವಯಂಭುವಶರ್ವಾದಿವಂದ್ಯಂ ತ್ವಾಂ ನೌಮಿ ಮೇ ಪ್ರಿಯಮ್ ||

## ೪. ನ್ಯಾಯವಿವರಣಮ್

ಚೇತನಾಚೇತನಜಗನ್ನಿಯಂತ್ರೇಽಶೇಷಸಂವಿದೇ |
ನಮೋ ನಾರಾಯಣಾಯಾಜಶರ್ವಶಕ್ರಾದಿವಂದಿತ ||

ಕೃತ್ವಾ ಭಾಷ್ಯಾನುಭಾಷ್ಯೇಽಹಮಪಿ ವೇದಾರ್ಥಸತ್ಪತೇಃ |
ಕೃಷ್ಣಸ್ಯ ಸೂತ್ರಾನುವ್ಯಾಖ್ಯಾಸನ್ನ್ಯಾಯವಿವೃತಿಂ ಸ್ಫುಟಮ್ ||
ಕರೋಮಿ ಮಂದಬುದ್ಧೀನಾಂ ಬುಧಾನಾಂ ಚೋಪಕಾರಿಕಾಮ್ |
ಪ್ರೀತ್ಯೈ ತಸ್ಯೈವ ದೇವಸ್ಯ ತತ್ಪ್ರಸಾದಪುರಃಸರಃ ||
ನಮೋಽಜ(ಬ್ಜ)ಭವಭೂರ್ಯಕ್ಷಪುರಃಸರಸುರಾಶ್ರಯ |
ನಾರಾಯಣಾರಣಂ ಮಹ್ಯಂ ಮಾಪತೇ ಪ್ರೇಯಸಾಂ ಪ್ರಿಯ ||

## ೫. ಗೀತಾಭಾಷ್ಯಮ್

ದೇವಂ ನಾರಾಯಣಂ ನತ್ವಾ ಸರ್ವದೋಷವಿವರ್ಜಿತಮ್ |
ಪರಿಪೂರ್ಣಂ ಗುರೂಂಶ್ಚಾನ್ ಗೀತಾರ್ಥಂ ವಕ್ಷ್ಯಾಮಿ ಲೇಶತಃ ||

ಪೂರ್ಣಾದೋಷಮಹಾವಿಷ್ಣೋರ್ಗೀತಾಮಾಶ್ರಿತ್ಯ ಲೇಶತಃ |
ನಿರೂಪಣಂ ಕೃತಂ ತೇನ ಪ್ರಿಯತಾಂ ಮೇ ಸದಾ ವಿಭುಃ ||

## ೬. ಗೀತಾತಾತ್ಪರ್ಯನಿರ್ಣಯಃ

ಸಮಸ್ತಗುಣಸಂಪೂರ್ಣಂ ಸರ್ವದೋಷವಿವರ್ಜಿತಮ್ |
ನಾರಾಯಣಂ ನಮಸ್ಕೃತ್ಯ ಗೀತಾತಾತ್ಪರ್ಯಮುಚ್ಯತೇ ||

ನಮಸ್ತೇ ವಾಸುದೇವಾಯ ಪ್ರೇಯಸಾಂ ಮೇ ಪ್ರಿಯೋತ್ತಮ |
ಸಮಸ್ತಗುಣಸಂಪೂರ್ಣನಿರ್ದೋಷಾನಂದದಾಯಿನೇ ||

## ೭. ಮಹಾಭಾರತತಾತ್ಪರ್ಯನಿರ್ಣಯಃ

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ |
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ-
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ||

